# ಪರಿವಿಡಿ

# 1. ಪ್ರಾಸ್ತಾವಿಕ: ಕಾಲ ಮತ್ತು ಹಿನ್ನೆಲೆ

ಭರತಖಂಡದಲ್ಲಿ ಸುಮಾರು ಎಲ್ಲಕ್ಕೂ ಯಾವುದಾದರೊಂದು ಬಗೆಯ ಸಂಪ್ರದಾಯ ಮೊದಲಿಂದಲೂ ನಡೆದುಕೊಂಡೇ ಬಂದಿದೆ. ಇದು ಇಲ್ಲಿನ ಒಂದು ವಿಶೇಷ ಲಕ್ಷಣ. ಜನ ನಡೆದುಕೊಳ್ಳುತ್ತಿರುವ ನಂಬಿಕೆ ವಿಶ್ವಾಸಗಳಿಂದ ಪೂರ್ತಿ ಬೇರೆಯಾಗಿ ಹೊಸ ಶಾಖೆಯೊ ಮಾರ್ಗವೊ ತೊಡಗಿದರೆ ಅವು ಪೂರ್ವಸೂರಿಗಳ ಅಥವಾ ಆಚಾರ್ಯರ ಆಲೋಚನೆಗಳಿಂದ, ನಡವಳಿಕೆಗಳಿಂದ, ಮುಂದುವರಿದಿವೆ ಎನ್ನುವುದು ರೂಢಿ. ಹೊಸದಾಗಿ ನಡೆದ ಎಲ್ಲ ಪರೀಕ್ಷಾ ಪ್ರಯೋಗಗಳಲ್ಲಿ, ದರ್ಶನಗಳಲ್ಲಿ, ಮತಧರ್ಮದಲ್ಲಿ ಕೂಡ ಹೆಚ್ಚು ಕಡಮೆ ಇದೇ ಪೂರ್ವಾಚಾರ–ಆನುವಂಶಿಕ ಎನ್ನುವುದು–ವಿಜ್ಞಾನದ್ದಲ್ಲ; ಸಂಪ್ರದಾಯದ–ಸಾಮಾನ್ಯ ಪದ. ಎಷ್ಟೋ ಮಂದಿ ಪೂರ್ವಾಚಾರ್ಯರು ಬರಿಯ ಹೆಸರಾಗಿ ಉಳಿದು, ಅವರ ಕೃತಿ ತಿಳಿಯದಾಗಿರುವುದು ನಮ್ಮ ಕಾಲಕ್ಕೆ ದೊಡ್ಡ ನಷ್ಟ. ಸಂಸ್ಕೃತಿಯ ಚರಿತ್ರೆಯಲ್ಲಿ ದೇವರ ಅಸ್ತಿತ್ವವನ್ನು ಒಪ್ಪದೆ, ಅಲ್ಲಗಳೆಯುವ ಲೋಕಾಯತ; ಚಾರ್ವಾಕ ಎಂಬ ರೀತಿ ಇದೆ. ಅವರಿಗೆ ಆತ್ಮದಲ್ಲಿ ನಂಬಿಕೆ ಇಲ್ಲ. ಪರದಲ್ಲಿ ನಂಬಿಕೆಯಿಲ್ಲ. ಅವರು ಚಾರುವಾಕರಾಗಿ ಸುಖ, ಭೋಗಗಳನ್ನು ಎತ್ತಿ ಹಿಡಿದವರು. ಅದಕ್ಕೆ ವಿರುದ್ಧವಾಗಿ, 'ಆಳ್ವಾರ'ರ ಮತ್ತು ಇತರ ದೈವಭಕ್ತರ 'ದೈವ ಮತ್ತ ಚೇತಸ'ರ ಮಾರ್ಗವಿದೆ. ಅದಕ್ಕೆ ಸಂಬಂಧಿಸಿದ ಕಲ್ಪನೆ, ಕಲಾಪ ಇವೆ. ಮೇಧಾವಿಗಳಾದ ಜನ ಪರಮತತ್ತ್ವವನ್ನು ಕುರಿತು ಯೋಚನೆ ಮಾಡಿ, ಆ ತತ್ತ್ವ 'ಏಕ' ಆಕೃತಿರಹಿತ, ಕೇವಲ, ಅದ್ವಿತೀಯ ಅಥವಾ ಹೀಗಲ್ಲ–ಹಾಗಲ್ಲ, ಎನ್ನುವಂತೆಯೊ, ನೈಯಾತ್ಮಕವಾಗಿ 'ಅದ್ವೈತ'–ಎರಡಲ್ಲದ್ದು–ಎಂದೂ ನುಡಿಯುವುದುಂಟು. ಅಲ್ಲ;–ತತ್ತ್ವಗಳು ಎರಡು. ದ್ವೈತ ಎನ್ನುವ ಪಂಥವುಂಟು. ಅಲ್ಲಿ (i) ವಿಷ್ಣು ಪಾರಮ್ಯದ್ದಿದೆ. ಅದಕ್ಕೂ ಜೀವ–ಅಜೀವ ಲೋಕಕ್ಕೆ, ಜೀವಕ್ಕೆ–ಪರಮಾತ್ಮನಿಗೆ, ತುಂಬಾ ವ್ಯತ್ಯಾಸವುಂಟು. ಉಳಿದ ಎಲ್ಲಾ ಅದಕ್ಕೆ ಅಧೀನ. (ii) ಸಾಕಾರವಾದ ನಿರ್ದಿಷ್ಟವಾದ ದೈವವುಂಟು. ಅದರದೇ ಪರಮ ಪ್ರಾಧಾನ್ಯ. ಅದೇ

ಪರತರ ಶಕ್ತಿ. ಯಾವುದೋ ಒಂದು ಶ್ರೀಶಕ್ತಿಯ ವಿಶೇಷವು. ಇನ್ನೊಂದು ಪಂಥದವರು—ಎಂದರೆ, ಅದರ ಗುರುತು ಎಂಬ ವಿಶಿಷ್ಟಾದ್ವೈತ ಮಾರ್ಗ ವಿದೆ. ಅದ್ವೈತದ್ದು ನಿರಾಕಾರ ತತ್ತ್ವ; ಇನ್ನೊಂದು ಪರಮ ದೈವ ಎಂಬ ದೇವರಿಗೆ ಒಂದು ಸ್ಪಷ್ಟ ರೂಪವನ್ನು ವರ್ಣಿಸಿ, ನಿಲ್ಲಿಸುತ್ತದೆ. ಈ ಎರಡನೆ ಬಗೆ ಅನೇಕ ಮತಪಂಥಗಳಾಗಿ ಪ್ರಬಲಿಸಿದೆ. ದೇವರಿಗೂ ಮನುಷ್ಯನಿಗೂ ಮನುಷ್ಯನಿಗೂ ಪ್ರಕೃತಿಗೂ ಇರುವ ಸಂಬಂಧವನ್ನು ಬಗೆಬಗೆಯಾಗಿ, ವಿಸ್ತಾರವಾಗಿ ವರ್ಣಿಸಿದೆ. ಮನುಷ್ಯನ ಗತಿ, ಗಮ್ಯ ಏನೆಂಬುದನ್ನು ವರ್ಣಿಸುತ್ತದೆ. ಇನ್ನೊಂದು ಕಡೆ ಆಸ್ತಿಕರು ಅಸಾಂಪ್ರದಾಯಕವೆನ್ನುವ ಬೌದ್ಧ, ಜೈನ ಪಂಥಗಳುಂಟು. ಬೌದ್ಧ ಪಂಥ ಯಾವ ಘನ ತತ್ತ್ವವನ್ನೂ ದೇವರೆಂದಾಗಲೀ ಮನುಷ್ಯನ ಪುರುಷನ್ನಾಗಲಿ, ಗಟ್ಟಿ ಪದಾರ್ಥವಾವು ದನ್ನೇ ಆಗಲಿ ಒಪ್ಪದು. ಜೀವ ಅದರ ದೃಷ್ಟಿಯಲ್ಲಿ ಸಂತತವಾಗಿ ಹರಿಯುವ ಒಂದು ನದಿ. ಅದರಲ್ಲಿರುವುದು ನಿರಂತರ ವ್ಯತ್ಯಾಸ, ಚಲನೆ, ಬದಲಾವಣೆ. ಕರ್ಮದಿಂದ ಬಿಡುಗಡೆ ಹೊಂದಿ ನಿರ್ವಾಣ ಪಡೆಯಬೇಕು ಎಂಬುದು ಅವರ ಮಾತು. ಜೈನಧರ್ಮ ಜೀವ ಪುದ್ಗಲ ಎಂಬ ವ್ಯತ್ಯಾಸ ಒಪ್ಪಿ ಅವುಗಳ ಪ್ರಕಾರಗಳನ್ನು, ರೂಪಗಳನ್ನು ನಾನಾ ರೀತಿ ಒಕ್ಕಣಿಸುತ್ತದೆ. ಎಷ್ಟು ಜೀವಗಳು ಇವೆಯೊ, ಅಷ್ಟಕ್ಕೂ ಕಡೆಗೆ ಪ್ರತ್ಯೇಕ ಸಿದ್ಧಿ ಉಂಟು—ಎಂಬ ಅನೇಕಾಂತವಾದ ಅದು. ಈ ಪ್ರತಿಯೊಂದು ಪಂಥಕ್ಕೂ, ಗುರುವರ್ಗ, ಮಠ ಇವೆ. ವಿದ್ಯಾ ಅಧಿಕಾರ ಪೀಠಗಳಿವೆ. ತತ್ತ್ವಪ್ರಸಾರ, ಕ್ರಿಯಾಕಲಾಪ ಲಾಂಛನ, ಆಚಾರಗಳ ಬೇರ್ಪಾಡುಗಳಿವೆ.

ಒಂದು ದೈವದ ಪಾರಮ್ಯವನ್ನು ಒಪ್ಪುವ ಪಂಥಗಳಲ್ಲಿ ಸ್ಥೂಲವಾಗಿ ಮೂರು ವಿಭೇದಗಳುಂಟು. ಶೈವ, ವೈಷ್ಣವ, ಶಾಕ್ತ. ಶೈವ ವೈಷ್ಣವ ಗಳಷ್ಟು ಶಾಕ್ತ ಇಂದು ಪ್ರಬಲವಾಗಿಲ್ಲ. ಶೈವ ವೈಷ್ಣವ ಪಂಥಗಳು ಸುಮಾರು ಅತಿ ಮೊದಲ ಕಾಲದಿಂದ ಈವರೆಗೂ ನಡೆದುಬಂದವು. ಎರಡೂ ವೇದಗಳನ್ನು ಆಧಾರಗ್ರಂಥಗಳಾಗಿಯೂ ಪ್ರಮಾಣಗ್ರಂಥಗಳಾಗಿಯೂ ಸ್ವೀಕರಿಸುತ್ತವೆ. ರುದ್ರ—ಶಿವ ಕಲ್ಪನೆ ಹೇಗಿದೆಯೋ ಹಾಗೆಯೇ ವಿಷ್ಣು—ನಾರಾಯಣ ಕಲ್ಪನೆಯೂ ಋಗ್ವೇದದ ಕಾಲದಿಂದಲೂ ಬೆಳೆದುಬಂದದ್ದೇ. ರುದ್ರ ಒಂದು ಕಡೆ ಮರುತರಲ್ಲಿ ಒಬ್ಬ ದೇವತೆ, ಭಯಂಕರನೂ ಹೌದು.

ರ–ದ–ರ ಅಕ್ಷರಗಳೇ ಅದನ್ನು ತೋರಿಸುವಂತಿದೆ. 'ಶಿವ' ಎಂದರೆ ಶುಭಕರ; ಮಂಗಳದಾಯಕ. ಈ ಎರಡೂ ಪ್ರಕಾರಗಳಲ್ಲಿಯೂ ಶಿವಸಾಧನೆ ಭರತಖಂಡದಲ್ಲಿ ಕಾರ್ಯಕಾರಿಯಾಗಿ ಆಚರಣೆಯಲ್ಲಿರುವ ಮತಪಂಥ.

ನಾರಾಯಣ ಕಲ್ಪನೆ ಸೃಷ್ಟಿಯ ಆದಿಯಲ್ಲಿನ 'ಅಪ್' ಅಥವಾ ಜಲ ಶಕ್ತಿಗೆ ಸಂಬಂಧಿಸಿದ ದೇವತೆಯಾದರೆ, ವಿಷ್ಣು ಸೂರ್ಯನಿಗೆ ಸಂಬಂಧಿಸಿದ ದೇವತೆ. ಈ ಎರಡು ಪಂಥಗಳಲ್ಲಿಯೂ, ಭಾರತದ ಉತ್ತರ–ದಕ್ಷಿಣ ಮೇಧಾವಿತೆ ಆಚಾರ ವಿಚಾರಗಳಲ್ಲಿ ವ್ಯತ್ಯಾಸವುಂಟು. ಎರಡು ಪಂಥಗಳಿಗೆ ಸಂಬಂಧಿಸಿದಂತೆಯೂ ಭರತಖಂಡದ ಎಲ್ಲ ಭಾಗಗಳಲ್ಲಿಯೂ ತೀರ್ಥ, ಕ್ಷೇತ್ರ, ಗುರು, ಸ್ಥಾನ, ಪೀಠಗಳಿವೆ. ಈ ಎರಡು ಪಂಥಗಳಿಗೆ ನಡುವಿನ ಹೋರಾಟಗಳೂ ಮೊದಲಿಂದಲೂ ಅನೇಕ ಕರ್ಕಶ ವಿರಸಗಳುಂಟು. ತರ್ಕ ವಿಚಾರದಲ್ಲಿ ಹೇಗೊ ಸಮಾಜ ವ್ಯವಸ್ಥೆ ನಿಲವು (attitude) ಗಳಲ್ಲಿಯೂ ವೈಷಮ್ಯ ಬೆಳೆದಿದೆ. ಅವುಗಳ ನಡುವೆ ಬೆಳೆದ ಕೋಟಲೆ (strife) ಪವಿತ್ರತೆಯ ವಿಷಯದಲ್ಲಿಯೂ ನಾನು ಮೇಲು, ತಾನು ಮೇಲು ಎಂಬಂಶದಲ್ಲಿಯೂ ಸರ್ವಪಾರಮ್ಯ ಶಿವನಿಗೆ? ವಿಷ್ಣುವಿಗೆ? ಎಂಬಂಶದಲ್ಲಿಯೂ ಇಬ್ಬರ ನಡುವೆಯ ವಿರಸ ಬಿಗಿದು ಕಟ್ಟಿದೆ. ಶತಮಾನಗಳು ಕಳೆದ ಹಾಗೆ ಇವುಗಳಲ್ಲಿ ಒಂದೊಂದೂ ತನಗೆ ಪುಷ್ಟಿ ಶಕ್ತಿ ಬರುವಂತೆ ಹೊರಗಿನ ಎಷ್ಟೊ ಅಂಶಗಳನ್ನೂ, ಆಚಾರ ವ್ಯವಹಾರಗಳನ್ನೂ ಸ್ವೀಕರಿಸಿರುವುದುಂಟು. ಶೈವದ್ದು ಶಾಕ್ತದಿಂದ, ಪುರಾತನ ಯೋಗದಿಂದ ಇಂಥ ಶಕ್ತಿಯನ್ನು ಪಡೆದಿದ್ದರೆ " ವೈಷ್ಣವವು ಇಂದ್ರ ಮತ್ತು ಕೃಷ್ಣನ ಇತಿಹಾಸ ಪುರಾಣಗಳಿಂದ ಪುಷ್ಟಿಗೊಂಡಿದೆ. ಎರಡರಲ್ಲೂ ಅವತಾರದ ಕತೆಗಳಿವೆ. ವಿಷ್ಣುವಿನದು ಪ್ರಧಾನವಾಗಿ ಹತ್ತು ಅವತಾರಗಳೆಂದರೆ ಶಿವನವು 25 ಲೀಲೆಗಳು. ಬಾಳಲ್ಲಿ, ಸಮಾಜ ಜೀವನದಲ್ಲಿ ಬುದ್ಧಿಯ ನೆಲಸುಗಳಲ್ಲಿ ಅವು ಹೇಗೆ ಬೇರೆ ಬೇರೆಯೊ ಹಾಗೆಯೇ ಜೀವನದ ಪರಮಗತಿ ಮತ್ತು ಸಿದ್ಧಿಯ ವಿಚಾರವನ್ನು ವರ್ಣಿಸುವಾಗಲೂ ಪ್ರತ್ಯೇಕತೆಯನ್ನೋ ವಿಶೇಷತೆಯನ್ನೋ ಉಳಿಸಿಕೊಂಡಿವೆ. ಶೈವರದು ಪರಂಧಾಮ, ಕೈಲಾಸ ಅಥವಾ ಕೈವಲ್ಯ. ವೈಷ್ಣವರದು ವೈಕುಂಠ. ಈ ಎರಡಕ್ಕೂ ನಡುವೆ ವ್ಯಾಪಾರ, ವ್ಯವಹಾರವಿಲ್ಲ; ಎಂದಿಗೂ. ಬದುಕಿನಲ್ಲಿ ಭೂಮಿಯ ಮೇಲೆ ಹೇಗೊ ಸ್ವರ್ಗದಲ್ಲಿಯೂ ಮುಕ್ತಿಸ್ಥಿತಿ

ಯಲ್ಲಿಯೂ ಹಾಗೇ. ಅವು ಪ್ರತ್ಯೇಕ;—ಲೋಕಗಳೇ ಬೇರೆ ಬೇರೆ. ಈ ಎರಡೂ ಪಂಥಗಳ ಶ್ರದ್ಧೆ ವಿಶ್ವಾಸ ಆಚಾರ ಕರ್ನಾಟಕದಲ್ಲಿ 'ಯುಗ ಯುಗಾಂತರ'ಗಳಿಂದ ನಡೆದುಕೊಂಡು ಬಂದಿವೆ. ಪರಸ್ಪರವಾಗಿ ಸುರಸವಾಗಿ ನಡೆದುಕೊಳ್ಳಲು ಯತ್ನವೇನೊ ನಡೆದಿದೆ. ತತ್ವಭಾಗದಲ್ಲಿ ಹೇಗೇ ಇರಲಿ, ಆಚಾರದಲ್ಲಿ ಸಾಮಾಜಿಕ ಸಂಬಂಧಗಳಲ್ಲಿನ ವ್ಯತ್ಯಾಸಗಳನ್ನು ಕೆಲವು ಸ್ಮಾರ್ತ ಮಾಧ್ವ ಪಂಗಡಗಳು ಹೊಂದಿಸಿಕೊಂಡಿವೆ. ವೈಷಮ್ಯಗಳನ್ನು ಕಡಮೆ ಮಾಡಲು ಹೆಣಗಿವೆ. ಈ ಪ್ರತಿಯೊಂದು ಭಾಗಗಳಲ್ಲಿಯೂ ಕರ್ನಾಟಕದಲ್ಲಿ ಉತ್ತಮವಾದ ಕೆಲವು ಮಾದರಿಗಳನ್ನು ಕಾಣಬಹುದು. ಶ್ರೀವೈಷ್ಣವ ಒಡಂಬಡಿಕೆಗೆ ಒಪ್ಪಿಲ್ಲ.

12ನೆಯ ಶತಮಾನದ ಹೊತ್ತಿಗೆ ಭಕ್ತಿಪಂಥಗಳಿಗೆಲ್ಲ ಒಂದು ನವ ವಸಂತ ಕಾಲ ಅರಳಿ ಬಂತು. ಇಂದಿನ ಬೀದರ್ ಜಿಲ್ಲೆಯಲ್ಲಿರುವ ಕಲ್ಯಾಣದಲ್ಲಿ ಬಸವೇಶ್ವರರ ನಾಯಕತ್ವದಲ್ಲಿ ವೀರಶೈವ ಪಂಥವೆಂಬ ಒಂದು ಸುಧಾರಕ ಭಕ್ತಿ ಚಳವಳಿ, ಮಾರ್ಗ ಜೀವಗೊಂಡು ಪ್ರಬಲಿಸಿ ಆ ಚೈತನ್ಯ ಜನಪ್ರಿಯವಾಯಿತು. ಸಕಲ ಜನವರ್ಗಗಳ ಉತ್ಸಾಹಗಳನ್ನು ಕೆರಳಿಸಿ ಸುಧಾರಣಾಮುಖವಾಗಿ, ಸಾಂಪ್ರದಾಯಿಕ ಆಚಾರಗಳಿಗೆ ಒಂದು ಬಗೆಯ ಪ್ರತಿಭಟನೆ ನಡೆಸಿತು. ಗಂಡಸರು, ಹೆಂಗಸರು ಸಮಾನವಾಗಿ ಅದಕ್ಕೆ ಸೇರಿಕೊಂಡರು. ಎಲ್ಲ ಜಾತಿ ವರ್ಗಗಳವರು, ಕಸಬುಗಳವರು ಸಮಾನ; ಮನುಷ್ಯ ಯಾವ ವ್ಯತ್ಯಾಸವನ್ನೂ ಇಟ್ಟುಕೊಳ್ಳತಕ್ಕದ್ದಲ್ಲವೆಂದು ಸಾರಿಕೆಯಾಯಿತು. ಈ ಹೊಸ ಪಂಥಕ್ಕೆ ಸೇರಿದವರಿಗೆ ಶಿವ ತಂದೆ; ಪಾರ್ವತಿ ಅಥವಾ ಶಕ್ತಿ ತಾಯಿ. ಇವರು ಮಾತ್ರವೇ ದೇವತೆಗಳು. ಇದು ಸಾರವತ್ತಾಗಿ ಮತದ ಆಚಾರಗಳನ್ನು ಹೆಚ್ಚು ಸುಲಭ ಮಾಡಿತು. ಬದುಕನ್ನು ಸಂಪೂರ್ಣವಾಗಿ ಅರ್ಪಣೆ ಮಾಡಿಕೊಂಡು ಭಕ್ತಿಯಿಂದ ಶಿವನನ್ನು ಜನ ಸಮೀಪಿಸಬಹುದು. ಶಿವ ಅಂಥ ಜೀವಗಳನ್ನು ಸ್ವೀಕರಿಸುತ್ತಾನೆ. ಶಿವೈಕ್ಯ ಸುಲಭ ಎಂದು ಅದರ ಸಂತವರ್ಗದಲ್ಲಿ, ಕ್ರಿಯೆಗೆ, ಜ್ಞಾನಕ್ಕೆ, ವೈರಾಗ್ಯಕ್ಕೆ ಬೆಲೆಕೊಟ್ಟು ಅವನ್ನು ಒತ್ತಿ ನುಡಿದರು. ಆದರೂ ಆ ಪಂಥದ ಪ್ರಧಾನ ಲಕ್ಷಣವೇನೊ 'ಭಕ್ತಿ'. ಭಕ್ತಿ ನಿಜವಾದುದಾದರೆ, ಗಾಢವಾದುದಾದರೆ ಶಿವನ ಹೃದಯ ನಿಜವಾಗಿ ಭಕ್ತನ ಕಡೆಗಾಗುತ್ತದೆ. ಅವನ ಪ್ರಸಾದವನ್ನೊ ಕೃಪೆಯನ್ನೊ

ಖಂಡಿತ ಪಡೆಯಬಹುದು. ಈ ಮಾರ್ಗ ಅದ್ವೈತ ಮಾರ್ಗಕ್ಕಿಂತ ಹೆಚ್ಚು ಸುಲಭಗ್ರಾಹಿ. ನೇರವಾಗಿ ಹೃದಯವನ್ನು ಹೊಕ್ಕತಕ್ಕದ್ದು; ನಿರ್ದಿಷ್ಟವಾದ್ದು. ಜೈನ ಪಂಥದ ಶ್ರಮಣಾದಿ ಜೀವನದಲ್ಲಿನ ತೊಡಕು, ಕಷ್ಟ, ಗಹನತೆ ಕರ್ಮದ ಭೀಕರತೆ ಇಲ್ಲಿ ಇಲ್ಲ. ವೀರಶೈವರು ಜನರ ಆಡುಮಾತಿನಲ್ಲಿ ತಮ್ಮ ಮನಸ್ಸನ್ನು ತಿಳಿಸಲು ತೊಡಗಿದರು. ಅವರ ವಿಶೇಷ ರಚನೆ 'ವಚನಗಳು' ಎಂಬುದು. ಅದೊಂದು ಹೊಸಬಗೆಯ ಸಾಹಿತ್ಯ ಪ್ರಕಾರವಾಗಿ ಮೆರೆಯಿತು. ಅಲ್ಲಿನ ಗದ್ಯ ಸಂಪನ್ನವಾದ್ದು, ಲಯಗಾನ ಉಳ್ಳದ್ದು, ಆಳವಾದ ಹೃದ್ಭಾವವನ್ನೊಳಗೊಂಡದ್ದು. ನುಡಿಯುವವರ ಅತಿ ಪ್ರಾಮಾಣಿಕ, ಅತ್ಯುನ್ನತ, ಅನುಭವಗಳನ್ನು ಆಕಾಂಕ್ಷೆಗಳನ್ನು ನಿವೇದನೆ ಮಾಡಿಕೊಂಡುದು. ಮುಂದಿನ ಕಾಲದಲ್ಲಿ ಬರೆದವರು ರಗಳೆ, ಷಟ್ಪದಿ, ಅನುಭವ ಗೀತಗಳು ಮುಂತಾದ ಇತರ ದೇಸಿ ಛಂದಸ್ಸುಗಳನ್ನು ಬಳಸಿದರು. ಶ್ರುತಿ, ಸ್ಮೃತಿಗಳ ಪಾರಮ್ಯವನ್ನು, ಯಜ್ಞ ಯಾಗಾದಿಕರ್ಮ ಕಾಂಡವನ್ನು ವೀರಶೈವವರ್ಗ ಸಮಾಜ, ಸುಧಾರಿತ ಶೈವ ಸಂಪ್ರದಾಯ ನಿರಸನ ಮಾಡಿತು. ಆದುದರಿಂದ ಸಮಾಜದ ವರ್ಣಾಶ್ರಮಧರ್ಮ ವ್ಯವಸ್ಥೆಯನ್ನೂ ವರ್ಗವಿಂಗಡನೆಯನ್ನೂ ಮಾಡಿತು. ಆವರೆಗೂ ಬಳಕೆಯಲ್ಲಿದ್ದ ಎಷ್ಟೋ ವಿಧಿ ನಿಷೇಧಗಳನ್ನು ತಳ್ಳಿಹಾಕಿತು. ಹುಟ್ಟು ಸಾವುಗಳ 'ಸೂತಕ' ಮೈಲಿಗೆಗಳೆಂದು ಎಣಿಸುತ್ತಿದ್ದ ಭಾವನೆ ರದ್ದಾದವು. ಹೆಣ್ಣು ಮಕ್ಕಳ ತಿಂಗಳ ಮೈಲಿಗೆ ಕೂಡ ಎಣಿಸತಕ್ಕದ್ದಲ್ಲವೆಂದಾಯಿತು. ವಚನಕಾರರು ಕನ್ನಡ ಭಾಷೆಯನ್ನು ಬಳಸಿದರು. ವೀರಶೈವ ಜನಾಂಗ ಗಟ್ಟಿಯಾದ ಒಂದು ಕೋನು. ಅವರ ಗುರುವರ್ಗ ಜಂಗಮವರ್ಗದಲ್ಲಿ ಅವರೊಪ್ಪಿಕೊಂಡ ತತ್ತ್ವಗಳಲ್ಲಿ ಆಚಾರಗಳಲ್ಲಿ ಸಾಮುದಾಯಿಕವಾದ ಒಂದು ಬಿಗಿಕಟ್ಟು ಏರ್ಪಟ್ಟು ಅದರದೇ ಒಂದು ವಿಶೇಷ ಲಕ್ಷಣವಾಯಿತು. ದೇವಸ್ಥಾನಗಳಲ್ಲಿ ಪೂಜೆಮಾಡುವುದು ಎಂಬುದನ್ನಾಗಲಿ, ಸ್ಥಾವರ ಲಿಂಗ ಪೂಜೆಯಾಗಲಿ ಅವರಿಗೆ ಸ್ವೀಕೃತವಾಗಲಿಲ್ಲ. ಮೊದಲು ದೀಕ್ಷೆ ಪಡೆವಾಗ ಗುರುವಿನ ನಿರ್ದೇಶದಂತೆ ಪ್ರತಿಯೊಬ್ಬ ವೀರಶೈವನಿಗೂ ಒಂದು ಇಷ್ಟ ಲಿಂಗ ದೊರೆಯುತ್ತಿತ್ತು. ಅದನ್ನು ತನ್ನ ಕೊರಳಲ್ಲಿಯೇ ಸದಾ ಧರಿಸ ತಕ್ಕದ್ದು. ದಿನಾ ಅದಕ್ಕೆ ಪೂಜೆ ಅರ್ಪಿಸತಕ್ಕದ್ದು. ತೀರ್ಥಕ್ಷೇತ್ರಗಳಲ್ಲಿ,

ದೇವಸ್ಥಾನಗಳಲ್ಲಿ ಪೂಜೆ, ಅರ್ಚನೆ ನಡೆಸುವ ಅಗತ್ಯವಿಲ್ಲವೆಂದರು. ಉತ್ತರದಿಂದ, ಕಾಶ್ಮೀರ, ಗುಜರಾತುಗಳಲ್ಲಿ ಶೈವ ಪಂಥದ ನಾಯಕರು ಇಲ್ಲಿಗೆ ಬಂದು ಸೇರಿಕೊಂಡರು. ನಾಥಪಂಥದ ಕೆಲವು ಆಚರಣೆಗಳೂ ಸೇರಿಕೊಂಡವು, ದಕ್ಷಿಣದಿಂದ ಶೈವ ಸಿದ್ಧಾಂತದ ಮತ್ತು ನಾಯನ್ಮಾರರ, ಪೆರಿಯಪುರಾಣದ ಪ್ರಭಾವ ಅದರೊಳಕ್ಕೆ ಹರಿದುಬಂದು ಅಲ್ಲಿನ ಸಾಧು ಸಂತರ ಮಂಡಲ ಇವರಿಗೆ ಗಣ್ಯವಾಯಿತು. ಇವೊತ್ತಿನವರೆಗೂ ಈ ಶೈವ ಪಂಥ ತನ್ನ ಅಖಂಡತೆಯನ್ನು ಉಳಿಸಿಕೊಂಡು ಬಂದಿದೆ. ಅದರ ಚಾರಿತ್ರ್ಯ, ಲಕ್ಷಣ, ಅದರ ಬಗೆಯ ಶಿವಭಕ್ತಿ ಒಂದು ಜೀವಂತ ಶಕ್ತಿಯಾಗಿ ಉಳಿದಿದೆ. ಕೆಲವು ಸಂಗತಿಗಳು ಘನಿಸಿ, ಅದರ ಒಕ್ಕಟ್ಟಿಗೆ ಗಡುಸಾದ ಒಂದು ಅಂಶವನ್ನು ಸೇರಿಸಿದೆ ನಿಜ. ಅಂಥಲ್ಲೆಲ್ಲ ಸಾಮಾನ್ಯವಾಗಿ ಕಾಣುವ ತೀವ್ರವಾದ ಒಂದು ರಾಗಭರ ಆ ಪಂಥವನ್ನು, ಪಂಥದವರನ್ನೂ, ಅವರ ಅಭಿಮಾನಿಗಳನ್ನೂ ನಡೆಸಿದೆ. ಪ್ರತಿಯೊಬ್ಬರೂ ಕಾಯಕದಿಂದ ಬದುಕನ್ನು ನಡಸಬೇಕೆಂಬ ಅಭಿಮಾನವನ್ನು ಪ್ರೋತ್ಸಾಹಿಸಿದೆ.

ವೈಷ್ಣವ ಸಂಪ್ರದಾಯವೂ ಸುಮಾರು ಹೀಗೇ, ಭಾಗವತ ಪಾಂಚರಾತ್ರ ಆಗಮಗಳಿಂದ ಶಕ್ತಿ ಸ್ಫೂರ್ತಿಗಳನ್ನು ಪಡೆದುದು. ಅವತಾರ ಕತೆಗಳಲ್ಲಿಯೂ ಕೃಷ್ಣ–ರಾಮ ಮುಂತಾದ ಅವತಾರ ಪುರುಷರ ಇತಿಹಾಸ ಪುರಾಣ ಸನ್ನಿವೇಶಗಳಿಂದಲೂ ಪುಷ್ಟಿಗೊಂಡಿದೆ. ವೈಷ್ಣವ ಪುರಾಣಗಳ ಅನೇಕ ಮಂದಿ ನಾಯಕರು ತಮ್ಮ ಕಾಲದಲ್ಲಿ ಅಥವಾ ಪ್ರಪಂಚದಲ್ಲಿ ದಿವ್ಯಜ್ಯೋತಿಗಳಂತೆ ಆದರ್ಶಪುರುಷರಂತೆ ಇದ್ದರು. ನಾರದ, ಭೀಷ್ಮ, ಪ್ರಹ್ಲಾದ, ಕೃಷ್ಣ ಇವರ ಕತೆಗಳು ವೈಷ್ಣವ ಚಳವಳಿಯ ಬೆಳವಣಿಗೆಯಲ್ಲಿ ಬಹು ಮುಖ್ಯ ಪಾತ್ರವನ್ನು ವಹಿಸಿವೆ. ಶೈವರಿಗೆ ಶೈವಪುರಾಣಗಳು ಹೇಗೊ ವೈಷ್ಣವರಿಗೆ ವಿಷ್ಣು ಪುರಾಣಗಳು ಹಾಗೆ. ನಾಯಕಪ್ರಪಂಚವನ್ನು, ಸಂತವರ್ಗವನ್ನೂ, ಆಚಾರವಿಚಾರಗಳನ್ನು ಸ್ಫೂರ್ತಿಯನ್ನು ಒದಗಿಸಿದೆ. ಈ ಪಂಥಕ್ಕೆ ಭಗವದ್ಗೀತೆಯ ಭಾಗವತದ ಸಾರಪೋಷಣೆ ಇದೆ. ಇದು ಬಂಗಳ, ಒರಿಸ್ಸಾ, ಮಥುರಾ ಬೃಂದಾವನ, ದ್ವಾರಕ ಮುಂತಾದ ಉತ್ತರ ಪ್ರದೇಶಗಳಲ್ಲಿ ಪ್ರಬಲಿಸಿವೆ. ವೈಷ್ಣವ ಪ್ರಕಾರಗಳೂ ರಂಗುರಂಚನೆಯನ್ನು ಒದಗಿಸಿದೆ. ಇದರೊಳಕ್ಕೆ ಆಮೇಲೆ ರಾಧೆಯ ಕಥೆ, ಗೋಪಿಯರ ಕಥೆ ಸೇರಿಕೊಂಡವು.

ದಕ್ಷಿಣದ ವೈಷ್ಣವರಲ್ಲಿ ಆಳ್ವಾರರ ಚರಿತ್ರೆ ಗುಣಾಂಶ, ಜೀವಾಂಶ ಆಯಿತು. ಆ ಹೆಸರು ತಿಳಿಸುವಂತೆಯೇ ಅವರು ದೈವ ಪ್ರೀತಿಯಲ್ಲಿ ಮುಳುಗಿದವರು. 4000 ಕವನಗಳುಳ್ಳ ಅವರ (ನಾಲಾಯಿರ) ಪ್ರಬಂಧ ಈ ಶಾಖೆಯ ಮೂಲ ಗ್ರಂಥ. ಅವರ ಆರಾಧನೆಯ ದೇವತೆಗಳೂ, ಪವಿತ್ರ ಕ್ಷೇತ್ರಗಳಲ್ಲಿ, ಉತ್ತರ ಹಾಗೂ ದಕ್ಷಿಣ ಭಾರತದಲ್ಲಿ ಹರಡಿವೆ.

ಬಸವೇಶ್ವರನೂ, ವಚನಕಾರರೂ, ಶೈವ ಭಕ್ತಿಪಂಥವನ್ನು ಪ್ರಚಾರ ಮಾಡಿದರೆ, ರಾಮಾನುಜಾಚಾರ್ಯರೂ, ಮಧ್ವಾಚಾರ್ಯರೂ ಎರಡು ಬೇರೆಬೇರೆ ವೈಷ್ಣವ ಶಾಖೆಗಳನ್ನು ದಕ್ಷಿಣದಲ್ಲಿ ಪ್ರಚಾರಕ್ಕೆ ತಂದರು. ಇಬ್ಬರೂ ಕರ್ನಾಟಕದಲ್ಲಿ ತಮ್ಮ ಪ್ರಭಾವವನ್ನೂ, ಪ್ರಚಾರವನ್ನೂ ನಟ್ಟು, ಪೋಷಿಸಿ, ಸಾಧಿಸಿ ಪೀಠಗಳನ್ನು ಸ್ಥಾಪಿಸಿದರು. ರಾಮಾನುಜರು (ಸು. 1100) ಪರವಾದಿಗಳ ಪೀಡೆಯನ್ನು ತಪ್ಪಿಸಿಕೊಂಡು ಕಂಚಿ, ಶ್ರೀರಂಗ ಗಳಿಂದ, ಕರ್ನಾಟಕದಲ್ಲಿ, ಮೇಲುಕೋಟೆ, ಬೇಲೂರು, ಮುಂತಾದಲ್ಲಿಗೆ ಬಂದು ಶಾಂತಿಯನ್ನೂ ಸುರಕ್ಷಣೆಯನ್ನೂ ಪಡೆದರು. ಜನವರ್ಗದಲ್ಲಿ ಬಹು ಮಂದಿ ವಿಶಿಷ್ಟಾದ್ವೈತ ಪಂಥಕ್ಕೆ ಮತಾಂತರಗೊಂಡರು.

ರಾಮಾನುಜರ ವೈಷ್ಣವ ಪಂಥವು ಎಲ್ಲರಿಗೂ ತೆರೆದುದು. ವೀರಶೈವ ಪಂಥದಂತೆಯೇ. ಹಿಂದಿನಿಂದ ನಡೆದುಬಂದ ಸಾಮಾಜಿಕ ವ್ಯವಸ್ಥೆ— ಎಂದರೆ ಶ್ರುತಿ ಸ್ಮೃತಿಗಳ ಸಂಪ್ರದಾಯ—ಅವರಿಗೂ ಹೆಚ್ಚು ಮುಖ್ಯವಾಗಿ ಕಾಣಲಿಲ್ಲ. ಭಕ್ತಿ ಪ್ರಪತ್ತಿ (ಶರಣಾಗತಿ) ಎರಡನ್ನೂ ಅವರು ಒಪ್ಪಿ ಕೊಂಡು, ಪೂರ್ತಿಯಾಗಿ ಆತ್ಮಾರ್ಪಣೆ ಮಾಡಿಕೊಂಡವನಿಗೆ ತಾಯಕೃಪೆ ಯಿಂದ ವಿಷ್ಣುವಿನ 'ಅರುಳ್' (ಕೃಪೆ) ದೊರೆಯಬಲ್ಲದು; ಮೋಕ್ಷ ಸಿಕ್ಕುತ್ತದೆ ಎಂಬುದು ಅವರ ವಾದ.

ಪೂರ್ವಾಚಾರ ಸಂಪ್ರದಾಯಸ್ಥರೆಲ್ಲರಿಗೂ—ಸಮಾಜಪದ್ಧತಿಗಳನ್ನು ಹೊರಗು ಮಾಡಿದ ಸರ್ವರಿಗೂ ಸಮಾನವಾಗಿ ತೆರೆದ—ಈ ಪಂಥ ಒಪ್ಪಲಿಲ್ಲ. ವೀರಶೈವ ಪಂಥದಲ್ಲಿಗಿಂತಲೂ ಆಕಾಂಕ್ಷೆಯಲ್ಲಿ, ವಿಸ್ತಾರದಲ್ಲಿ, ನುಗ್ಗಿನಲ್ಲಿ ಇದು ಹೆಚ್ಚು ಮೃದುವಾಗಿತ್ತು ಎಂಬುದರಲ್ಲಿ ಸಂದೇಹವಿಲ್ಲ. ಆದರೂ ಸ್ಮೃತಿಯ ಶಾಸನ ನಿರ್ದೇಶನಗಳನ್ನು ಅನುಸರಿಸಬೇಕಾದ್ದಿಲ್ಲ ಎಂಬ ಸಂಗತಿ ಹಿಂದೂ (ವೈದಿಕ) ಪಂಗಡದ ಅನೇಕರಿಗೆ ಒಪ್ಪದಾಯಿತು. ಅವರಲ್ಲಿ

ವ್ಯಗ್ರತೆಯನ್ನುಂಟುಮಾಡಿತು. 'ಆಳ್ವಾರ್' ಪಂಥದಲ್ಲಿ ದಕ್ಷಿಣದ ವೈಷ್ಣವ ಪ್ರಭಾವ ಬಹುಮಟ್ಟಿಗೆ ರೂಪುಗೊಂಡಿತು. ಉತ್ತರದ ಶ್ರೀವೈಷ್ಣವರಲ್ಲಿ ವೇದಕ್ಕೂ, ಧರ್ಮಶಾಸ್ತ್ರಗಳಿಗೂ ಹೆಚ್ಚಿನ ಪ್ರಾಧಾನ್ಯ ಪಕ್ಷಪಾತ * ಇದೆ.

ಶೈವ ಧರ್ಮದಲ್ಲಿಯೂ, ಮಾಧ್ವ ಸಂಪ್ರದಾಯದಲ್ಲಿಯೂ ಇತರ ದೇವತೆಗಳಿಗೂ, ಪ್ರಧಾನ ದೇವತೆಗಳಿಗೂ ಇರುವ ವ್ಯತ್ಯಾಸಗಳಿಗಿಂತ ನಾರಾಯಣನ ಸುತ್ತ ಇರುವ ದೇವಗಣದ ನಡುವೆಯೂ ಅಲ್ಲಿ ರಾಮಾನುಜ ಪಂಥೀಯರು

---

* ಇಲ್ಲಿಯೂ ಎರಡು ಶಾಖೆಗಳು ಹುಟ್ಟಿಕೊಂಡವು. ವಡಗಲೆ, ತೆಂಕಲೆ, (ಉತ್ತರದ್ದು–ದಕ್ಷಿಣದ್ದು) ಎಂಬವು. ಈ ಎರಡರಲ್ಲಿಯೂ ದೇವರ ವಾತ್ಸಲ್ಯ ತಾಯ ವಾತ್ಸಲ್ಯದಂತೆಯೇ ಇರುತ್ತದೆ ಎನ್ನುತ್ತಾರೆ. ಅವರು ಕೊಡುವ ಹೋಲಿಕೆಗಳಲ್ಲಿ ಒಂದು ವ್ಯತ್ಯಾಸವಿದೆ. ಒಂದರಲ್ಲಿ ತಾಯಿಕಪಿ–ಮರಿಕಪಿ ಇವುಗಳಿಗಿರುವ ಸಂಬಂಧ ದೇವರಿಗೂ ಮನುಷ್ಯನಿಗೂ; ಇನ್ನೊಂದರಲ್ಲಿ, ಬೆಕ್ಕು–ಬೆಕ್ಕಿನಮರಿ ನಡುವೆ ಇರುವ ಸಂಬಂಧ. ಈ ವ್ಯತ್ಯಾಸ ಇವುಗಳ ನಿಲವುಗಳಲ್ಲಿ ವಿಶಿಷ್ಟ ಸಂಕೇತದಂತೆ ಉಳಿದುಕೊಂಡಿತು. ಕಪಿಯ ಮರಿಗೆ ಸ್ವಲ್ಪ ಕೆಲಸವುಂಟು. ತಾಯ ಹೊಟ್ಟೆಗೆ ಅದು ಕಚ್ಚಿ ತಾವನ್ನು ಹಿಡಿದುಕೊಳ್ಳಬೇಕು. ಅದು ಅದರ ಯತ್ನಭಾಗ. ಆಗ ಸ್ಥಳದಿಂದ ಸ್ಥಳಕ್ಕೆ, ಮರದಿಂದ ಮರಕ್ಕೆ ತಾಯಿ ಅದನ್ನು ಎತ್ತಿಕೊಂಡು ಹೋಗುತ್ತದೆ. ಇದು ಜೀವಾತ್ಮ–ಪರಮಾತ್ಮ ಸಂಬಂಧದಲ್ಲಿ. ಜೀವನಿಗೂ ಸ್ವಲ್ಪ ಹೊಣೆಗಾರಿಕೆಯ ಕ್ರಿಯೆ ಇರುವುದನ್ನು ತೋರಿಸುತ್ತದೆ. ಈ ಪೂರ್ವ ನಿರ್ಬಂಧ ಇಲ್ಲವಾದರೆ ಸಾಗಣೆ ಶಕ್ಯವಿಲ್ಲ. ಭಗವಂತನ ಕೃಪೆಯನ್ನು ಪಡೆಯಬೇಕಾದರೆ ಮಾನವನಾಗಿ ಜೀವ ಸ್ವಲ್ಪ ಪ್ರಯತ್ನ ಮಾಡಬೇಕು ಎಂದಾಯಿತು. ಬೆಕ್ಕಿನಮರಿ ಹಾಗಲ್ಲ. ಅದಕ್ಕೆ ಯಾವ ನಿರ್ಬಂಧವೂ ಇಲ್ಲ. ತಾಯಕೃಪೆ ಮರಿಯ ಯತ್ನವಿಲ್ಲದೆಯೇ ಬರುತ್ತದೆ. ಸಹಜ–ಅವ್ಯಾಜ–ಅಹೈತುಕೀ ಎಂಬ ಮಾತುಗಳು ಈ ಭಕ್ತಿಪಂಥದಲ್ಲಿ ಸಾಮಾನ್ಯವಾಗಿ ಬರುತ್ತದೆ. ಭಗವಂತನ 'ಅರುಳ್' (ಕೃಪೆ) ತೆರೆಯುವುದು ಅದರ ಇಚ್ಛೆಯಂತೆ. 'ವರಣಕಾರ್ಯ' ಅದರದು. ತಾಯಿ ತನ್ನ ಮರಿಯನ್ನು ಹಲ್ಲಿನಲ್ಲಿ ಕಚ್ಚಿಕೊಂಡು ಮರಿಯ ಯಾವ ಯತ್ನವೂ ಇಲ್ಲದಿದ್ದರೂ ಎತ್ತಿಕೊಂಡು ತಿರುಗಾಡುತ್ತದೆ. ತಾಯಿ ಹಿಡಿದುಕೊಂಡಂತೆ ಅದು ಚಲಿಸದಿದ್ದರೆ ಆಯಿತು. ಅಷ್ಟೇ. ಉಪನಿಷತ್ ವಾಕ್ಯದಲ್ಲಿ "ಯಮೇವೈಷ ವೃಣುತೇ ತೇನ ಲಭ್ಯಃ" ಎಂಬಂಥದು ಇಲ್ಲಿ ಕೃಪೆ ಅದರ ಇಚ್ಛೆಗೆ ಸಂಬಂಧಿಸಿದ್ದು ಪ್ರಪತ್ತಿಯನ್ನು ಅನುಸರಿಸಿದವರಿಗೆ ಭಗವಂತನ ಸ್ವೀಕಾರ ಖಂಡಿತ ನಿಶ್ಚಯ. ಅವನ ಆಯ್ಕೆ ಇವನ ಪರವಾಗಿ ಇದ್ದೇ ಇರುತ್ತದೆ. ಎಂಬುದು ನಿಸ್ಸಂದೇಹ.......ಅಷ್ಟೇ ಇಲ್ಲಿ ಅದು ನಿಶ್ಚಯ.

ನುಡಿಯುವ ಮೌಲ್ಯಗಳ ತಾರತಮ್ಯದಲ್ಲಿಯೂ ವ್ಯತ್ಯಾಸವುಂಟು. ಮಾಧ್ವ ರಲ್ಲಿರುವುದಕ್ಕಿಂತಲೂ, ಶ್ರೀವೈಷ್ಣವ ಪಂಥದಲ್ಲಿ ಲಕ್ಷ್ಮಿಗೆ ಹೆಚ್ಚು ಉನ್ನತ ಸ್ಥಾನವಿದೆ. ಹನುಮಾನ್, ಗರುಡ, ಲಕ್ಷ್ಮಣ, ಭರತ, ಭೀಷ್ಮ, ವಿಭೀಷಣ ಮತ್ತು ನಾರದ ಇವರು ಭಕ್ತಾಗ್ರೇಸರರು. ರಾಮಾನುಜ ಎಂದರೆ ರಾಮನ ತಮ್ಮನೆಂದು ಅರ್ಥವಾದರೂ ಅದು ಲಕ್ಷ್ಮಣನಿಗೇ ಸಲ್ಲುವ ಹೆಸರು. ಕೈಂಕರ್ಯ ಅವನ ಶೀಲ, ಲಕ್ಷಣ, ಕೆಲವು ಆಚಾರಗಳೂ ಕ್ರಿಯಾಕಲಾಪಗಳೂ ಉಂಟು. ಯಾರನ್ನಾದರೂ ಈ ಪಂಥಕ್ಕೆ ಸೇರಿಸಿ ಕೊಳ್ಳುವುದಕ್ಕೆ ಮುಂಚೆ ಅನುಸರಿಸಬೇಕಾದ್ದು, ಶಂಖ, ಚಕ್ರ ಲಾಂಛನ ಗಳನ್ನು ಗುರುವಿಂದ ಮುದ್ರೆ ಒತ್ತಿಸಿಕೊಂಡ ಹೊರತು ಮುಕ್ತಿ ನಿಶ್ಚಯವಲ್ಲ. ಗುರುವಿಂದ ಈ ಮುದ್ರೆ ಪಡೆದವರಿಗೆ ಪುನರ್ಜನ್ಮ ಇಲ್ಲ. ಈ ಕಾರಣ ದಿಂದಾಗಿ, ಈ ಪಂಥದವರು ಇತರರಿಂದ ಬೇರೆಯಾಗಿ ಆಯ್ದ ಒಂದು ವರ್ಗ ವಾಗಿ ದೇವರ ಕುಲಕ್ಕೆ ಒಳಪಟ್ಟವರಂತೆ ಒಂದು ಜನವೃಂದವಾಗಿ ಆಗು ತ್ತಾರೆ. ಪಂಥದಲ್ಲಿ ಸ್ವೀಕೃತರಾಗಿ ಮೈಮೇಲೆ ಈ ಲಾಂಛನದ ಮುದ್ರೆ ಪಡೆದುಕೊಂಡ ಸಂಗತಿಯೇ ಅವರನ್ನು ತೇರಿಸುತ್ತದೆ. ರಾಮಾನುಜರು ದೀರ್ಘಕಾಲ ಬದುಕಿ ತಮ್ಮ ಉಪದೇಶ ಮಾಡಿದರು. ಮಧ್ವಾಚಾರ್ಯರ ಕಾಲಕ್ಕಿಂತ ಇವರ ಕಾಲ ಸ್ವಲ್ಪ ಮುಂಚೆ.

ಮಧ್ವಾಚಾರ್ಯರು ಉಡುಪಿಯ ಬಳಿಯ ಒಂದು ಹಳ್ಳಿಗೆ ಸೇರಿದವರು. ತುಂಬಾ ಸಣ್ಣ ವಯಸ್ಸಿನಲ್ಲಿಯೇ ವಿದ್ವತ್ತಿಗೂ ಆಧ್ಯಾತ್ಮಿಕ ದರ್ಶನಕೂಟಕ್ಕೆ ಸಂಬಂಧಿಸಿದಂತೆ ದೊಡ್ಡ ಮೇಧಾವಿತೆಗೂ ಕೀರ್ತಿ ಪಡೆದಿದ್ದರು. ಅದ್ವೈತ ಸಂಪ್ರದಾಯದಿಂದ ಮಾರ್ಪಟ್ಟು ತಮ್ಮ ತತ್ವಬೋಧೆಯನ್ನು ಪ್ರಚಾರ ಮಾಡಿದರು. ವೇದ, ಉಪನಿಷತ್ತು, ಬ್ರಹ್ಮಸೂತ್ರಗಳು, ಭಗವದ್ಗೀತೆ– ಮುಂತಾದವುಗಳನ್ನು ವ್ಯಾಸಂಗ ಮಾಡಿದಾಗ ಶಂಕರ, ಅದ್ವೈತವಾದಿಗಳ ನಿರ್ವಚನ ಅತಿಯಾಗಿ ಅಮೂರ್ತವಾಗಿರುವಂತೆ ಅವರಿಗೆ ಕಂಡಿರಬೇಕು. ಸಾಮಾನ್ಯ ಜನರ ಜೀವನಕ್ಕೆ ಆಯಾಸವನ್ನೊ ಕ್ಲೇಶವನ್ನೊ ತರುವಂತೆ ಇದ್ದೀತು. ಅಲ್ಲಿನ ಬುದ್ಧಿಪ್ರಾಗಲ್ಭ್ಯ ಅತಿಯಾಗಿ ದಿನಬಳಕೆಯ ಗ್ರಹಣೆಗೂ, ನಡವಳಿಕೆಗೂ ನಿರುಪಯುಕ್ತವಾಗಿರುವಂತೆ ಕಾಣಿಸಿರಬೇಕು. ಸಾಮಾನ್ಯ ರಿಗೆ ಬೇಕಾಗಿದ್ದದ್ದು ತಮ್ಮ ಪ್ರೀತಿಗೂ, ಭಕ್ತಿಗೂ, ಶ್ರದ್ಧೆಗೂ ನಿರ್ದಿಷ್ಟ

ವಾಗಿ ಕೈಗೆ, ಮನಸ್ಸಿಗೆ, ಸಿಕ್ಕುವ ಯಾವುದಾದರೊಂದು ದೈವೀಶಕ್ತಿ ಅಥವಾ ಮೂರ್ತಿ. ಕಷ್ಟ ಸುಖಗಳಿಂದ ಕೂಡಿದ ತಮ್ಮ ದಿನ ಜೀವನವನ್ನು ಅದಕ್ಕೆ ನಿವೇದನ ಮಾಡಿಕೊಂಡು ಮಾನವಜನ್ಮವನ್ನು ನೆಮ್ಮದಿಗೊಳಿಸಿಕೊಳ್ಳಲು ಸಹಾಯಕವಾಗುವಂತಹುದು. ಶಂಕರಾಚಾರ್ಯರ ನಿರ್ಗುಣ ಬ್ರಹ್ಮ ವಾದವನ್ನಾಗಲಿ, ಆತ್ಮಬ್ರಹ್ಮಗಳ ಐಕ್ಯವನ್ನಾಗಲಿ ಅವರು ಒಪ್ಪಲಿಲ್ಲ. ಈವರೆಗಾಗಲೇ ರಾಮಾನುಜರು ನಾರಾಯಣನ ಪಾರಮ್ಯವನ್ನು ಜನರಲ್ಲಿ ಹರಡಿದ್ದರು. ದೈವಕೃಪೆ ಎಂಬ ಮಾತು ಜನರ ಪ್ರೀತಿ ಭಕ್ತಿಗಳನ್ನು ಆಕರ್ಷಿಸುವಂತೆ ಮಾಡಿತ್ತು. ರಾಮಾನುಜಾಚಾರ್ಯರು ಈ ದೇವಕಲ್ಪನೆ ಯನ್ನು ಇನ್ನಷ್ಟು ಮಾರ್ಪಡಿಸಿ ವ್ಯಕ್ತಿಜೀವನಕ್ಕೂ ದೇವಕ್ಕೂ ನಡುವೆ ಸಲ್ಲುವ ಸಂಬಂಧದ ಸ್ವರೂಪವನ್ನು ಬೇರೆ ಬಗೆಯಾಗಿ ಕಾಣಿಸಿದರು.

ಮಧ್ವಾಚಾರ್ಯರಿಗೆ ಹರಿ ಅಥವಾ ವಿಷ್ಣು ಪರಮ ದೇವತೆ. ಹರಿ ಪರತರ; ಆತನ ಪದವಿಗೆ ಉಳಿದೆಲ್ಲ ಅಧೀನ. ಬೇರೆಲ್ಲರೂ ಕಡಮೆ. ಕಡೆಯ ಮೋಕ್ಷ ಸ್ಥಿತಿಯಲ್ಲಿಯೂ ಜೀವಾತ್ಮ ಪರಮಾತ್ಮರಲ್ಲಿ ದೇವರಲ್ಲಿ ಒಂದಾಗಿ ಸೇರುವುದು ಎಂಬುದನ್ನು ಅವರು ಒಪ್ಪಲಿಲ್ಲ. ಸಮಸ್ತ ವಿಶ್ವವೂ ಪರದೈವದ—ಪ್ರಭುವಿನ ದೇಹ ಎಂಬುದನ್ನು ರಾಮಾನುಜರು ಸ್ವೀಕರಿಸಿದ ಶೇಷಶೇಷೀಭಾವ—ಮಧ್ವಾಚಾರ್ಯರು ಒಪ್ಪಲಿಲ್ಲ. ಅತಿ ಶ್ರೇಷ್ಠವೆನ್ನ ಬಹುದಾದ ಜೀವಿಯೂ ಇತರ ಯಾವ ಔನ್ನತ್ಯವೂ ವಿಷ್ಣುವಿಗೆ ಸಮಾನವಲ್ಲ. ಅವಕ್ಕೂ ಆತನಿಗೂ ಇರುವ ಸಂಬಂಧ ಮುಖ್ಯವಾಗಿ ಒಡೆಯ—ಸೇವಕ ಸಂಬಂಧ. ಒಡೆಯನ ಪ್ರಸಾದಕ್ಕಾಗಿ ಕರ್ಮದ ಮೂಲಕ, ಜ್ಞಾನದ ಮೂಲಕ, ವೈರಾಗ್ಯದ ಮೂಲಕ ಶ್ರಮಿಸಬೇಕು. ಇವೆಲ್ಲದರ ಪರಿಣಾಮ ವಾಗಿ ಉಂಟಾಗುವ ಭಕ್ತಿಯ ಮೂಲಕ ಆತನನ್ನು ಆರಾಧಿಸಬೇಕು. ಒಬ್ಬ ಗುರು ವ್ಯಕ್ತಿಯನ್ನು ಆ ಪಂಥದಲ್ಲಿ ತೊಡಗಿಸಬೇಕು. ಭಕ್ತನಿಗೂ ದೇವನಿಗೂ ನಡುವೆ ಇರುವ ಈ ಸಂಬಂಧವನ್ನು ಒಬ್ಬ ವ್ಯಕ್ತಿ ಕೈಕೊಳ್ಳ ಬೇಕಾದರೆ ಗುರುವಿನ ಆರಂಭೋಪದೇಶ ಯೋಗ್ಯತೆ ತಂದುಕೊಡುತ್ತದೆ. ಲಕ್ಷ್ಮಿ—ಶಿವ—ಬ್ರಹ್ಮ ಮುಂತಾದವರ ನಡುವೆಯೂ ಅಂತಸ್ತು, ಭೇದಗಳು ಉಂಟು. ಅವರು ತಮ್ಮ ತಮ್ಮ ಸ್ಥಾನಗಳಲ್ಲಿ ನಿಲ್ಲಬೇಕಾದವರು. ಶ್ರೀವೈಷ್ಣವ ಪಂಥದಿಂದ ಮಧ್ವವಾದವನ್ನೂ ಬೇರೆಗೊಳಿಸುವ ಇನ್ನೊಂದು

ಲಕ್ಷಣವುಂಟು. ಹಿಂದೂ ಸಮಾಜವನ್ನು ಜಾತಿಪಂಗಡಗಳಾಗಿ ವಿಭಾಗಿಸುವ ಒಂದು ನಿಯಮವನ್ನು ಮಾಧ್ವಪಂಥ ಅನೂಚಾನವಾಗಿ ಬಂದ ಮಾರ್ಗವಾಗಿ ಒಪ್ಪಿಕೊಳ್ಳುತ್ತದೆ. ಹೀಗಾದುದರಿಂದ, ಸಾಂಪ್ರದಾಯಿಕ ರೀತಿ ನೀತಿಗಳನ್ನು ಉಳಿಸಿಕೊಂಡು ಸಮಾಜದಲ್ಲಿ ವಿಧಾಯಕವಾದ ಪ್ರಕಾರದಲ್ಲಿ ಈ ಹೊಸ ಭಕ್ತಿ ಪಂಥವನ್ನು ಒಪ್ಪಿಕೊಳ್ಳುವುದು ಶಕ್ಯವಾಯಿತು. ರಾಮಾನುಜಾಚಾರ್ಯರ ಉಪದೇಶದಂತೆ ಎಲ್ಲ ಭಕ್ತರೂ ಪದವಿಯಲ್ಲಿ ಒಬ್ಬರಿನ್ನೊಬ್ಬರಿಗೆ, ಒಟ್ಟಿನಲ್ಲಿ ಸಮ ಎಂಬ ತತ್ವವನ್ನು ಒಪ್ಪುವಷ್ಟು ದೂರ ಅವರು ಹೋಗದಾದರು. ವೇದಸ್ಮೃತಿಗಳ ಅಭ್ಯಾಸ ಪೂರ್ವಾಚಾರ ಸ್ವೀಕಾರ; ಆಚಾರ್ಯರು ತಮ್ಮನ್ನು ಸ್ವೀಕರಿಸಿದುದಕ್ಕೆ ಲಾಂಛನವಾಗಿ 'ತಪ್ತ ಮುದ್ರಾಧಾರಣ'–ಇವು ಈ ಜನವರ್ಗವನ್ನೂ ಬೇರೆ ಒಂದು ಶಾಖೆಯಾಗಿ ಮಾಡಿ ಇತರರಿಂದ ಬೇರ್ಪಡಿಸಿತು. ಹೀಗಾಗಿ ಅದ್ವೈತಿಗಳು, ವಿಶಿಷ್ಟಾದ್ವೈತಿಗಳು ದ್ವೈತಿಗಳು ಎಂದು ಬ್ರಾಹ್ಮಣರೆಂಬವರಲ್ಲಿಯೇ ಮೂರು ಪಂಗಡಗಳಾದವು. ತಾತ್ವಿಕವಾಗಿಯೂ ಆಚಾರದಲ್ಲಿಯೂ ಹೊಸದಾಗಿ ಹುಟ್ಟಿಕೊಂಡ ಪಂಗಡ ಇತರ ಎರಡು ಶಾಖೆಗಳನ್ನು ಅಲ್ಲಗಳೆದು ನಿರಾಕರಿಸಿರುವ ಈ ಹೊಸಪಂಥವನ್ನು ಆಕರ್ಷಕವನ್ನಾಗಿ ಮಾಡಿದ ಲಕ್ಷಣ ಅದು ಪ್ರಾಚೀನ ಕಾಲದಿಂದಲೂ ಬಂದ ಆಚಾರ ವ್ಯವಹಾರಗಳನ್ನೆಲ್ಲ–ಒಪ್ಪಿಕೊಂಡುದು. ಪ್ರಪಂಚ ನಿಜವಾದುದು ಎಂದು ಅದು ಜನಗಳಿಗೆ ನಂಬಿಕೆ ಕೊಟ್ಟಿತು. ಭೂಮಿಯ ಮೇಲೆ ಮನುಷ್ಯನು ನಡಸುವ ಜೀವನ ನಿತ್ಯವೆಂದಿತು. ಗಟ್ಟಿಯಾದ ಗೊತ್ತಾದ ನೆಲೆಯ ಮೇಲೆ ನಿಂತು, ಭಕ್ತಿಯ ಮೂಲಕ ದೇವರ ಕಡೆ ಕಣ್ಣೆತ್ತಿ ನೋಡಿ ಅವನ ಕೃಪೆಯನ್ನು ಸಾಧಿಸಬೇಕು ಎಂಬುದಕ್ಕೆ ಅವಕಾಶ ಸಿಕ್ಕಿತು. ದೇವರಿಗೂ ಮನುಷ್ಯನಿಗೂ ಇರುವ ಅಂತರ ಭಕ್ತಿಯನ್ನು ಅಗತ್ಯ ಮಾಡಿತು, ಶಕ್ಯ ಮಾಡಿತು.

ಮಧ್ವಾಚಾರ್ಯರು ಹಿರಿಯ ಮೇಧಾವಿಗಳು. ಬಹುಕಾಲದಿಂದ ಉಡುಪಿ ಖ್ಯಾತ ವಿದ್ಯಾಪೀಠವಾಗಿ ಕೇಂದ್ರವಾಗಿ ಇತ್ತು. ಇವರಿಗೆ ಮೊದಲು ಅಲ್ಲಿ ಶೈವ ಪ್ರಭಾವ ಅತಿಶಯವಾಗಿದ್ದದ್ದು. ಇವರ ಮೊದಲ ಗುರುಗಳು ಅದ್ವೈತ ತತ್ವದವರು. ಈ ಹೊಸತತ್ವ ಪ್ರಕಾಶನವಾದ ಮೇಲೆ ಆ ಊರು ವೈಷ್ಣವರ ಕೇಂದ್ರವಾಯಿತು. ಗುಜರಾತಿನಲ್ಲಿನ ದ್ವಾರಕೆಯಿಂದ ಈ ಕಡೆಗೆ ಬರುತ್ತಿದ್ದ

ಹಡಗೊಂದು ಈಗಿನ ಮಲ್ಪೆಯ ಬಳಿಗೆ ಬರುತ್ತಿತ್ತಂತೆ. ಅದರಲ್ಲಿದ್ದ ಕೃಷ್ಣ ವಿಗ್ರಹವನ್ನು ಇಳಿಸಿಕೊಂಡು ಉಡುಪಿಯ ಈಗಿನ ಶ್ರೀಕೃಷ್ಣದೇವಾಲಯ ದಲ್ಲಿ ಆಚಾರ್ಯರು ಸ್ಥಾಪಿಸಿದರು. ತಾನು ಪ್ರಚಾರ ಮಾಡುತ್ತಿದ್ದ ಹೊಸ ಮಾರ್ಗದ ಜೀವನಕ್ಕೂ ಆಲೋಚನಾಪದ್ಧತಿಗೂ ಉಡುಪಿಯನ್ನು ಪ್ರಭಾವ ಕೇಂದ್ರವಾಗಿ ಮಾಡಲು ಇದು ನೆರವಾಯಿತು. ಭರತಖಂಡ ವನ್ನೆಲ್ಲ ಆಚಾರ್ಯರು ಸುತ್ತಿದರು. ವಿದ್ವಾಂಸರೊಡನೆ ಚರ್ಚೆ ವಾಗ್ವಾದ ಗಳಲ್ಲಿ ತೊಡಗಿ ತಮ್ಮ ಬಗೆಯಲ್ಲಿ ಆಲೋಚನೆ ಮಾಡುವುದಕ್ಕೂ ತಮ್ಮ ಮಾರ್ಗಕ್ಕೆ ಅವರು ತಿರುಗುವುದಕ್ಕೂ ಅವರ ಬುದ್ಧಿಶಕ್ತಿ ಪ್ರಜ್ಞೆ ಸಹಾಯ ವಾದವು. ಅನೇಕರು ಮಧ್ವ ಪಂಥಕ್ಕೆ ತಿರುಗಿದರು. ದ್ವೈತಮಾರ್ಗದಲ್ಲಿ ಪ್ರತಿಷ್ಠಿತವಾದ ಕೃಷ್ಣಭಕ್ತಿಯ ಪ್ರಭಾವ ನಾಡಿನ ಮೇಲೆ ಹರಡಿತು. ಇಂಥ ಹಲವಾರು ಕೇಂದ್ರಗಳಿಂದ ಹಲವಾರು ಮಂದಿ ಶ್ರದ್ಧಾಳುಗಳು ಉಡುಪಿಗೆ ಯಾತ್ರೆ ಬಂದರು. ಚೈತನ್ಯರು ಆರಂಭಿಸಿದ ಭಕ್ತಿಯ ಪ್ರಕಾರ ಈ ಪಂಥದ ಪ್ರಭಾವವನ್ನೂ ಸ್ಫೂರ್ತಿಯನ್ನೂ ಸ್ವೀಕರಿಸಿ ಕೆಲವು ಕಾಲದ ತರುವಾಯ ಮಥುರೆಗೆ ಹರಡಿತು. ಸ್ವಾಮಿಶಾಸ್ತ್ರಿ ಎಂಬ ಹೆಸರಿನ ಕಳಿಂಗ ರಾಜ್ಯದಲ್ಲಿದ್ದ ಮಹಾ ಮೇಧಾವಿಯೊಬ್ಬರು ಆಚಾರ್ಯರ ಶಿಷ್ಯರಾದರು. ಗುರುವಿನ ಜೊತೆಯಲ್ಲಿಯೇ ಆತನು ಉಡುಪಿಗೆ ಬರುತ್ತೇನೆಂದಾಗ, ಆತನು ಅಲ್ಲಿಯೇ ಉಳಿದು ಅಲ್ಲಿ ಆಳುತ್ತಿದ್ದ ರಾಜನಿಗೆ ಮಂತ್ರಿಯಾಗಿ ಸಲಹೆ ಕೊಡು ತ್ತಿರಬೇಕೆಂದು ಆಚಾರ್ಯರ ಅಪ್ಪಣೆಯಾಯಿತು. ಈ ಮಹಾರಾಜನು ತೀರಿಕೊಂಡಾಗ (1263) ಸಣ್ಣವಯಸ್ಸಿನ ಯುವರಾಜನಿಗೆ ಪಾಲಕ ಅಧಿಕಾರಿಯಾಗಿದ್ದುಕೊಂಡು ಆಡಳಿತವನ್ನು ನಿರ್ವಹಿಸಿ ಆತನಿಗೆ ವಯಸ್ಸು ಬರುವವರೆಗೂ ಅಲ್ಲಿಯೇ ಇದ್ದರು. ಶಾಸ್ತ್ರಿಗಳು ಉಡುಪಿಗೆ ಬಂದಾಗ ಆಚಾರ್ಯರು ತಮಗೆ ಹೇಳಿಹೋಗಿದ್ದಂತೆ ಅಲ್ಲಿದ್ದ ರಾಮ ಸೀತೆಯರ ವಿಗ್ರಹಗಳನ್ನು ಉಡುಪಿಗೆ ತಂದರಂತೆ. ಈ ಸ್ವಾಮಿ ಆಚಾರ್ಯರು ಮಾಧ್ವಸಂಪ್ರದಾಯದಲ್ಲಿ ನರಹರಿ ತೀರ್ಥರೆಂದು ಮುಂದಿನ ಕಾಲಗಳಲ್ಲಿ ಪ್ರಸಿದ್ಧರಾದವರು.*

---

* ಕನ್ನಡದಲ್ಲಿ ಹರಿದಾಸಕೃತಿಗಳ ಬಗೆಯ ಹಾಡುಗಳನ್ನು ಬರೆದವರಲ್ಲಿ ಇವರೇ

ಭಕ್ತಿ ಮಾರ್ಗವು ಸ್ತ್ರೀಪುರುಷರಿಬ್ಬರ ಹೃದಯದಲ್ಲಿಯೂ ನೇರವಾಗಿ ಪ್ರಭಾವಗೊಳ್ಳುತ್ತದೆ. ಉಡುಪಿಯಲ್ಲಿ ಪೂಜಿಸುವ ಕೃಷ್ಣ–ಬಾಲಕೃಷ್ಣ, ಉತ್ತರ–ದಕ್ಷಿಣ ಭಾರತದಲ್ಲಿ ಪ್ರಚಲಿತವಾಗಿ ಜನ ಮೆಚ್ಚಿದ, ಪ್ರೀತಿಸಿದ, ಪ್ರಚಾರಗೊಳಿಸಿದ, ಎಲ್ಲ ಲೀಲೆಗಳೂ ಮಹಾತ್ಮ್ಯದ ಕತೆಗಳೂ ಸಹಜ ವಾಗಿ ಕೃಷ್ಣಪೂಜೆಯನ್ನು ಸಂಪನ್ನವಾಗಿ ಮಾಡಿವೆ. ಮಹಾಭಾರತದ ಶ್ರೀಕೃಷ್ಣನ ಕತೆಗಳು ಮಾತ್ರವಲ್ಲ, ಹರಿವಂಶ, ಭಾಗವತಗಳಲ್ಲಿನ ಕೃಷ್ಣ ಕಥಾಮಂಡಲ ಅದು. ಈ ಎರಡು ಪುರಾಣಗಳಲ್ಲಿ ಎಲ್ಲಿಯೇ ಆಗಲಿ ರಾಧೆಯ ಸುಳಿವಿಲ್ಲ. ಇದರಿಂದಾಗಿ ಆಕೆಗೂ ಕೃಷ್ಣನಿಗೂ ಸಂಬಂಧಿಸಿದ ಲೀಲಾಪ್ರಕರಣಗಳು ಮಾಧ್ವಮತದ ಹರಿದಾಸ ಸಂಪ್ರದಾಯದಲ್ಲಿ ಕಾಣವು. 'ರಾಧಾಪಂಥಿ'ಗಳೆಂಬುವರು ಕರ್ಣಾಟಕದ ಹೊರಗೆ ಬೇರೆ ಬಗೆಯ ಭಕ್ತಿ ಪ್ರಕಾರಗಳನ್ನು ಕಟ್ಟಿಕೊಂಡರು. ಆಚಾರ್ಯರ ವಿದ್ವನ್ಮಾನ್ಯ ಶಿಷ್ಯರು ಒಬ್ಬರಾದ ಮೇಲೊಬ್ಬರು ಹುಟ್ಟಿಕೊಂಡು ಮಾಧ್ವಪಂಥವನ್ನು ಕರ್ನಾಟಕ ದಲ್ಲೆಲ್ಲಾ ಹರಡಿದರು.

ಈ ಸಂಪ್ರದಾಯದ ನಾಯಕರಲ್ಲಿ ಜಯತೀರ್ಥರೂ, ಶ್ರೀಪಾದ ರಾಯರೂ ಖ್ಯಾತಿಪಡೆದರು. ಜಯತೀರ್ಥರು ಪಂಢರಪುರದ ಯಾವುದೊ ಹತ್ತಿರದ ಊರಿಗೆ ಸೇರಿದವರು. ಶ್ರೀಪಾದರಾಯರು (1422-1480) ಮುಳಬಾಗಿಲವರು. ಈ ಪಂಥದ ಸಂಪ್ರದಾಯಕ್ಕೆ ಈ ಇಬ್ಬರು ಮಹನೀಯರು ಎರಡು ಬೇರೆ ಬೇರೆ ಬಗೆಯ ಸೇವೆ ಸಲ್ಲಿಸಿದರು. ದ್ವೈತಾಚಾರ್ಯರ ತತ್ವವನ್ನೂ ಆಲೋಚನೆಗಳನ್ನೂ ವಿವರಿಸಿ, ಬಲಪಡಿಸಿ ಅದನ್ನು ಪೂರ್ತಿ ಸಮರ್ಪಕವಾಗುವಂತೆ ಸ್ಥಾಪಿಸಲು ಜಯತೀರ್ಥರು ಟೀಕಾಚಾರ್ಯರ ಹೆಸರಲ್ಲಿ ಪ್ರಖ್ಯಾತರಾದರು. ಹರಿದಾಸ ಸಂಪ್ರದಾಯದ ಮೊದಮೊದಲ ಕಾಲದ ಇತಿಹಾಸದಲ್ಲಿ ಶ್ರೀಪಾದರಾಯರ ಹೆಸರು ಬಹುಮುಖ್ಯವಾದ್ದು. ಈಗಿನ ಕರ್ನಾಟಕ ರಾಜ್ಯದಲ್ಲಿರುವ ಮಲೆನಾಡು ಪ್ರದೇಶದ ಮೇಲೆ ಈ ಮತದ ಪ್ರಭಾವ ಹರಡಿತು. ಹಾಗೆಯೇ ದೂರ ಉತ್ತರದಲ್ಲಿ ಇಂದಿನ ಮಹಾರಾಷ್ಟ್ರ ರಾಜ್ಯದ ಸೊಲ್ಲಾಪುರದ (ಸೊನ್ನಲಿಗೆ) ಬಳಿ ಇರುವ

---

ಸುಮಾರು ಮೊದಲಿಗರು. ನಾಡಿನ ಈ ಭಾಗದಲ್ಲಿ ಜನ ಆಡುವ ಭಾಷೆ ಕನ್ನಡ ವಾಗಿತ್ತು. ಆತನವೆನ್ನುವ ಎರಡು–ಮೂರು ಹಾಡುಗಳು ಈಗಲೂ ಪ್ರಚಾರದಲ್ಲಿವೆ.

ಪಂಢರಪುರಕ್ಕೆ ತನ್ನ ಪ್ರಭಾವವನ್ನೂ ಸಂಪರ್ಕಗಳನ್ನೂ ವಿಸ್ತರಿಸಿಕೊಂಡಿತು.

ಬಹುಕಾಲ ವೈಷ್ಣವ ಪೂಜೆ ಆರಾಧನೆಗಳಿಗೂ ಸಂಸ್ಕೃತಿಗೂ ಪಂಢರಪುರ ಇನ್ನೊಂದು ಪೀಠವಾಗಿತ್ತು. ಭಾಗವತಪಂಥದ ಭಕ್ತರಿಗೆ ಯಾತ್ರಾಸ್ಥಾನ ವಾಗಿತ್ತು. ಧ್ಯಾನಕ್ಕೆ ಪ್ರಾಶಸ್ತ್ಯ ಕೊಡುತ್ತಿದ್ದ ಅದ್ವೈತಿಗಳಿಗೂ, ವಿಷ್ಣು ಭಕ್ತರಿಗೂ, ಸಂತರಿಗೂ ಮಹಾಕ್ಷೇತ್ರವಾಗಿತ್ತು. ಇದು ಹರಿ–ಹರ ಎರಡು ಪಂಥದವರಿಗೂ ಸಮಾನ ಮಾನ್ಯತೆ ಕೊಟ್ಟಿತ್ತು. ಮಹಾನುಭಾವ ಪಂಥದವರಿಗೂ ವಾಕಾರಿಗಳಿಗೂ ಮಧ್ವಮತದ ಹರಿ ಅಥವಾ ವಿಷ್ಣು ಪಾರಮ್ಯವನ್ನು ಉಪದೇಶಿಸಿದರು. ಹೊಸ ಶಾಖೆಗೆ ಆಕೃಷ್ಟರಾದರು. ಬಹುದೊಡ್ಡ ಸಂತವರ್ಗದ ಪವಕಾರರಲ್ಲಿ ಜ್ಞಾನೇಶ್ವರಿಯ ಕರ್ತೃವಿನಂಥ ಕೆಲವರು ಇನ್ನೂ ಭಾಗವತ ಮಾರ್ಗಕ್ಕೆ ಒಲಿದಿದ್ದರೂ ಅವರ ಶಿಷ್ಯವರ್ಗ ಹೊಸಪಂಥಕ್ಕೆ ಒಲಿದು ಹೋಗುತ್ತಿರುವುದನ್ನು ಕಂಡರು.

ನಾಡಲ್ಲಿ ಮೈಸೂರಿನ ಮಲೆನಾಡು ಪ್ರದೇಶ ಮತ್ತು ಘಟ್ಟಪ್ರದೇಶಗಳಲ್ಲಿ ಆದ್ಯರು ಆರಾಧ್ಯರು ಎಂಬ ಜನರಿದ್ದರು. ಅವರು ಕರ್ನಾಟಕದ ಉತ್ತರ ಭಾಗದಲ್ಲಿಯೂ ಇದ್ದರು.* ಉಡುಪಿಯ ಕೃಷ್ಣಪೂಜೆಯ ಜೊತೆಗೆ ಈ ವಿಠಲಪೂಜೆಯೂ ಸೇರಿಕೊಂಡಿತು ಎನ್ನುತ್ತಾರೆ. ವಿಠಲ ಎಂಬ ರೂಪ ವಿಷ್ಣುವಿನ ತದ್ಭವ. ಮಲೆನಾಡಿನಲ್ಲಿಯೂ ಕನ್ನಡ ನಾಡಿನ ಕರೆ ಪ್ರದೇಶ ದಲ್ಲಿಯೂ ಪ್ರಭಾವಗೊಂಡಿದ್ದ ಮಾಧ್ವಪಂಥದ ಕೆಲವು ಉಪಮಠಗಳಲ್ಲಿ ವಿಠಲಾರಾಧನೆ ಬಹು ಪ್ರೀತಿಯ ಒಂದು ಅಂಶವಾಗಿತ್ತು. ಶತಮಾನಗಳ ಕಾಲದಿಂದಲೂ ಪಂಢರಪುರ ವಿಠಲಪ್ರಭಾವದ ಒಂದು ಕ್ಷೇತ್ರ. ಪ್ರೌಢ ದೇವರಾಯನ ಕಾಲದಲ್ಲಿ ಈ ಪ್ರಭಾವಕ್ಕೆ ಇನ್ನಷ್ಟು ಪ್ರಭಾವ, ಹಿರಿಮೆ ಬಂದವು. ವಿಜಯನಗರದ ಖ್ಯಾತ ಚಕ್ರಾಧಿಪತಿಯಾದ ಕೃಷ್ಣದೇವ ರಾಯನ ಕಾಲದಲ್ಲಿ ಹಂಪೆಯಲ್ಲಿಯೇ ಒಂದು ವಿಠಲದೇವಾಲಯವನ್ನು ರಾಜನು ಪ್ರತಿಷ್ಠಾಪಿಸಬಯಸಿದನು.† ಈ ವಿಠಲಾರಾಧನೆ ಹರಿದಾಸ

---

* ಪಂಡರಪುರಕ್ಕೆ ಸಂಬಂಧಿಸಿದ ಬಹುದೊಡ್ಡ ಹೆಸರುಗಳಲ್ಲಿ ಒಂದು ಪುಂಡರೀಕ ವಿಠಲನದು. ಆತ ಸಂಗೀತ ಶಾಸ್ತ್ರದಲ್ಲಿ ಮಹಾವಿದ್ವಾಂಸನಾಗಿದ್ದ.

† ಕೆಲವು ಕಥೆಗಳ ಪ್ರಕಾರ ವಿಠಲ ವಿಗ್ರಹವನ್ನು ಪಂಢರಪುರದಿಂದ ತೆಗೆದು

ಚಳವಳಿಯಲ್ಲಿ ಬಹುಮುಖ್ಯ ಪಾತ್ರವನ್ನು ವಹಿಸಿತ್ತು. ದಾಸರೆಲ್ಲ ತಮಗೆ ವಿಶಿಷ್ಟವಾದ ಒಂದು ವ್ಯಕ್ತಿ ಅಂಕಿತದ ಜೊತೆಗೆ ವಿಠಲನೆಂಬ ಹೆಸರನ್ನೂ ಸೇರಿಸಿಕೊಂಡಿದ್ದಾರೆ. ಅನೇಕ ಮಂದಿ ಮಹಾರಾಷ್ಟ್ರದ, ಭಕ್ತಸಂತರು, ಪದಕಾರರು (Singers) ವಿಠಲನಲ್ಲಿ ಪ್ರೀತಿ ಉಳ್ಳವರು. ಪಂಢರಪುರದ ವಿಠೋಬ ಕಾನಡಿದೇವ್. ಆ ದೇವರಲ್ಲಿದ್ದ ಅವರ ಪ್ರೀತಿ ಅವರ ಬದುಕನ್ನು ಸುಧಾರಿಸಿ ಜೀವಗಳಿಗೆ ಬೆಳಕನ್ನೂ ಸಂತೋಷವನ್ನೂ ತಂದುಕೊಟ್ಟಿತು. ಕನ್ನಡದ ಶಾಸನಗಳಲ್ಲಿ ಪಂಢರಪುರಕ್ಕೆ, ಪಂಡರಿಗೆ ಎಂಬ ಹೆಸರಿದೆ. ಉತ್ತರದಲ್ಲಿ ವಾರಾಣಸಿ ಹೇಗೆ ಪವಿತ್ರವೊ ದಕ್ಷಿಣದಲ್ಲಿ ಪಂಡರಿಗೆ ಅಷ್ಟು ಪವಿತ್ರವೆಂಬ ಭಾವನೆ ಆಗ. ಅದರ ಜನಪ್ರಿಯತೆ ಪಶ್ಚಿಮ ಕರ್ನಾಟಕ ದಲ್ಲಿ ಹರಡಿತು. ಶೃಂಗೇರಿ, ತೀರ್ಥಹಳ್ಳಿ ಪ್ರದೇಶದ ಅನೇಕರ ಮನೆಯಲ್ಲಿ ಜನರ ಹೆಸರು ವಿಠಲ ಎಂದಾಯಿತು. ಮಧ್ವಾಚಾರ್ಯರೇ ತಮ್ಮ ಕೂಡು (associate) ಮಠಗಳಿಂದ ಸಿರೂರು, ಪುತ್ತಿಗೆ, ಸುಬ್ರಹ್ಮಣ್ಯ ಮಠಗಳಿಗೆ ವಿಠಲ ವಿಗ್ರಹವನ್ನು ಕೊಟ್ಟರೆಂದು ಹೇಳುತ್ತಾರೆ. ಒಂದು ಸಂಗತಿ ಇದರಿಂದ ಪ್ರಮಾಣಗೊಳ್ಳುತ್ತದೆ. ಮಹಾರಾಷ್ಟ್ರ ದೇಶದ ದ್ವೈತಿಗಳು ಮತ್ತು ಭಾಗವತರು ಮಾತ್ರವೇ ಅಲ್ಲ, ಅಲ್ಲಿಗೆ ಭಕ್ತರಾಗಿದ್ದುದು ವೈಷ್ಣವ ದ್ವೈತ ಪಂಥದವರೂ ಪಂಢರಪುರದಲ್ಲಿ ಜನಪ್ರಿಯತೆಯನ್ನು ಪ್ರಾಮುಖ್ಯತೆ ಯನ್ನು ಪಡೆದರು ಎಂಬುದು.

ನರಹರಿತೀರ್ಥರು ಬೃಂದಾವನಸ್ಥರಾದ ಮೇಲೆ (ಸು. 1331) ಶ್ರೀಪಾದ ರಾಯರ ಕಾಲದವರೆಗೆ ಸುಮಾರು ಒಂದು ಶತಮಾನಕ್ಕೆ ಹೆಚ್ಚಿನಕಾಲ ಈ ಪಂಥದ ನಾಯಕರನ್ನು ಕುರಿತು ಯಾವ ಹೆಚ್ಚು ಸಂಗತಿಗಳೂ ಕೇಳಿ ಬರುವುದಿಲ್ಲ. ಇವೊತ್ತಿನ ತೀರ್ಥಹಳ್ಳಿ ತಾಲ್ಲೂಕಿನಲ್ಲಿ 'ಆರಗ' ಎಂಬ ಸಂಸ್ಥಾನವಿತ್ತು. ಅಲ್ಲಿನ ಶಾಸನಗಳಲ್ಲಿ ಬಳಕೆಯಲ್ಲಿ ಯೋಗೇಂದ್ರ ವಿಠಲ, ಒಲ್ಲಿದ ವಿಠಲ, ಸಿರಿಪತಿ ವಿಠಲ, ನಾರಾಯಣ ವಿಠಲ, ಎಂಬ ಹೆಸರುಗಳಿವೆ. ಅವರ ಹೆಸರುಗಳಲ್ಲಿ 'ಉಗಾಭೋಗ' ಎಂಬ ರಚನೆಗಳಿವೆ. ಹಿಂದೆ ವೀರಶೈವ ಸಾಧುಸಂತರು ಬಳಸುತ್ತಿದ್ದ ವಚನಗಳ ಆಕೃತಿ ವಿಷಯದಲ್ಲಿ

---

ಕೊಂಡು ಬಂದರೆಂದೂ ಆಮೇಲೆ ಎಂದೊ ಹೇಗೊ ಪಂಢರಪುರಕ್ಕೆ ಹಿಂತೆಗೆದುಕೊಂಡು ಹೋದರೆಂದೂ ತಿಳಿದುಬರುತ್ತದೆ.

ಮತ್ತು ಭಾವ ಬಂಧುರತೆಗಳ ಸಮಾನ ಲಕ್ಷಣ ಕಾಣುತ್ತದೆ. ಇವು ಅಲ್ಲಿಂದ ತರುವಾಯದ ಕಾಲದಲ್ಲಿ ಬಂದ ಮುಖ್ಯ ಹರಿದಾಸರನ್ನು ಪ್ರಭಾವ ಗೊಳಿಸಿದ ಹಾಗೆ ಕಾಣುತ್ತದೆ. ಅವರು ಆದ್ಯ, ಆರಾಧ್ಯ ಪಂಗಡಗಳಿಗೆ ಸೇರಿದವರು. ವಿಠಲಾರಾಧನೆಗೆ ಸಂಬಂಧಿಸಿದಂತೆ ಸ್ಫೂರ್ತಿಯನ್ನೂ, ಶ್ರದ್ಧಾಭಕ್ತಿಯನ್ನೂ ಜೀವಂತವಾಗಿ ಉಳಿಸಿಕೊಂಡಿದ್ದ ಹಾಗೆ ಕಾಣುತ್ತದೆ.

ಶ್ರೀಪಾದರಾಯರು ತುಂಬಾ ಪ್ರಭಾವಶಾಲಿ ವಿದ್ವಾಂಸರು. ಅವರು ಸಾಳ್ವ ನರಸಿಂಹನ ಮೇಲೆ ಪರಿಣಾಮಕಾರಿ ಸಂಪರ್ಕವನ್ನು ಇಟ್ಟುಕೊಂಡಿದ್ದವರು. ಮುಳಬಾಗಿಲಿಗೂ, ತಿರುಪತಿಗೂ ನಡುವೆ ದಾರಿಯಲ್ಲಿರುವ ಚಂದ್ರಗಿರಿಯಲ್ಲಿ ಅವನ ಆಸ್ಥಾನವಿತ್ತು. ವಿಜಯನಗರದ ರಾಜ್ಯದ ಹಲವಾರು ಶತ್ರುಗಳ ಮೇಲೆ ಜಯಪ್ರದವಾದ ಕದನಗಳನ್ನು ನಡಸಿ ಶಕ್ತನಾಗಿದ್ದವನು. ನಾರಸಿಂಹನು ವಿಜಯನಗರದ ರಾಜರಿಗೆ ವಿಧೇಯ ಸೇವಾ ಕೃತ್ಯಗಳನ್ನು ನಡಸದಿದ್ದರೂ ಅವನ ಕೀರ್ತಿ ಹೆಸರು ಪ್ರತಿಷ್ಠಿತವಾಗಿದ್ದವು. ವಿಜಯನಗರ ರಾಜರು, ತಿರುಪತಿದೇವಸ್ಥಾನದ ಅಧಿಕಾರಿಗಳನ್ನು ಯಾವ ಅಂಕೆಗೂ ಒಳಪಡಿಸದೆ ಇದ್ದುದರಿಂದ ಯಾವ ಕಟ್ಟುನಿಟ್ಟಿಗೂ ಅವರು ಸಿಕ್ಕದೆ ವ್ಯವಹರಿಸುತ್ತಿದ್ದರೆಂದೂ, ಅವರ ಕೈಯಲ್ಲಿನ ಬೊಂಬೆಗಳಂತೆ ಮಾತ್ರ ತಾವು ಆಗುತ್ತಿದ್ದರೆಂದೂ, ನರಸಿಂಹನಿಗೆ ಕೋಪವಿತ್ತು. ಶ್ರೀಪಾದರಾಯರು ಶುಚಿ ಶೀಲವುಳ್ಳವರು. ಪ್ರಾಜ್ಞರು. ಇದರಿಂದಾಗಿ ಆತನ ಮೇಲೆ ಅವರ ಪ್ರಭಾವ ದೊಡ್ಡದಾಗಿತ್ತು. ವಿಜಯನಗರದಲ್ಲಿ ಸಂಗಮ ವಂಶದವರನ್ನು ಹಿಂದಕ್ಕೆ ಹಾಕಿ ಸಾಳ್ವ ವಂಶದವರು ರಾಜರಾದಾಗ ಅವರನ್ನು ಹಿಂದೆ ಹಾಕಿ ತಾಳವ ವಂಶ ರಾಜ್ಯಾಧಿಕಾರ ಪಡೆದಾಗ ಶ್ರೀಪಾದರಾಯರು ತಮ್ಮ ಪ್ರಭಾವವನ್ನು ಅಲ್ಲಿಗೆ ಹರಡುವುದು ಸುಲಭವಾಯಿತು. ವ್ಯಾಸರಾಯರು ಅವರ ಮಹಾಶಿಷ್ಯರು. ಮತಧರ್ಮವಿಚಾರದಲ್ಲಿ ಅತಿಶಯ ಪ್ರಭಾವಶಾಲಿಗಳಾಗಿದ್ದುದೊಂದು ಅಲ್ಲದೆ ವಿಜಯನಗರದ ಅತಿ ಉಚ್ಛ್ರಾಯದ ಸಂಪತ್ತಿನ ಕಾಲವಾದ ಕೃಷ್ಣದೇವರಾಯನ ಆಳ್ವಿಕೆಯಲ್ಲಿ ರಾಜಗುರುವಾದರು. ಸುಮಾರು 1509ರಲ್ಲಿ ಕೃಷ್ಣದೇವರಾಯನು ರಾಜನಾದನು. ರಾಜನಿಗೆ ಅತಿಶಯವಾದ ಕೆಡುಕು ಎಂದು ಗುಣಿತವಾಗಿ ಕಂಡ ಕುಹೂ

ಯೋಗ ಎಂಬ ಗ್ರಹಣಕಾಲದಲ್ಲಿ (8-1-1521) ಗ್ರಹಯೋಗದಿಂದ ಆಳುವ ರಾಜನಿಗೆ ಸಾವು, ನಾಶ ಬರುತ್ತದೆಂದು ಶಾಸ್ತ್ರಜ್ಞರು ಹೇಳಿದ್ದರಾಗಿ ವ್ಯಾಸ ರಾಯರು ರಾಜನಿಗೆ ದೊಡ್ಡ ಸಹಾಯ ಮಾಡಿದರು. ಕೆಲವು ದಿನಗಳ ಕಾಲ ರಾಜನ ಸಿಂಹಾಸನದ ಮೇಲೆ ತಾವು ಕುಳಿತು........ ಗ್ರಹಪೀಡೆ ನಿವಾರಣೆಯಾದ ಮೇಲೆ ರಾಜ್ಯವನ್ನು ರಾಜನಿಗೆ ಹಿಂದಕ್ಕೆ ಕೊಟ್ಟಿದ್ದರು.

ವ್ಯಾಸರಾಯರು ಮಾಧ್ವಮಠಾಧಿಪತಿಗಳು. ಆತನ ಮತ್ತು ಅನೇಕ ಮಂದಿ ವೈಷ್ಣವ ಪಂಥದ, ಶಿಷ್ಯರು, ಭಕ್ತರೂ ಅಲ್ಲಿಗೆ ಬಂದು ಅವರ ಜೊತೆಗೆ ಸೇರಿಕೊಂಡರು. ಈ ವ್ಯಾಸರಾಯರ ಪ್ರಭಾವ ಮಂಡಲಕ್ಕೆ ಶ್ರೀನಿವಾಸನಾಯಕನೆಂಬ ಹೆಸರಿನ ಒಬ್ಬಾತ ಬಂದು ಅವರ ಶಿಷ್ಯನಾದ. ಆತನ ಕಥೆ ನಮ್ಮ ಇಲ್ಲಿನದು. ಅಲ್ಲಿಗೆ ಬರುವುದಕ್ಕೆ ಮುಂಚೆ ಭಾಗವತ ಸಂಪ್ರದಾಯಕ್ಕೆ * ಸೇರಿದವನಾಗಿದ್ದರೂ ಇರಬಹುದು. ಈ ಶಿಷ್ಯತ್ವ ಪಡೆದಂದಿನಿಂದ ಮಾಧ್ವ–ಶ್ರೀವೈಷ್ಣವ ದೀಕ್ಷೆಯನ್ನೇ ಪಡೆದ. ಆತನು ರಚಿಸಿದ ಗೀತೆಗಳಿಗೆಲ್ಲ ಪುರಂದರವಿಠಲ ಎಂಬ ಅಂಕಿತವ ಹಾಕಿಕೊಳ್ಳಲು ಆವನಿಗೆ ಗುರುಗಳ ಅಪ್ಪಣೆಯಾಯಿತು. ವ್ಯಾಸರಾಯರು ತಮ್ಮ ಹೆಸರಿನ ಜೊತೆಗೆ 'ವಿಠಲ' ಸಂಕೇತವನ್ನು ಹಾಕಿಕೊಳ್ಳಲಿಲ್ಲ. ಪುರಂದರದಾಸ ನೆಂದು ಹೆಸರಾದ ವ್ಯಕ್ತಿಗೆ ವಿಠಲನಲ್ಲಿದ್ದ ಭಕ್ತಿ ಮುಂದೆ ಹರಿದಾಸರೆಂದು ಹೆಸರಾದ ಎಲ್ಲ ದಾಸರಿಗೂ ಪರಂಪರೆಯಾಗಿ ಅಂಕಿತವಾಯಿತು.

ವ್ಯಾಸರಾಯರ ಸನ್ನಿಧಿಯಲ್ಲಿದ್ದ ಒಂದು ವಿದ್ವಾಂಸವರ್ಗ ಸಂಸ್ಕೃತ ವಿದ್ಯೆಯಲ್ಲಿ ಪ್ರೌಢ ಪಾಂಡಿತ್ಯ ಪಡೆದವರು. ಶಾಸ್ತ್ರವೇತ್ತರು ವೇದ, ಉಪನಿಷತ್, ಬ್ರಹ್ಮಸೂತ್ರಗಳನ್ನು ವ್ಯಾಸಂಗ ಮಾಡಿದ್ದವರು. ಮಾಧ್ವ ವೇದಾಂತದ ತತ್ವಸಾಧನೆಯಲ್ಲಿಯೂ ಉಪಾಂಗಗಳಾದ ಎಲ್ಲ ವಿದ್ಯೆ ಗಳಲ್ಲಿಯೂ ನಿಷ್ಣಾತರಾಗಿದ್ದವರು. ಯೋಗ್ಯತೆಯಲ್ಲಾಗಲಿ ಪದವಿ

---

* ಇದು ಈವರೆಗೆ ಸಾಧಾರಣವಾಗಿ ಪ್ರಚಲಿತವಾಗಿ ನಿಂತಿರುವ ಅಭಿಪ್ರಾಯ. ಈ ಪುಸ್ತಕದಲ್ಲಿ ಶ್ರೀ ಕೃಷ್ಣರಾಯರು ಪುರಂದರದಾಸರನ್ನು ಕುರಿತು ಸ್ಥಿತಿಯನ್ನು ಬೇರೆಯಾಗಿ ಕಾಣಿಸುತ್ತಾರೆ. ಮೂಲಭೂತ ಅಭಿಪ್ರಾಯದಲ್ಲಿ ಭಿನ್ನತೆ ಇರುವಾಗ ಅದನ್ನು ತಿಳಿಸಬೇಕಾದ್ದು ಅಭಿಪ್ರಾಯ ಸ್ವಾತಂತ್ರ್ಯಕ್ಕೆ ಮನ್ನಣೆಯಾಗುತ್ತದೆ.

ಯಲ್ಲಾಗಲಿ ಹರಿದಾಸರಿಗೆ ಅವರೊಡನೆ ಸಮಾನ ಪದವಿ ಬರುವುದಕ್ಕೆ ಸ್ವಲ್ಪ ಕಾಲ ಹಿಡಿಯಿತು. ಆ ವಿದ್ವಾಂಸರ ಗುಂಪಿಗೆ 'ವ್ಯಾಸಕೂಟ' ವೆಂದೂ ಇವರದಕ್ಕೆ 'ದಾಸಕೂಟ' ವೆಂದೂ ಹೆಸರಾಯಿತು. ದಾಸಕೂಟ ಕ್ಕಿಂತ, ವ್ಯಾಸಕೂಟ ಉನ್ನತ ವಿದ್ವತ್ ಮಾನ್ಯತೆಯನ್ನು ಪಡೆದು ಕೊಂಡಿತ್ತು. ಅವರಿಗೆಲ್ಲ ಸಂಸ್ಕೃತ ವಿದ್ಯೆಯಲ್ಲಿ ಹೆಚ್ಚು ಗೌರವ. ಅವರ ಪ್ರಾಮುಖ್ಯತೆ, ಈ ಪ್ರೌಢಿಮೆಯಿಂದ ಬಲಗೊಂಡಿತ್ತು. ಸಂಸ್ಕೃತ ದೇವ ಭಾಷೆ. ದಾಸರು ನುಡಿದುದು, ಬರೆದುದು ಕನ್ನಡದಲ್ಲಿ. ಇದನ್ನು 'ಪ್ರಾಕೃತ' ಅಥವಾ 'ದೇಸಿ' ಎಂದು ಆಗ ಕರೆಯುತ್ತಿದ್ದರು. ವ್ಯಾಸ ರಾಯರಿಗಿದ್ದ ಗೌರವ, ಪ್ರಭಾವ, ಅಧಿಕಾರ ಎಲ್ಲವನ್ನು ಪ್ರಯೋಗಮಾಡಿ ಪುರಂದರದಾಸರಂಥವರ ಕೊಡುಗೆಯ ಗುಣವನ್ನು ಅವರು ಮೇಲೆತ್ತಿ ಹಿಡಿಯಬೇಕಾಯಿತು. ದಾಸರ ರಚನೆ ಸಂಸ್ಕೃತದಲ್ಲಿರುವ ಯಾವ ದರ್ಶನಕ್ಕೂ, ಉಪದೇಶಕ್ಕೂ ಸಮತೂಗಬಲ್ಲದ್ದೆಂದು ಅವರು ಸ್ಥಾಪಿಸುತ್ತ ಇವರ ಕಾರ್ಯವನ್ನು 'ಪುರಂದರೋಪನಿಷತ್' ಎಂದರು. ಗುರುಗಳ ಸಮಕ್ಷಮವೂ ಮಾತೂ ಆ ಬಗೆಗೆ ಅನುಕೂಲವಾದ್ದರಿಂದ ಮಾತ್ರ ವಿದ್ವಾಂಸ ವರ್ಗ ಅದನ್ನು ಹಾಗೂ ಹೀಗೂ ತಾಳಿಕೊಂಡಿತು. ಮನಸಾರೆ ಒಪ್ಪಿ ಕೊಳ್ಳಲಿಲ್ಲವೇನೊ ? ತೀರ್ಮಾನವಾಗಿಯೂ ಒಪ್ಪಿಕೊಳ್ಳಲಿಲ್ಲ. ವಿಜಯ ನಗರ ರಾಜ್ಯದ ರಾಜಧಾನಿ ಹಂಪೆಯಲ್ಲಿ ಸಂಸ್ಕೃತಿಗೆ ಮತಧರ್ಮಕ್ಕೆ ಸಂಬಂಧಿಸಿದಂತೆ ಯಾವ ಪರಿಸ್ಥಿತಿ ಇದ್ದಿತು – ಪುರಂದರದಾಸರು ಅದನ್ನು ಪ್ರವೇಶಮಾಡುವ ಹೊತ್ತಿಗೆ – ಎಂಬುದನ್ನು ಸ್ಥೂಲವಾಗಿ ಈ ಸಂಗತಿಯ ಮತ್ತು ಸ್ಥಿತಿ ಚಿತ್ರವೂ ಕಾಣಿಸುವುದು. ರಾಜಗುರು ವ್ಯಾಸರಾಯರು ತಮ್ಮ ಬಳಿಗೆ ಬಂದ ಶ್ರೀನಿವಾಸನಾಯಕನೆಂಬವನನ್ನು ಶಿಷ್ಯನಾಗಿ ಸ್ವೀಕರಿಸಿ ಮಧ್ವ ಪಂಥಕ್ಕೆ ಸೇರಿಸಿಕೊಂಡು ಕನ್ನಡದಲ್ಲಿ ಆತನು ರಚಿಸಿ ಹಾಡಿದ ಹಾಡುಗಳನ್ನು ಹಿರಿಯವು, ಬೆಲೆಯುಳ್ಳವು, ಪ್ರಾಚೀನ ಪವಿತ್ರ ಗ್ರಂಥಗಳಲ್ಲಿ ಹೇಳಿರುವುದಕ್ಕೆ ಯೋಗ್ಯತೆಯಲ್ಲಿ ಸಮ ಎಂದು ನುಡಿದು ಸ್ವೀಕರಿಸಿದುದು ಈ ಹೊಸ ಸಂಪ್ರದಾಯವನ್ನು ಸ್ಥಾಪಿಸಿದುದಲ್ಲದೆ ದಾಸ ಪಂಥಕ್ಕೂ ದಾಸರಪದಗಳಿಗೂ ಒಂದು ಸಾರ್ವಜನಿಕ ಮಾನ್ಯತೆ, ಸ್ವೀಕಾರ ಬರುವಂತೆ ಮಾಡಿತು.

ಆರಂಭದಿಂದ ಹಿಡಿದು ಈ ಕಾಲದವರೆಗೆ ಪುರಂದರದಾಸರ ಜೀವನ ಯಾವ ರೀತಿ ಇದ್ದಿತೆಂಬುದನ್ನು ಕಲ್ಪಿಸಿಕೊಳ್ಳಲು ಈಗ ಯತ್ನಮಾಡ ಬಹುದು. ಅದು ಹೇಗೆ ರೂಪಗೊಂಡು–ಗುಣದಲ್ಲಿ ಯೋಗ್ಯತೆಯಲ್ಲಿ ಯಾವ ಪದವಿಗೇರಿತು ಎಂಬುದನ್ನು ಆ ಮೂಲಕ ಅರಿಯುವಂತಾಗುತ್ತದೆ.

# 2. ಮೊದಲ ದಿನಗಳು

ಈ ಕಾಲದ ಜನ ಸಂಗತ, ವಾಸ್ತವ ಎಂದು ಒಪ್ಪಿಕೊಳ್ಳುವಂತೆ ಪುರಂದರ ದಾಸರ ಜೀವನಚರಿತ್ರೆಯನ್ನು ಬರೆಯುವುದು ಅಶಕ್ಯ. ಖಚಿತವಾದ, ನಿರ್ವಿವಾದವಾದ, ಪ್ರಮಾಣಗಳಾಗಲಿ ಸಂಗತಿಗಳಾಗಲಿ, ಯಾವುವೂ ದೊರೆಯವು. ಆತನ ಬದುಕಿಗೆ ಸಂಬಂಧಿಸಿದ ಸುಮಾರು ಎಲ್ಲ ವಾರ್ತೆಯೂ ಚರ್ಚೆಗೆ, ವಾದಕ್ಕೆ ಎಡೆಕೊಟ್ಟಿದೆ. ಆತನು ಹುಟ್ಟಿದ ಸ್ಥಳ, ಆತನು ಹುಟ್ಟಿದ, ತೀರಿಕೊಂಡ ವರ್ಷ, ತಾರೀಖು, ಪಂಢರಪುರಕ್ಕೂ ಆತನಿಗೂ ಇರುವ ಸಂಬಂಧ, ಹಂಪೆಗೆ ಎಂದು ಬಂದುದು ಎಂಬುದು, ಆತನ ಹೆಂಡತಿಯ ಹೆಸರು, ಮಕ್ಕಳ ಸಂಖ್ಯೆ, ವ್ಯಾಸರಾಯರಿಂದ ಆತನು ದೀಕ್ಷೆ ಪಡೆದ ದಿವಸ, ಸಂವತ್ಸರ, ಈ ಎಲ್ಲ ಸಂಗತಿಗಳಲ್ಲಿಯೂ ವಾದ ಬೆಳೆದಿದೆ. ಒಂದೆರಡು ಚಿಲ್ಲರೆ ಅಂಶ ಒಂದೆರಡು ಪವಾಡ ಬಿಟ್ಟರೆ ಆತನು ಹಾಡುತ್ತಿದ್ದುದು ಹೇಗೆ? ಪದಗಳನ್ನು ಬರೆಯುತ್ತಿದ್ದುದು ಹೇಗೆ? ಯಾರು ಬರೆದುಕೊಳ್ಳುತ್ತಿದ್ದರು? ಕೃತಿಗಳಲ್ಲಿ ಯಾವುವು ಮುಂಚಿನವು? ಯಾವುವು ಆಮೇಲಿನವು? ಆತನ ಬಾಳಿನ ಯಾವ ಸಂಗತಿಗಳಿಗೆ ಅಥವಾ ಮಜಲಿಗೆ ಸಂಬಂಧಿಸಿದವು? ಎಂಬ ಯಾವ ಅಂಶದಲ್ಲಿಯೂ ನಿಷ್ಕೃಷ್ಟವಾದ ತಿಳಿವಳಿಕೆ ಇಲ್ಲ. ಈಗ ಅವರ ಹೆಸರಿನಲ್ಲಿರುವ ಅನೇಕ ಪದಗಳು ಇತರರ ರಚನೆ ಎಂದು ಗೊತ್ತಾಗುತ್ತದೆ. ಹೆಂಡತಿಯೊ, ಮಗನೊ, ಮಗಳೊ, ಶಿಷ್ಯನೊ, ಸೇವಕನೊ—ಅವನ್ನು ಬರೆದಿರಬಹುದೆಂಬ ಸಂಶಯಕ್ಕೆ ಅವಕಾಶವಿದೆ. ಆತನ ಹೆಸರಂಕಿತವನ್ನು ಹಾಕಿ ಯಾರು ಯಾರೊ ಕೃತಿಗಳನ್ನು ಬರೆದಿದ್ದಾರಾದೀತು. ಅವರ ಜೀವಿತಕಾಲ ದೀರ್ಘವಾದ್ದು. ಸುಮಾರು 80 ವರ್ಷ ಅವರು ಬದುಕಿದ್ದರೆನ್ನುತ್ತಾರೆ. ಮಧ್ಯವಯಸ್ಸಿನಲ್ಲಿ ಎಂದರೆ ಸುಮಾರು 40–45 ವಯಸ್ಸಿನ ಹೊತ್ತಿಗೆ ಆತನು ಹಂಪೆಗೆ ಬಂದು ವ್ಯಾಸರಾಯರಲ್ಲಿ ಶಿಷ್ಯತ್ವ ಪಡೆದಿರಬೇಕು. ಭರತಖಂಡವನ್ನೆಲ್ಲ ಆತನು ಸುತ್ತಿದ್ದನಂತೆ. ಎಲ್ಲೆಲ್ಲಿಯೂ ಬೇರೆ ಬೇರೆ ಪ್ರಕಾರಗಳಲ್ಲಿ ಪೂಜೆಗೊಳ್ಳುತ್ತಿದ್ದ ಹರಿಯಸ್ತೋತ್ರ ಮಾಡುತ್ತ ಹಾಡುತ್ತ ಸಂಚರಿಸಿರಬೇಕು. ಈ ಪ್ರವಾಸಕಾಲದಲ್ಲಿ ಬಗೆ ಬಗೆಯ ಜನರ

ಜೀವನ, ರೀತಿ, ಅವರ ಕಣ್ಣಿಗೆ ಬಿದ್ದಿರಬೇಕು. ದಿನ ಜೀವನದ ಸಂಗತಿ ಗಳು, ಸಾಮಾನ್ಯ ಜನರನ್ನು ಸಂಧಿಸಿದಾಗ ಆ ಎಲ್ಲ ಸಂದರ್ಭಗಳಲ್ಲಿಯೂ ಆತನು ವಿಶೇಷವಾಗಿ ನಡೆದಂತೆ, ನುಡಿದಂತೆ ಕಾಣುತ್ತದೆ. ಸೌಹಾರ್ದ ದಿಂದಲೂ, ಕರುಣೆಯಿಂದಲೂ ಕೆಲವನ್ನು ನುಡಿದಿದ್ದಾರೆ. ಏನನ್ನೊ ಒಪ್ಪದಂತೆ ಅಥವಾ ಟೀಕಿಸುವಂತೆ ಕೆಲವಲ್ಲಿ ಮಾತನಾಡಿದ್ದಾರೆ. ಪ್ರವಾಸ ವನ್ನು ಮುಗಿಸಿಕೊಂಡು ಹಂಪೆಗೆ ಹಿಂದಿರುಗಿ ಬಂದು ಈಗ 'ಪುರಂದರ ಮಂಟಪ' ವೆಂದು ಹೆಸರಾಗಿರುವ ಸ್ಥಳದಲ್ಲಿ ನೆಲೆಗೊಂಡು ನಿಂತಂತೆ ಕಾಣು ತ್ತದೆ. ರಕ್ತಾಕ್ಷಿ ಸಂವತ್ಸರ ಪುಷ್ಯಮಾಸದಲ್ಲಿ ಅಮಾವಾಸ್ಯೆಯ ದಿವಸ ಅವರು ತೀರಿಕೊಂಡರೆಂದು ಗೊತ್ತಾದ ಸಂಗತಿ.* ಆತನಿಗೆ ಸಂಬಂಧಿಸಿ ದಂತೆ ಇಂಥ ಸಂಗತಿಗಳು ನಡೆದವು. ಆತನು ಇಂಥಿಂಥುದನ್ನು ಮಾಡಿ ದರು, ಎಂಬ ಅಂಶಗಳಲ್ಲಿ ಕತೆ, ಪುರಾಣ ಬೆಳೆದು ಬಂದಿವೆ.

ಅತ್ಯಂತ ಆಧಿಕಾರಿಕವಾದುದು, ವ್ಯವಹಾರ ಪ್ರಪಂಚದಲ್ಲಿ ಏಕಮಾತ್ರ ಗಟ್ಟಿಪ್ರಮಾಣ ಎಂಬ ಒಂದು ಸಂಗತಿ, 1526ರ ಕಾಮಲಾಪುರ ಶಾಸನ. ಪುರಂದರದಾಸರ ಮೂರುಮಂದಿ ಗಂಡುಮಕ್ಕಳಿಗೆ ಅದರ ಮೂಲಕ ಭೂದಾನವಾಗಿದೆ. ಅದರಲ್ಲಿ ಕೆಲವು ಆಸ್ತಿಗಳನ್ನೂ ಆ ಕೊಡುಗೆಯ ಅಂಶ ವಾಗಿ ಕೊಟ್ಟಂತಿದೆ.† ಮಹಾರಾಜ ಕೃಷ್ಣದೇವರಾಯನು (1509–1529-30) ವ್ಯಾಸರಾಯರಿಗೆ ಕೊಟ್ಟಿದ್ದ ದತ್ತಿಗಳ ಭಾಗ ಅವು. ಮಧ್ವಪತಿ ಎಂಬ ಒಬ್ಬ ಮಗನ ಹೆಸರು ಎರಡಕ್ಕೂ ಸಮಾನವಾಗಿ ಗುರುತಿಗೆ ಸಿಕ್ಕು ತ್ತದೆ. ಇತರ ಎರಡು ಹೆಸರುಗಳು ದಾಸಪರಂಪರೆಯಲ್ಲಿ ಹೇಳಿರುವುದಕ್ಕೆ ಹೊಂದುವುದಿಲ್ಲ. ಇನ್ನೊಂದು ವಿಶೇಷ ಸಂಗತಿ ಶಾಸನದಲ್ಲಿರುವುದು– ಕಾಯಿದೆಯ ಪ್ರಕಾರ ಈ ಮೂರು ಮಕ್ಕಳ ತಂದೆಯ ಹೆಸರು ಪುರಂದರ

---

* ಇಷ್ಟು ಮಾತ್ರ ಸಂಗತಿಗಳನ್ನು ಗೊತ್ತಾಗಿ ತಿಳಿಸಬಹುದು. ಅವರು ತೀರಿಕೊಂಡ ದಿನ 1564ರಲ್ಲಿಯೋ 1565ರಲ್ಲಿಯೋ ಎಂದು ಕೂಡ ಪ್ರಶ್ನೆ ಇದೆ. ಅದು ಶನಿವಾರವೊ, ಭಾನುವಾರವೊ, ಮಂಗಳವಾರವೊ ಎಂಬ ವಾದಗಳೂ ಎದ್ದಿವೆ.

† ಶಾಸನದಲ್ಲಿರುವ ಮೂರು ಹೆಸರುಗಳು; ಲಕ್ಷ್ಮಣದಾಸ, ಹೇಬಣದಾಸ, ಮಧ್ವಪದಾಸ. ಸಂಪ್ರದಾಯರೀತ್ಯ ಬಂದಿರುವುದು 4 ಹೆಸರು–ವರದ, ಗುರುರಾಯ, ಅಭಿನವ ಪುರಂದರ ಮತ್ತು ಮಧ್ವಪತಿ.

ವಿಠಲವೆಂಬುದು. ಅವರು ವಸಿಷ್ಠಗೋತ್ರಕ್ಕೆ ಋಕ್ ಶಾಖೆಗೆ ಸೇರಿದವರು ಎಂಬುದು. ಯಾವ ಭೂಮಿ ಕಾಣಿಯನ್ನೂ ತಂದೆಗೆ ಕೊಟ್ಟಂತಿಲ್ಲ. ಆತನು ಹರಿದಾಸ. ಯಾವ ಆಸ್ತಿಯನ್ನಾಗಲಿ ಕೊಡುಗೆಯಾಗಿ ಇನ್ನೊಬ್ಬ ರಿಂದ ಸ್ವೀಕರಿಸಿದವರಲ್ಲ ಎಂಬ ಕಾರಣದಿಂದಿದ್ದೀತು. ಹೆಸರುಗಳ ಜೊತೆಗೆ ಸೇರಿಕೊಂಡು ಬಂದಿರುವ 'ದಾಸ' ಎಂಬ ಅಂಶ ಅವರು ಪ್ರಾಪ್ತ ವಯಸ್ಕ ರಾಗಿದ್ದರು, ತಂದೆಯ ಅನುಯಾಯಿಗಳಾಗಿದ್ದರು ಎಂಬುದನ್ನು ತಿಳಿಸುತ್ತದೆ. ಸಂಪ್ರದಾಯದ ಪ್ರಕಾರ, ಪುರಂದರದಾಸರಿಗೆ ನಾಲ್ವರು ಗಂಡುಮಕ್ಕಳೂ ಒಬ್ಬ ಹೆಣ್ಣುಮಗಳೂ ಇದ್ದರೆಂಬುದು, ಗಂಡುಮಕ್ಕಳಲ್ಲಿ ಎಲ್ಲರಿಗಿಂತ ಕಿರಿ ಯವನಾದವನು ಬಹುಶಃ ತೀರಿಕೊಂಡಿದ್ದನೆಂದೂ ಎಣಿಸಿದರೆ, ಎಲ್ಲರಿಗಿಂತ ಹಿರಿಯ ಮಗನಿಗೆ ಆ ಕಾಲಕ್ಕೆ ಸುಮಾರು 25 ವರ್ಷ ವಯಸ್ಸು ಇದ್ದೀತು. ಶಾಸನದ ವರ್ಷ 1526 ಆಗಿರುವಾಗ ಮಧ್ವಪತಿಗೆ 25–26 ಆಗಿರಲು ಪುರಂದರದಾಸರ ಜನ್ಮಕಾಲವನ್ನು ಇನ್ನೂ 20 ವರ್ಷ ಹಿಂದಕ್ಕೆ ತೆಗೆದು ಕೊಂಡು ಹೋಗಿ, ಒಂದು ದೀರ್ಘ ತಲೆಮಾರು ಕಾಲ–ಸ್ಥೂಲವಾಗಿ 1480 ಅಥವಾ ಇತರ ಕೆಲವರು ಹೇಳುವಂತೆ 1484–ಅವರ ಜನ್ಮ ಸಂವತ್ಸರ ಎಂದುಕೊಳ್ಳಬಹುದು.

ಈ ಹೊತ್ತಿಗಾಗಲೇ ಪುರಂದರದಾಸರು ವ್ಯಾಸರಾಯರ ಶಿಷ್ಯರಾಗಿ ಸ್ವೀಕೃತರಾಗಿದ್ದರು. ವ್ಯಾಸರಾಜರು, ರಾಜಗುರುಗಳಾಗಿದ್ದರು. 'ಕುಹೂ ಯೋಗ' ಮುಗಿದುಹೋಗಿತ್ತು. ಕಾಶಿಯಲ್ಲಿ, ಬೃಂದಾವನದಲ್ಲಿ ಅನೇಕ ಮಂದಿ ವಿದ್ವಾಂಸರ ಮೇಲೆ ವಾದದಲ್ಲಿ ಜಯಗಳಿಸಿ ವ್ಯಾಸರಾಯರ ಕೀರ್ತಿ ಶಿಖರವನ್ನು ಮುಟ್ಟಿದ್ದುದೂ ಅಲ್ಲದೆ ಮೇಧಾವಿತನದಲ್ಲಿಯೂ, ಆಧ್ಯಾತ್ಮಿಕ ಪ್ರಭಾವದಲ್ಲಿಯೂ ಅವರು ಸುಪ್ರತಿಷ್ಠಿತರಾಗಿದ್ದರು. ಶಿಷ್ಯರಾಗಿ ಅವರ ಬಳಿಯಲ್ಲಿ ವಾದಿರಾಜರಿದ್ದರು. ಗುರುಗಳ ಹೆಸರಿನಲ್ಲಿ ವ್ಯಾಸ ಸಮುದ್ರ ಎಂಬ ಹೆಸರಿನ ಒಂದು ಕೆರೆಯನ್ನು ಕಟ್ಟಿಯಾಗಿತ್ತು. 16ನೆಯ ಶತಮಾನದ 20ನೆಯ ವರ್ಷಗಳ ಮೊದಮೊದಲ ಕಾಲದಲ್ಲಿ ಸುಮಾರು ಪುರಂದರ ದಾಸರು ಹಂಪೆಗೆ ಬಂದಿರಬೇಕು. ಆವರೆಗೆ ಜನಜೀವನ ಲೋಕವ್ಯವಹಾರ ಗಳಲ್ಲಿ ಬೇಕಾದಷ್ಟು ತಿಳಿವಳಿಕೆ ಉಂಟಾಗಿತ್ತು. ವ್ಯಾಸರಾಯರ ಆಧಿಪತ್ಯ ದಲ್ಲಿ ಗುರು ನಿರ್ದೇಶನದಲ್ಲಿ ದಾಸಪದವಿಯನ್ನು ಸ್ವೀಕರಿಸಿ ಮಾಧ್ವ ತತ್ವ

ದಲ್ಲಿ ದೀಕ್ಷೆ ಪಡೆಯಬೇಕೆಂಬ ವಿಶ್ವಾಸ ಉಂಟಾದ್ದರಿಂದ ಬದುಕಿನ ಈ ಮಾರ್ಪಾಡನ್ನು ಆತನು ಸಂಪೂರ್ಣವಾಗಿ ಬಯಸಿರಬೇಕು. ಹಂಪೆ ಯಲ್ಲಿದ್ದ ವಿದ್ವಾಂಸರ ಎದುರಿಗೂ, ಸಂಪ್ರದಾಯಸ್ಥರ ಎಣಿಕೆಯಲ್ಲಿಯೂ ಸ್ಥಾನಮಾನ ಪಡೆದುಕೊಳ್ಳುವುದಕ್ಕೆ ಸ್ವಲ್ಪಕಾಲ ಹಿಡಿದಿರಬೇಕು.

ಅಲ್ಲಿಯವರೆಗೆ ಆತನ ಜೀವನದಲ್ಲಿ ಯಾವ ಯಾವ ಸಂಗತಿಗಳು ನಡೆದಿದ್ದವು ಎಂಬುದು ಊಹೆಗೂ, ಕಲ್ಪನೆಗೂ ಮಾತ್ರ ಗೋಚರವಾಗಬಲ್ಲದು. ಆತನು ಹಂಪೆಗೆ ಬಂದುದು ಯಾವುದೋ ಒಂದು ಆಧ್ಯಾತ್ಮಿಕ ನಿರ್ದೇಶನ ಆತನಿಗೆ ಆಗಿ; ಹಂಪೆಗೆ ಹೋಗಿ ಅಲ್ಲಿ ವ್ಯಾಸರಾಯರ ಉಪದೇಶವನ್ನೂ ಮಾರ್ಗದರ್ಶನವನ್ನೂ ಪಡೆದುಕೊ ಎಂದು ಬಂದಿತ್ತಂತೆ. ಆ ಸಂಗತಿ ನಡೆದುದು ಆತನ ಪಂಢರಪುರದಲ್ಲಿದ್ದ ಜೀವಿತಕಾಲಕ್ಕೆ ಸಂಬಂಧಿಸಿದುದೆನ್ನುತ್ತಾರೆ. ದಾಸರು ಪಂಢರಪುರಕ್ಕೆ ಹೇಗೆ ಹೋದರು, ಎಲ್ಲಿಂದ ಹೋದರು ಎಂಬುದಕ್ಕೆ ಯಾವ ಆಧಾರವೂ ಇಲ್ಲ. ಅವರು ಪಂಢರಪುರದಲ್ಲಿ 12 ವರ್ಷ ವಿದ್ದರೆಂದು ಒಂದು ವರದಿಯ ಪ್ರಕಾರ ತಿಳಿದುಬರುತ್ತದೆ. ಕರ್ನಾಟಕದ ಹೊರಗಿನ ಒಂದು ಪ್ರದೇಶದಿಂದ ಅವರು ಪಂಢರಪುರಕ್ಕೆ ಹೋದರೇ ? ಅದೇ ಊರಿನ ಹತ್ತಿರದಲ್ಲಿದ್ದ ಬೇರೆ ಯಾವುದಾದರೂ ಸ್ಥಳದಿಂದ ಹೋದರೇ ? ಈಗ ಶಿವಮೊಗ್ಗ ಜಿಲ್ಲೆಯಾಗಿರುವ ಪ್ರಾಂತದಲ್ಲಿ ಉಡುಪಿಗೂ–ಬಯಲು ನಾಡಿಗೂ ನಡುವೆಯ ಒಂದು ಭಾಗದಿಂದ ಹೋದರೇ ಎಂಬುದು ನಿಶ್ಚಯ ವಾಗಿ ತಿಳಿಯುವಹಾಗಿಲ್ಲ. ಐತಿಹ್ಯವೊಂದರ ಪ್ರಕಾರ ಅವರು ಮಹಾರಾಷ್ಟ್ರದ ಪುರಂದರಘಡದಿಂದ–ಎಂದರೆ ಇಂದಿನ ಪುಣೆಯ ಹತ್ತಿರದ ಒಂದು ಸ್ಥಳ ದಿಂದ–ಬಂದರು. ಆ ಪುರಂದರಘಡದಲ್ಲಿ ಜವಾಹಿರಿ ವರ್ತಕರಾಗಿ ಹಣದ ಲೇವಾದೇವಿ ಮಾಡುತ್ತಿದ್ದ ಶ್ರೀಮಂತ ಮನೆತನದವರೊಬ್ಬರು ಎಂಬ ಸಂಗತಿಗೆ ಭೌಗೋಳಿಕ ಆಧಾರವಾಗಲಿ ಅಲ್ಲಿನ ಜನವರ್ಗದೊಡನೆ ಭಾಷೆಯ ಅಥವಾ ಸಾಮಾಜಿಕ ಸಂಬಂಧಗಳಿಗಾಗಲಿ ಯಾವ ಆಧಾರ ಪ್ರಮಾಣಗಳೂ ಇಲ್ಲ. ಆ ಪ್ರದೇಶದಲ್ಲಿ ಇವರ ಸಂಬಂಧದ ಜನಜನಿತವಾದ ಸುದ್ದಿಯಿಲ್ಲ; ಚಿಟ್ಟೆಕತೆಗಳಿಲ್ಲ; ಸಂಪರ್ಕಸೂಚನೆಗಳಿಲ್ಲ. ಆತನ ರಚನೆಗಳಲ್ಲಿ ಕಾಣುವ ಭಾಷೆಯ ನುಡಿಗಟ್ಟಿಗೂ, ಆ ಪ್ರದೇಶದ ಬಳಕೆಯ ಭಾಷೆಗೂ ಸಂಬಂಧ ವಿಲ್ಲ. ತಮ್ಮ ರಚನೆಗಳಲ್ಲಿ ಅವರು ಬಳಸುವ ಪೂರ್ತಿ ದಕ್ಷಿಣಾದಿ ಅಥವಾ

ಕರ್ನಾಟಕ ಸಂಪ್ರದಾಯದ ಸಂಗೀತ ಪದ್ಧತಿಯಂತೂ ಪುಣೆಯಹತ್ತಿರದ ಆ ಪ್ರದೇಶದಲ್ಲಿ ಇರುವುದು ಶಕ್ಯವಿಲ್ಲ. ಪುರಂದರಘಡ, ಗಿರಿದುರ್ಗವಾದ್ದು ಶಿವಾಜಿಯ ಕಾಲದಲ್ಲಿ–ಎಂದರೆ ಈಚಿನ 17ನೆ ಶತಮಾನದಲ್ಲಿ. ಅಲ್ಲಿ ವಾಸ ಮಾಡುವ ಜನರೆಲ್ಲ ಮರಾಠಿ ಮಾತ್ರ ಮಾತಾಡುವವರು. ಪುರಂದರದಾಸ ರೆಂಬವವರನ್ನು ಕುರಿತು ಆ ಕಾಲದ ಮರಾಠಿ ದಾಖಲೆ, ದಂತಕಥೆ ಯಾವುದೂ ಇಲ್ಲ. ಯಾವುದನ್ನು ಮತಧರ್ಮದ ಅಥವಾ ಸಂಸ್ಕೃತಿಯ ಪ್ರಭಾವ ಎನ್ನ ಬಹುದೋ ಅಂಥದರ ಸೆಲೆಯೂ ಅಲ್ಲಿ ಕಾಣುವುದಿಲ್ಲ. ಅಲ್ಲಿ ಶ್ರೀನಿವಾಸ ನಾಯಕ ಲಾಭಕರವಾದ ಸರಾಫ್ ವ್ಯಾಪಾರ ಮಾಡುತ್ತಿದ್ದಿರಬೇಕೆಂಬುದೂ ಅಸಂಭವ. ಆತನ ಹೆಸರು ವಿಜಯನಗರ ರಾಜ್ಯದಂಥ ಶ್ರೀಮಂತ ರಾಜ್ಯ ದಲ್ಲಿ ಎಲ್ಲರಿಗೂ ತಿಳಿದಿತ್ತು. ಅಲ್ಲಿನ ಮತ್ತು ಬಿಜಾಪುರದ ಅರಸು ಗಳೊಡನೆಯೂ ಶ್ರೀಮಂತರೊಡನೆಯೂ ಹಣದ ವ್ಯವಹಾರ ಮಾಡು ತ್ತಿದ್ದರು. ಎಷ್ಟೋ ಜನದೊಡನೆ ಲೇವಾದೇವಿ ಮಾಡುತ್ತಿದ್ದರು. ಎಂತಹ ಬೆಲೆಯುಳ್ಳ ರತ್ನಪಡಿ ಒಡವೆಗೂ ನಿಷ್ಕೃಷ್ಟವಾದ ಬೆಲೆ ನಿರ್ಣಯ ಮಾಡು ವುದರಲ್ಲಿ, ರತ್ನಪರೀಕ್ಷೆಯಲ್ಲಿ ಆತನು ನಿಷ್ಣಾತನಾಗಿದ್ದನು ಎಂಬುದು ನಿಜ ವಾದರೆ ಮಹಾರಾಷ್ಟ್ರ ಜನಕ್ಕೆ ಅವರು ಪೂರ್ತಿ ಅಪರಿಚಿತರಾಗಿದ್ದರೆಂಬುದು ನಂಬಲಾಗದ್ದು. ಪುರಂದರದಾಸರೆಂಬ ಹೆಸರಿನ ಮೇಲೆ ಪುರಂದರ ಘಡಕ್ಕೂ ಅವರಿಗೂ ಸಂಬಂಧ ಕಲ್ಪಿಸಿ ಇರುವುದು. ಪುರಂದರದಾಸರ ತರುವಾಯ ನೂರು ವರ್ಷಗಳಾದಮೇಲೆ ಇದ್ದ ವಿಜಯದಾಸರು. ಗುರು ಪುರಂದರರೆಂಬ ಇನ್ನೂ ಚಿತ್ರವಿಚಿತ್ರವಾದ ಪುರಾಣಗಳನ್ನು ಅವರ ವಿಷಯ ದಲ್ಲಿ ಕಟ್ಟಿರುವುದು ಇಂಥ ಕಲ್ಪನೆಗಳಿಗೆಲ್ಲ ಕಾರಣ.

ಇತರ ಕೆಲವು ಪ್ರಮಾಣಗಳು ಬೇರೆ ಊರಿನ ಸಂಬಂಧವನ್ನು ಸೂಚಿಸು ತ್ತವೆ. ಪುರಂದರ ಘಟ್ಟ ಪುರಂದರಾಲಯ ಅಥವಾ ಪಾಕಶಾಸನಪುರ ಎಂಬ ಹೆಸರುಗಳು ಅಲ್ಲಿ ಬರುತ್ತವೆ. ಇದರಿಂದ ಅವರ ತವರುಮನೆ, ನಮ್ಮ ಘಟ್ಟದ ಯಾವುದೋ ಒಂದು ಊರು ಎಂದಾಗಬಲ್ಲದು. ನಮ್ಮಲ್ಲಿ ಇತಿಹಾಸ ಸಂಶೋಧನೆಯಲ್ಲಿ ನಿಪುಣರಾದ ಶ್ರೀ ಕಪಟರಾಳ ಕೃಷ್ಣರಾಯರು ಕೆಲವು ಆಧಾರಗಳ ಮೇಲೆ ಆ ಸ್ಥಳ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕು ಆರಗ ಪ್ರಾಂತದಲ್ಲಿದ್ದ ಪುರಂದರ ಎಂಬ ಹಳ್ಳಿ ಎಂದು ಸೂಚಿಸು

ತ್ತಾರೆ. ಅದು ಆ ಕಾಲದಲ್ಲಿ ಪ್ರಖ್ಯಾತವಾಗಿದ್ದ ವಾಣಿಜ್ಯ–ವ್ಯಾಪಾರ ಕೇಂದ್ರ. ಜೈನರ ಒಂದು ದೊಡ್ಡ ಜನವರ್ಗ ಅಲ್ಲಿತ್ತು. ನಾಯಕ ಎಂಬ ಹೆಸರಿನ ಅನೇಕ ಬ್ರಾಹ್ಮಣ ಮನೆತನಗಳು ಅಲ್ಲಿದ್ದವು. ಆದ್ಯರೆಂಬ ಹೆಸರಿನ ಅನೇಕ ಮಂದಿ, ವಿದ್ಯೆಗೂ, ಭಕ್ತಿಗೂ ಹೆಸರಾಗಿದ್ದ ಅವರಲ್ಲಿ ಮೇಧಾವಿಗಳಿದ್ದರು. ಶಾಸನ ಒಂದರಲ್ಲಿ ಅಂಥ ಒಬ್ಬನ ಸಂಬಂಧದಲ್ಲಿ ಭರತಶಾಸ್ತ್ರ ವಿಚಾರವಿತ್, ಸೋಮನಾಥಾತ್ಮಜ ಮಾಯಿಭಟ್ಟ ಎಂಬವನನ್ನು ಕುರಿತು ಪ್ರಮಾಣ ದೊರಕುತ್ತದೆ. ಆ ಶಾಸನದ ಕಾಲ 1464 ಆರಗ ಪ್ರದೇಶದಲ್ಲಿ ಪಾಂಡುರಂಗ ಭಕ್ತಿಯ ಪ್ರಚಾರವಿತ್ತು. ಇದು ಪಶ್ಚಿಮದಲ್ಲಿ ಉಡುಪಿಗೂ, ಈಶಾನ್ಯದಲ್ಲಿ ಪಂಢರಪುರಕ್ಕೂ ನಡುವೆಯ ಸ್ಥಳ. ಇದು ಪುರಂದರರ ಊರು ಎಂಬುದಕ್ಕೆ ವಿರುದ್ಧವಾದ ಒಂದೇ ಸಂಗತಿ ದಾಸರ ಪದಗಳಲ್ಲಿ ಇರುವ ಭಾಷೆಗೂ ಇಲ್ಲಿ ಜನರಾಡುವ ಭಾಷೆಗೂ ನುಡಿಗಟ್ಟಿಗೂ ಇರುವ ವ್ಯತ್ಯಾಸ. ಆದರೆ ಶ್ರೀನಿವಾಸನಾಯಕನಿಗೆ ಬಿಜಾಪುರ, ಸೊಲ್ಲಾಪುರ, ಪುರಂದರ ಪುರ, ಹಂಪೆಗಳ ಸಂಪರ್ಕ ತುಂಬಾ ಆಪ್ತವಾಗಿದ್ದಿರಬಹುದು. ಅಲ್ಲಿನ ಜನರೊಡನೆ ಹತ್ತಿರದ ವ್ಯವಹಾರವಿಟ್ಟುಕೊಂಡಿದ್ದ ಆತನಿಗೆ ಆ ಭಾಷೆ, ನುಡಿಗಟ್ಟು ಚೆನ್ನಾಗಿ ಪರಿಚಿತವಾಗಿರಬಲ್ಲವು. ಒಂದು ಪದದಲ್ಲಿ ಎಳನೀರಿಗೆ ಸೀಯಾಳ ಎಂಬ ಪದದ ಪ್ರಯೋಗ ಕಂಡುಬರುತ್ತದೆ. ಇದು ನಮ್ಮ ಮಲೆನಾಡಿನ ಘಟ್ಟ ಪ್ರದೇಶಗಳಲ್ಲಿ ಉತ್ತರ ದಕ್ಷಿಣ ಕರೆನಾಡಿನಲ್ಲಿ ಮಾತ್ರ ಬಳಕೆಯಲ್ಲಿರುವ ಮಾತು. ಪಂಢರಪುರದಲ್ಲಿಯೊ, ಹಂಪೆಯಲ್ಲಿಯೊ ಆತನು ಧೀರ್ಘಕಾಲ ಇದ್ದನೆಂಬ ಪ್ರತೀತಿಯೂ ಇದೆ. ಪಂಡರಿಗೆ ಬಳಿಯ ಯಾವುದೊ ಊರಲ್ಲಿ ಶ್ರೀನಿವಾಸ ನಾಯಕ ಕೆಲವು ಕಾಲ ವಾಸಮಾಡಿಕೊಂಡಿದ್ದಿರಬಹುದು. ಇದೆಲ್ಲವೂ ಬಹುದು ಪ್ರಪಂಚ. ಯಾವರ್ಥದಲ್ಲಿಯೂ ಅನುಮಾನದ್ದು; ನಿಜ ತಿಳಿಯದು.

ಪುರಂದರದಾಸರ ಪೂರ್ವಾಶ್ರಮದ ಹೆಸರು ಕಡೆಯಪಕ್ಷ ಮೂರಿವೆ. ಶ್ರೀನಿವಾಸನಾಯಕ; ಕೃಷ್ಣನಾಯಕ; ಪುರಂದರವಿಠಲ ಎಂದು. ಕಡೆಯ ಹೆಸರು ಇವರ ತಂದೆಯ ಹೆಸರನ್ನು ಕೂಡ ಒಪ್ಪದೆ ಅವರ ಹೆಸರನ್ನು ವಿಠಲ ನೆನ್ನುತ್ತಾರೆ. ಹುಡುಗನಿಗೆ ಪುರಂದರನೆಂಬ ಹೆಸರೆ ಇಷ್ಟವಾಗಿ ಅವನು ಪುರಂದರವಿಠಲನಾದನೆಂಬುದೊ ಸುಮಾರು ಇಂದಿನ ಅಂತರಾಷ್ಟ್ರೀಯ

ಬಳಕೆಗೆ ಒಪ್ಪುವಂತಹ ನವೀನಮಾರ್ಗವಾಗುತ್ತದೆ. ಅಷ್ಟೇ ಹೊರತು ನಿಜವೊ, ಇಲ್ಲವೊ. ಈ ಸಂಗತಿಗಳನ್ನೆಲ್ಲ ನಮ್ಮವರೆಗೆ ಬಂದಿರುವ, ಅವರಿಗೆ ಸಂಬಂಧಿಸಿದ ಕಥಾಸಂಪ್ರದಾಯವನ್ನು ಒಪ್ಪಲು ಕಷ್ಟವಾಗುತ್ತದೆ. ಹೇಗೆ ಹೇಗೊ ಕಟ್ಟಿ ಮಾಡಿದಂತೆ ಕಾಣುತ್ತದೆ. ಕೃಷ್ಣನಾಯಕನೆಂಬ ಹೆಸರಿಗೂ, ಹೆಚ್ಚು ಪ್ರಮಾಣ ದೊರಕದು. ಎಲ್ಲಕ್ಕಿಂತ ಹೆಚ್ಚಿನ ಪ್ರಮಾಣ ದೊರಕುವುದು ವರದಪ್ಪನಾಯಕರ ಮಗ ಶ್ರೀನಿವಾಸನಾಯಕ ಎಂಬುದಕ್ಕೆ. ತಂದೆ ಚಿನಿವಾರ ವೃತ್ತಿಯಲ್ಲಿ ಹೆಸರಾದವರು. ಧನಸಂಗ್ರಹ ಮಾಡಿದ್ದವರು. ತಂದೆಯ ತರುವಾಯ ಮಗನಿಗೆ ಆ ಉದ್ಯೋಗ ಬಂದಿತು. ಒಡವೆ ವಸ್ತುಗಳ ಮತ್ತು ನವರತ್ನಗಳ ವ್ಯಾಪಾರ. ದೊಡ್ಡ ದೊಡ್ಡ ಸಾಲಗಳನ್ನು ಕೊಟ್ಟು ಲೇವಾದೇವಿ ಮಾಡುವುದರ ಜೊತೆಗೆ ತುಂಬಾ ಆಚಾರವಂತರಾದ ಒಂದು ಬ್ರಾಹ್ಮಣ ಕುಟುಂಬ ಅವರದು. ಆದರೂ ಚಿನಿವಾರಿಕೆಯಲ್ಲಿ ತಂದೆ ಮಕ್ಕಳ ಇಬ್ಬರ ಮನಸ್ಸೂ ಹಣದ ಶೇಖರಣೆಯ ಕಡೆಗೂ ನಿರ್ದಾಕ್ಷಿಣ್ಯದಿಂದ ಹಣ ಸಂಪಾದನೆ ಮಾಡುವ ಕಡೆಗೂ ತಿರುಗಿಸಿತ್ತು. ಹುಡುಗನಾಗಿದ್ದಾಗ ಶ್ರೀನಿವಾಸನಾಯಕನಿಗೆ ಒಳ್ಳೆಯ ವಿದ್ಯಾಭ್ಯಾಸ ನಡೆದಿರಬೇಕು. ಹಾಗೆಯೇ ಮನೆತನಕ್ಕೆ ಬಂದ ಮತಧರ್ಮ ಪದ್ಧತಿಗಳು, ನಂಬಿಕೆಗಳು, ಶ್ರದ್ಧೆ, ಚೆನ್ನಾಗಿ ಗೊತ್ತಿದ್ದಿರಬೇಕು. ಸಂಗೀತದಲ್ಲಿ ವ್ಯುತ್ಪತ್ತಿ, ಅಭ್ಯಾಸ ಇದ್ದಿರಬೇಕು. ಸ್ವಲ್ಪಮಟ್ಟಿಗಾದರೂ ಅದರ ತಿಳಿವು, ಶಿಕ್ಷಣ ಇಲ್ಲದಿದ್ದರೆ ಆ ಕಲೆಯಲ್ಲಿ ನಿಷ್ಣಾತರಾಗುವುದೂ ಸಂಗೀತ ಕೃತಿಗಳ ರಚನೆ ಮಾಡುವುದೂ ತಟ್ಟನೆ ಒದಗುವ ವಿದ್ಯೆಗಳಲ್ಲ. ಆತನಿಗೆ ಸಣ್ಣವಯಸ್ಸಿನಲ್ಲಿಯೇ ಮದುವೆಯಾಯಿತು. ಹೆಂಡತಿಯ ಹೆಸರು ಸರಸ್ವತಿಬಾಯಿ. (ಆಕೆಗೂ ಬೇರೆಬೇರೆ ಹೆಸರುಗಳಿವೆ.) ಆಕೆ ಸಂಪ್ರದಾಯಸ್ಥರ ಮನೆಯಿಂದ ಬಂದ ಹೆಣ್ಣುಮಗಳು. ಆಕೆಯ ಧರ್ಮ ಶ್ರದ್ಧೆ ದೈವಭಕ್ತಿಗಳು ಉದಾರವಾಗಿದ್ದಿರಬೇಕು. ಆತನ ಬದುಕಿನಲ್ಲಿ ಮೊದಲಿಂದಲೂ ಬಾಳ ಸುಖಕ್ಕೂ ನೆಮ್ಮದಿಗೂ ಅವು ದೊಡ್ಡ ನೆರವಾದವು.

ತಂದೆ ತೀರಿಕೊಂಡ ತರುವಾಯ ಅದೇ ವೃತ್ತಿಯಲ್ಲಿ ತೊಡಗಿ ಶ್ರೀನಿವಾಸನಾಯಕನು ತನ್ನ ಮನಸ್ಸನ್ನು ಸಂಪೂರ್ಣವಾಗಿ ಅದರಲ್ಲಿ ನೆಟ್ಟನು. ವಿದ್ಯಾಶಿಕ್ಷಣ ಸಂಪನ್ನನಾಗಿ ಒಳ್ಳೆಯ ಮನೆತನದಲ್ಲಿ ಬೆಳೆದ ಮನೆತನದವನಾದರೂ–

ಧನವನ್ನು ಸಂಪಾದಿಸುವ ಸಂಭ್ರಮ ಕಲಾಪಗಳಲ್ಲಿ ಸುಶಿಕ್ಷಿತನಾದ ಯುವಕ ನಲ್ಲಿ ಹೊಮ್ಮಿ ಕಾಣಿಸಬೇಕಾಗಿದ್ದ ಮಾನವೀ ಗುಣಗಳು ಬದಿಗೆ ಬಿದ್ದವು. ಸಾಮಾನ್ಯ ಮಾನವೀಯತೆಯನ್ನು ಕಾಣಿಸುವ ಲಕ್ಷಣಗಳು ಕೂಡ ಆತನಲ್ಲಿ ಕಾಣದಂತಾಗಿರಬೇಕು. ಅವನು ವಜ್ರವನ್ನೂ ಇತರ ನವರತ್ನಗಳನ್ನೂ ಮಾರುವ ಉದ್ದೇಶದಿಂದ ಅನೇಕಸಲ ವಿಜಯನಗರದ ರಾಜಧಾನಿಯಾದ ಹಂಪೆಗೆ ಹೋಗಿದ್ದನೆಂಬುದು ಪ್ರತೀತಿ. ಅಲ್ಲಿನ ಅತಿ ಪ್ರಖ್ಯಾತರಾದ ಜನರಿಗೆ 'ನವಕೋಟಿ ನಾರಾಯಣ' ಎಂಬ ಹೆಸರಿಂದ ಪ್ರಖ್ಯಾತನಾಗಿದ್ದ ನಂತೆ. ತನ್ನ ಗಂಡನನ್ನು ಕುರಿತು ಅವನಂತೆ ಜಿಪುಣನು ಇನ್ನಾರೂ ಇಲ್ಲ ವೆಂಬ ದುಷ್ಕೀರ್ತಿ ಬೆಳೆಯುತ್ತಿದ್ದುದನ್ನು ನೋಡಿ ಹೆಂಡತಿಗೆ ತುಂಬಾ ವ್ಯಥೆ ಆಗಿದ್ದೀತು. ಮಾನವ ಸಹಜವಾದ ಯಾವ ದಾಕ್ಷಿಣ್ಯದಿಂದಲೂ ದಿನದಿನಕ್ಕೆ ದೂರನಾಗುತ್ತಿದ್ದ ಆತನನ್ನು ಕುರಿತು ಸುತ್ತಲಿನ ಜನ ಸಿಕ್ಕಹಾಗೆ ಮಾತನಾಡುತ್ತಿರಲು ಅವನ ಹೃದಯ ಕಠಿಣವೆಂದು ಅಪವಾದವಿತ್ತು. ತನ್ನ ಹುಟ್ಟಿದ ಮನೆಯಲ್ಲಿ ದೈವಭಕ್ತಿ ಧರ್ಮಶ್ರದ್ಧೆ ವಿಶೇಷವಾಗಿದ್ದಿತ್ತಾಗಿ ಈಕೆಗೆ ಈ ಪರಿಸ್ಥಿತಿಯಲ್ಲಿ ಮನಸ್ಸಿಗೆ ದೊಡ್ಡ ನೋವಾಗಿರಬೇಕು. ಆದರೆ ಸಾಧ್ವಿಯಾದ ಆಕೆಗೆ ಗಂಡನ ಪರವಾದ ವಿಶ್ವಾಸ ಭಕ್ತಿ ಒಮ್ಮೆಯೂ ಒಂದಿಷ್ಟೂ ಕಡಮೆಯಾದಂತಿಲ್ಲ.

ಮುಂದಿನ ಕಾಲದ ಒಬ್ಬ ದಾಸರು ಹೀಗೆ ಬರೆದಿದ್ದಾರೆ. ಕಥೆ ಹೀಗೆ ಬೆಳೆಯುತ್ತದೆ. ಒಂದು ಸಲ ಒಬ್ಬ ಮುದಿಬ್ರಾಹ್ಮಣ ತನ್ನ ಹುಡುಗನನ್ನು ಜೊತೆಯಲ್ಲಿ ಕರೆದುಕೊಂಡು ಪ್ರತಿದಿವಸವೂ ಕೆಲಕಾಲ ಶ್ರೀನಿವಾಸ ನಾಯಕನಲ್ಲಿಗೆ ಹೋಗುತ್ತಿದ್ದನಂತೆ; ಆ ಹುಡುಗನ ಉಪನಯನಕ್ಕಾಗಿ ನಾಯಕರಿಂದ ಸಹಾಯ ಬೇಡುತ್ತಿದ್ದನಂತೆ. ಸಿರಿವಂತನಾದ ಅಂಥ ವ್ಯಾಪಾರ ಗಾರನಿಂದ ನನ್ನಲ್ಲೇನೂ ಇಲ್ಲವೆಂಬ ಮಾತನ್ನು ಉತ್ತರವಾಗಿ ತೆಗೆದು ಕೊಳ್ಳಲು ಅವನಿಗೆ ಒಪ್ಪಿತವಲ್ಲ. ನೆರವು ಕೊಡಲು ತನಗಿಷ್ಟವಿಲ್ಲ ಎಂಬು ದನ್ನು ಅರ್ಥಮಾಡಿಕೊಳ್ಳದೆ ಈ ಮುದುಕನು ದಿನಾ ಬಂದು ಪೀಡಿಸು ವುದನ್ನು ನೋಡಿ ನಾಯಕನಿಗೆ ಬೇಸರ ಬಂದಿರಬೇಕು. ಸುಮಾರು ತಿಂಗಳಕಾಲ ಮುದುಕ, ಹುಡುಗ ಇಬ್ಬರೂ ನೆರವಿಗಾಗಿ ಕಾದರಂತೆ. ಕಾದು ಬೇಸರವಾಗಿ 'ಏನನ್ನಾದರೂ ಕೊಡುವಿರೊ ಇಲ್ಲವೊ; ಕಡೆಯದಾಗಿ

ತಿಳಿಸಿಬಿಡಿ' ಎಂದರಂತೆ. ಬೇಸರದಲ್ಲಿ ಹೇಗಾದರೂ ಮಾಡಿ ಇವನನ್ನು ತೊಲಗಿಸಬೇಕೆಂದು ತನ್ನ ಒಳಿ ಇದ್ದ ಚಲಾವಣೆ ತಪ್ಪಿದ ಸವಕಲು ನಾಣ್ಯಗಳ ಒಂದು ಚೀಲವನ್ನು ತೋರಿಸಿ ಅದರಿಂದ ಒಂದೆರಡು ನಾಣ್ಯಗಳನ್ನು ತೆಗೆದುಕೊಂಡು ಹೋಗಿ ಎಂದು ನಾಯಕನು ಮುದುಕನಿಗೆ ಹೇಳಿದನಂತೆ. ಸಹಾಯಕ್ಕಾಗಿ ಅಲ್ಲಿ ಇನ್ನೂ ಹೆಚ್ಚು ಕಾಲ ಕಾಯುವುದು ವ್ಯರ್ಥವೆಂದು ಮುದುಕನಿಗೆ ಅರ್ಥವಾಗಿ ಚೀಲದಿಂದ ಒಂದು ನಾಣ್ಯವನ್ನು ತೆಗೆದುಕೊಂಡು ಅಂಗಡಿಯಿಂದ ಆತ ಹೊರಟುಬಂದನಂತೆ.

ಅಲ್ಲಿಂದ ಆತನು ಮಾಡಿದ ಕೆಲಸ ವಿಚಿತ್ರ; ಶ್ರೀನಿವಾಸನಾಯಕನ ಮನೆಗೆ ಹೋದ. ಯಜಮಾನಿತಿಗೆ ಹೇಳಲಿಲ್ಲ–ಗಂಡನ ಅಂಗಡಿಗೆ ತಾನು ಹೋಗಿದ್ದನೆಂದು. ಆವರೆಗೆ ನಡೆದದ್ದನ್ನು ತಿಳಿಸಲಿಲ್ಲ. ಆಕೆ ದಾನ ಧರ್ಮದಲ್ಲಿ ನಿರತಳು; ದೈವಭಕ್ತಳು ಎಂಬ ಕಾರಣದಿಂದ ತನ್ನ ಮಗನ ಉಪನಯನಕ್ಕಾಗಿ ನೆರವು ಬೇಡಲು ಬಂದಿದ್ದೇನೆಂದು ಆಕೆಗೆ ಹೇಳಿದನಂತೆ. ವರ್ತಕರೊಬ್ಬರು ತನಗೆ ಚಂದಾರೂಪದಲ್ಲಿ ಕೊಟ್ಟಿದ್ದುದೆಂಬ ಒಂದು ಸವಕಲು ನಾಣ್ಯದ ನೋಟ ಆಕೆಗೆ ವ್ಯಥೆಯನ್ನುಂಟುಮಾಡಿರಬೇಕು. ಮುದುಕನ ಕಥೆ ತನ್ನ ಗಂಡನಿಗೆ ಸಂಬಂಧಿಸಿದ್ದೆಂದೂ ಆಕೆಗೆ ಅರ್ಥವಾಯಿತೆನ್ನಿಸುತ್ತದೆ. ಸ್ವಂತವಾಗಿ ಯಾವ ಹಣವೂ ಇರಲಿಲ್ಲ. ತನ್ನ ನಿಃಸಹಾಯಕತೆಗೆ ಆಕೆ ಪೇಚಾಡಿದಳು. ಮುದುಕನು ಜಾಣ. 'ನಿಮ್ಮ ಮೂಗಿನಲ್ಲಿರುವ ನತ್ತನ್ನು ನಿಮ್ಮ ಔದಾರ್ಯದಿಂದ ಕೊಡಬಹುದಲ್ಲವೇ, ನನ್ನ ಅಗತ್ಯ ತುಂಬುತ್ತದೆ' ಎಂದು ಆತ ಸೂಚಿಸಿದನಂತೆ. ಆ ಸೂಚನೆ ಸರಸ್ವತಿಬಾಯಿ ಮನಸ್ಸಿಗೆ ಬಂದಿತೆಂದು ಕಾಣುತ್ತದೆ. ಗಂಡನ ನಡವಳಿಕೆಗೆ ಇದು ಸ್ವಲ್ಪ ಪೂರೈಕೆಯ ಕಾರ್ಯವಾದೀತೆಂದು ಕೂಡ ಯೋಚಿಸಿದಳೋ ಏನೊ. ಆ ಒಡವೆಯನ್ನು ತೆಗೆದು ವೃದ್ಧ ಬ್ರಾಹ್ಮಣನಿಗೆ ದಾನವಾಗಿ ಕೊಟ್ಟಳು. ಬ್ರಾಹ್ಮಣನಿಗೆ ಸಂತೋಷವಾಯಿತು.

(ಈ) ಮುದುಕನು ಮುಂದೆ ಮಾಡಿದುದು ಇನ್ನೂ ಅಸಾಧಾರಣವಾದ ಕೆಲಸ. ನೇರ ಶ್ರೀನಿವಾಸನಾಯಕರ ಅಂಗಡಿಗೆ ಹಿಂದಕ್ಕೆ ಹೋಗಿ ಆವರ ಬೆಲೆಯ ಹಣವನ್ನು ತನಗೆ ಕೊಡಬೇಕೆಂದು ಬೇಡಿದನಂತೆ. ನಾಯಕನಿಗೆ ಆಶ್ಚರ್ಯವಾಯಿತು. ಮನಸ್ಸಿನಲ್ಲಿ ಸಂಶಯ. ಆ ಒಡವೆ ತನ್ನ ಹೆಂಡತಿ

ಹಾಕಿಕೊಳ್ಳುತ್ತಿದ್ದ ಒಡವೆಯಂತೆ ಇತ್ತು. ನಿಜವನ್ನು ತಿಳಿದುಕೊಳ್ಳ ಬೇಕೆಂದು ಅವನು ಮನಸ್ಸುಮಾಡಿದನು. 'ಸ್ವಲ್ಪಹೊತ್ತು ಬಿಟ್ಟು ಬನ್ನಿ ಹಣಕೊಡುತ್ತೇನೆ' ಎಂದು ಮುದುಕನಿಗೆ ಹೇಳಿದವನೇ ಒಡವೆಯನ್ನು ತನ್ನ ಪೆಟ್ಟಿಗೆಯೊಳಗೆ ಭದ್ರಮಾಡಿಟ್ಟು ಬೀಗ ಹಾಕಿಕೊಂಡು ಮನೆಗೆ ಹೋದನು. ಹೆಂಡತಿಯ ಮೂಗಿನಲ್ಲಿ ಒಡವೆ ಇರಲಿಲ್ಲ. ಅದೆಲ್ಲಿ? ತೆಗೆದುಕೊಂಡು ಬಾ ಎಂದ. ಇದರ ಪರಿಣಾಮ ಹೇಗಾದೀತು ಎಂಬುದು ಹೆಂಡತಿಯ ಮನಸ್ಸಿಗೆ ಆ ಸಮಯದಲ್ಲಿ ತಟ್ಟಿತು. ಗಂಡನ ಮನಃಸ್ಥಿತಿಯಲ್ಲಿ ಕರುಣೆ ಇದ್ದಂತೆ ಕಾಣಲಿಲ್ಲ. ಸ್ಥಿತಿಯನ್ನು ಉದಾರವಾಗಿ ಅರ್ಥ ಮಾಡಿಕೊಳ್ಳುತ್ತಾನೆ, ನಡೆದ ಸಂಗತಿ ತಿಳಿದರೆ ಸಾಧುವಾಗಿ ಮೃದುವಾಗಿ ನಡೆದುಕೊಳ್ಳುತ್ತಾನೆ ಎಂಬ ನಂಬಿಕೆ ಆಕೆಗೆ ಹುಟ್ಟಲಿಲ್ಲವಾದೀತು. ಪರಿಣಾಮ ದಾರುಣವಾಗಬಹುದೆಂದು ಹೆದರಿ ಒಳಗಿಂದ ತರುತ್ತೇನೆಂದು ಹೋಗಿ, ದೇವರ ಮುಂದೆ ಕುಳಿತು ವಿಷ ತೆಗೆದುಕೊಂಡು ಪ್ರಾಣಬಿಡಲು ನಿಶ್ಚಯಿಸಿದಳೆನ್ನುತ್ತಾರೆ. ಆಕೆಯ ದಾನ 'ದೇವರಿಗೆ ಪ್ರೀತಿಯಾಗಲಿ' ಎಂದು ಕೊಟ್ಟದ್ದು. ಆದಕ್ಕಾಗಿ ಆಕೆಯಲ್ಲಿ ಪಶ್ಚಾತ್ತಾಪವಿರಲಿಲ್ಲ. ಇತ್ತಲೊ ಗಂಡನ ಸದ್ಯದ ಮನಸ್ಥಿತಿಯಲ್ಲಿ ಅವನ ಕೋಪಾವೇಶದಿಂದ ಪಾರಾಗುವ ಲಕ್ಷಣ ಕಾಣಲಿಲ್ಲ. ದೇವರ ತೀರ್ಥದ ಜೊತೆಗೆ ವಿಷವನ್ನೇ ಬೆರಸಿ ಆಕೆ ತೆಗೆದುಕೊಳ್ಳಬೇಕೆನ್ನುವಾಗ, ಏನು ಹರುಷ! ಎಂಥ ಪವಾಡ! ತೀರ್ಥದಲ್ಲಿ ತನ್ನ ನತ್ತು ಬಿದ್ದಿರುವುದನ್ನು ಕಂಡಳಂತೆ. ದೇವರಿಗೆ ನಮಸ್ಕಾರ ಹಾಕಿ ಒಡವೆಯೊಡನೆ ಹೊರಗೆ ಬಂದು ಗಂಡನಿಗೆ ಅದನ್ನು ತೋರಿಸಿದಳಂತೆ!

ಅದನ್ನು ಕಂಡದ್ದೇ ಕಂಡದ್ದು. ಶ್ರೀನಿವಾಸನಾಯಕನು ಅವಾಕ್ಕಾದ. ಆಟದಲ್ಲಿ ಪೂರ್ತಿ ಸೋತ. ಮುದುಕನು ತನ್ನಲ್ಲಿ ತಂದಿದ್ದುದು ಇದೇ. ಅದನ್ನು ತನ್ನ ಅಂಗಡಿಯಲ್ಲಿನ ಪೆಟಾರಿಯಲ್ಲಿ ಭದ್ರವಾಗಿ ಇಟ್ಟು ಬೀಗ ಹಾಕಿ ಆಗತಾನೆ ಬಂದಿದ್ದಾನೆ. ಅದೇ ಪುನಃ ಇಲ್ಲಿ ತನಗೆ ಹೀಗೆ ಕಾಣಿಸಿಕೊಳ್ಳುತ್ತಿದೆ. ಅವಸರದಲ್ಲಿ ಅಂಗಡಿಗೆ ಹಿಂದಿರುಗಿ ತನ್ನ ಪೆಟ್ಟಿಗೆಯನ್ನು ತೆರೆದರೆ ಅಲ್ಲಿ ಒಡವೆ ಇಲ್ಲ. ಇದು ಅತ್ಯಾಶ್ಚರ್ಯಕರ. ಏನೋ ವಿಸ್ಮಯಕರವಾದ್ದು ನಡೆದಿದೆ. ಇದು ಮಾನವ ಘಟನೆಯಲ್ಲ. ತಿಂಗಳಿಂದ

ಆಶ್ರಯಿಸಿದ ಮುದುಕ ಸಾಮಾನ್ಯ ಮನುಷ್ಯನಾಗಿರಲಾರ. ಯಾರಿರ ಬಹುದು? ಊರಿನಲ್ಲಿ ಎಲ್ಲಿ ಹೋದರೂ ಯಾರನ್ನು ಕೇಳಿದರೂ ಅವನ ಸಂಗತಿ ಯಾರಿಗೂ ತಿಳಿಯದು. ಮುದುಕನನ್ನಾಗಲಿ ಅವನ ಜೊತೆಯ ಹುಡುಗನನ್ನಾಗಲಿ ಕಂಡವರಿಲ್ಲ. ಅಂಗಡಿಯ ಬಾಗಿಲನ್ನು ಮುಚ್ಚಿ ಮನೆಗೆ ಹಿಂತಿರುಗಿದವನೇ ಹೆಂಡತಿಯನ್ನು ಕೇಳಿದನಂತೆ–ನಡೆದುದನ್ನೆಲ್ಲ ತನಗೆ ವಿವರವಾಗಿ ಹೇಳಬೇಕೆಂದು. ಈಗ ಆತನ ಮನಸ್ಸು ಬೇರೆಯಾಗಿತ್ತು. ಮೃದುವಾಗಿತ್ತು, ಆರ್ದ್ರವಾಗಿತ್ತು. ಹೆಂಡತಿ ನೇರವಾಗಿ ಸಂಗತಿಯನ್ನು ತಿಳಿಸಿದಳು. ಅವನ ಮನಮುಟ್ಟುವಂತೆ ವಿವರಿಸಿದಳು. ತನ್ನ ಹೆಂಡತಿಯ ದೈವಭಕ್ತಿ ಎಷ್ಟು ಆಳವಾದ್ದು, ತುಂಬಿನದು ಎಂದು ನಾಯಕನಿಗೆ ಚೆನ್ನಾಗಿ ಗೊತ್ತು. ಎಷ್ಟೋಸಲ ಹಿಂದೆ, ಆತನ ಮನಮುಟ್ಟುವಂತೆ ಅವನನ್ನು ಬೇಡಿಕೊಂಡಿದ್ದಳು. ದೇವರನ್ನು ಕುರಿತು ಆಲೋಚನೆ ಮಾಡಿ–ಮಾನವ ಕರುಣೆಯ ಕಡೆ ಮನಸ್ಸು ತೆರೆಯಿರಿ, ಜನರ ಸಹಾಯಕರಾಗಿ ಸ್ವಲ್ಪ ಹೆಚ್ಚು ನಡೆದುಕೊಳ್ಳಿ ಎಂದು. ಈಗ ನಡೆದ ಘಟನೆ ಅದ್ಭುತ. ಇದು ಪವಾಡವೇ. ತನಗೆ ತನ್ನ ಗುಣವನ್ನು, ಚರ್ಯೆಯನ್ನು ತಿಳಿಯಪಡಿಸುವುದಕ್ಕಾಗಿ ತನ್ನ ಕರ್ತವ್ಯವನ್ನು ನೆನಪಿಗೆ ತರುವುದಕ್ಕಾಗಿ ದೇವರೇ ಹೀಗೆ ಬಂದಿರಬೇಕು ಮಾಡಿರಬೇಕು. ತನ್ನ ಜೀವನದ ಯಾವುದೋ ಲೋಪ ತಾನು ಮಾಡ ಬೇಕಾದುದೇನು ಎಂಬ ಅರಿವು ಆತನನ್ನು ಜಾಗರಿಸಿತು. ಹುಚ್ಚನಂತೆ ಊರಿನಲ್ಲೆಲ್ಲ ಸುತ್ತಾಡಿ ಕಂಡ ಎಲ್ಲರನ್ನೂ ಕೇಳಿದನಂತೆ, 'ಮುದಿಬ್ರಾಹ್ಮಣ ಅವನೊಡನೆ ಇದ್ದ ಹುಡುಗ ಇವರನ್ನು ಕಂಡಿದ್ದೀರಾ' ಎಂದು. ಇಲ್ಲ. ಯಾರ ಕಣ್ಣಿಗೂ ಅವರು ಬಿದ್ದಿರಲಿಲ್ಲ. ಒಬ್ಬರು ಮಾತ್ರ ಅವನು ವಿಠಲ ದೇವಾಲಯದೊಳಕ್ಕೆ ಹೋದ ಎಂದರಂತೆ.

ಯಾವ ವಿಠಲ ಎಂಬುದನ್ನು ಇಲ್ಲಿ ಪರಿಶೀಲಿಸಬೇಕಾದ ಸಂಗತಿ. ಶ್ರೀನಿವಾಸನಾಯಕನ ಮನಸ್ಸಿಗೆ ಈಗ ದೃಢವಾಗಿ ವೇದ್ಯವಾಯಿತು. ಇದು ನಿಜವಾಗಿ ದೈವಲೀಲೆ. ಅವನ ಹೃದಯ ಆ ಕಡೆ ಅರಳಿತು ತಿರುಗಿತು. ಈವರೆಗೂ ಅವನ ಮನಸ್ಸಿನಲ್ಲಿ ಬಲಿತಿದ್ದ ಕಡುತರ ಕಾರ್ಪಣ್ಯ ಸಿಕ್ಕಿದ್ದೆಲ್ಲ ವನ್ನೂ ಬಾಚಿಕೊಳ್ಳಬೇಕು; ತುಡುಕಬೇಕು ಎಂದಿದ್ದ ಬುದ್ಧಿ ಕರಗಿ ಹೋಯಿತು. "ಪ್ರಿಯಮೆನಗೆ ಈ ಪಶ್ಚಾತ್ತಾಪಂ" ಎಂದು ಬೇರೆ ಕವಿ

ಬೇರೆ ಸಂದರ್ಭದಲ್ಲಿ ಹೇಳಿದಂತೆ ನಾಯಕನ ಹೆಂಡತಿಗೆ ಸಂತೋಷವೇ ಆಯಿತು. ನಿಜವಾದ ಎಲ್ಲ ಮತಧರ್ಮದ ಜೀವನವೂ ಇಂಥ ಒಂದು ಪಶ್ಚಾತ್ತಾಪದಿಂದಲೇ ಅಲ್ಲವೆ ಆರಂಭವಾಗುವುದು? ತಮ್ಮ ಕುಟುಂಬದ ಮರ್ಯಾದೆ, ಸಂಪ್ರದಾಯ, ಗಂಡನ ವಿದ್ಯಾ ಸಂಸ್ಕಾರ ಇವಕ್ಕೆ ತಕ್ಕಂತೆ ಇನ್ನು ಮೇಲೆ ರೂಪಗೊಂಡರೆ ತಮ್ಮ ಬದುಕು ಮೇಲಾದೀತೆಂದು ಆಕೆ ಹೇಳಿದರಾದೀತು. ಒಂದು ಕ್ಷಣದಲ್ಲಿ ಇನ್ನೊಂದು ಸಂಗತಿ ಆತನಿಗೆ ಕಾಣಿಸಿತು. ಎಷ್ಟು ಬೇಗ, ಎಷ್ಟು ಅಗ್ಗವಾಗಿ ತನ್ನ ಹೆಂಡತಿಯನ್ನು ತಾನು ಕಳೆದುಕೊಳ್ಳಬಹುದಾಗಿತ್ತು. ಮುದುಕನ ಕ್ರಿಯೆ ಆಕೆಯ ಜೀವ ವನ್ನೂ, ತನ್ನನ್ನೂ, ಇಬ್ಬರನ್ನೂ ಬದುಕಿಸಿತು. ಮುದುಕನು ಸಿಕ್ಕ ಬಾರದೆ? ಅವನು ಏನು ಕೇಳಿದರೂ ಕೊಟ್ಟೇನು ಎಂದುಕೊಂಡನು. ಹೆಂಡತಿ ಹೇಳಿದಳು—ಆತನು ತನ್ನ ಕನಸಿನಲ್ಲಿ ಕಾಣಿಸಿಕೊಂಡು, ನಾಯಕನು ತನ್ನ ಸಂಪತ್ತನ್ನೆಲ್ಲ ಬಿಟ್ಟುಕೊಟ್ಟು ದೇವರ ಸೇವೆಗೆ ಮನಸ್ಸನ್ನು ಮೀಸಲು ಮಾಡಿಕೊಂಡರೆ ಆತನಿಗೆ ದರ್ಶನ ಕೊಟ್ಟೇನೆಂದು ಹೇಳಿದ ಹಾಗೆ. ಆತನ ಬಾಳಲ್ಲಿ ನಿರ್ಣಾಯಕವಾದ ಕ್ಷಣ ಈಗ ಒದಗಿತು. ತನ್ನ ಆಸ್ತಿಯನ್ನೆಲ್ಲ ಬಿಟ್ಟುಕೊಟ್ಟು ಮನೆ, ಆಸ್ತಿ–ಪಾಸ್ತಿ, ಹಣ, ಒಡವೆ ಎಲ್ಲವನ್ನೂ ಸಜ್ಜನ ರಿಗೆ, ಭಕ್ತರಿಗೆ, ವಿಠಲದೇವನ ಹೆಸರಿನಲ್ಲಿ ಹಂಚಿದ. ತಾನಿನ್ನು ಮೇಲೆ ಒಡತನವನ್ನು ವರಿಸುತ್ತೇನೆ ಎಂದವನೇ ಮನೆಬಿಟ್ಟು ಹೊರಟ. ಅಂದಿನಿಂದ ಅವೊತ್ತವೊತ್ತಿನ 'ಅನ್ನ'ವನ್ನು ಇತರರಿಂದ ಭಿಕ್ಷೆಯಾಗಿ ಬೇಡಿ ಹೊಟ್ಟೆ ಹೊರದುಕೊಂಡ. ದೇವರ ಹಿರಿಮೆಯನ್ನು ಕೊಂಡಾಡುತ್ತ, ಹಾಡುತ್ತ ಬೀದಿಗಳಲ್ಲಿ ಸಂಚಾರ ಮಾಡಿದ.

ಈ ಸಮಯದಲ್ಲಿ ಪುರಂದರದಾಸರ ಮನಸ್ಸು ಹೇಗೆ ಇದ್ದಿರಬಹುದೆಂಬು ದನ್ನು ಕಲ್ಪಿಸಿಕೊಳ್ಳಬಹುದು. ತನ್ನ ಹಣಕ್ಕೂ ಆಸ್ತಿಗೂ ಮನೆಗೂ ಕಚ್ಚಿಕೊಂಡು ಇರುವವರೆಗೂ ತಾನು ಮನಸ್ಸಿಗೆ ಬಿಡುಗಡೆ ಬರುವುದಿಲ್ಲ ವೆಂದು ಅವನಿಗೆ ತಟ್ಟಿತು. ಇಷ್ಟರವರೆಗೂ ಲೋಕದ ಸಂಪತ್ತಿಗಿಂತಲೂ ಬದುಕಿಗಿಂತಲೂ ಮೇಲ್ಪಟ್ಟ ಒಂದು ಜೀವನರೀತಿ ಇದೆ. ಅದಕ್ಕೆ ಬಲಿಯಬೇಕು ಎಂಬ ಯೋಚನೆಗಳಿಂದಲೇ ಅವನ ವ್ಯಾಪಾರವೂ ಸಂಪತ್ತೂ ಅವನನ್ನು ಹೊರಗಿಟ್ಟಿದ್ದವು ಎಂಬುದನ್ನು ಅರಿತ. ಸಂಪತ್ತು, ಲಾಭಗಳ

ಬೆನ್ನುಹತ್ತಿ ತಾನು ಸಲ್ಲಿಸಬೇಕಾದ ಕರ್ತವ್ಯ ಒಂದುಂಟು ಎಂಬುದನ್ನು ಮರೆತಿದ್ದ. ಒಂದೇ ಕ್ಷಣದಲ್ಲಿ ತನ್ನ ಮನೆಗೆ ಹೋಗಿ ಮೃದು ಮನಸ್ಸಿನ ತನ್ನ ಹೆಂಡತಿಯಲ್ಲಿ ದೈವ ಭಕ್ತಿಯನ್ನೂ, ದಾನ ಬುದ್ಧಿಯನ್ನೂ, ತ್ಯಾಗ ವನ್ನೂ ಉಂಟುಮಾಡುವಷ್ಟು ಪ್ರಭಾವ ಆ ಮುದುಕನಲ್ಲಿತ್ತು. ತಿಂಗಳ ಕಾಲ ಒಂದೇ ಸಮನೆ ಮುದುಕನು ತನ್ನ ಬಳಿಗೆ ಬಂದು ಬೇಡಿಕಾಡಿದರೂ ನಿಷ್ಠುರನಾಗಿ ತಾನು ಒಂದು ಸಣ್ಣ ನೆರವನ್ನು ಕೊಡಲು ಮನಸ್ಸುಮಾಡ ಲಿಲ್ಲ. ತನ್ನ ಕೋಪಕ್ಕೆ ಈಡಾಗುವುದಕ್ಕಿಂತ ತನ್ನ ಜೀವವನ್ನಾದರೂ ತೆತ್ತೇನು ಎಂದು ಹೆಂಡತಿ ಸಿದ್ಧಳಾದಳಲ್ಲವೆ. ಅವಳಲ್ಲಿ ಮಾನವತೆ ಹೊಮ್ಮಿದುದರಿಂದ ತಾನೇ ಅವಳು ಇಂಥ ತ್ಯಾಗಕ್ಕೆ ಸಿದ್ಧವಾದ್ದು? ಸದ್ಯಃ ತನ್ನ ಹೆಂಡತಿ ಬದುಕಿಕೊಂಡಳು. ಆಕೆಯ ಸಾವಿಗೆ ಕಾರಣವಾಗ ದಂತೆ ನಾನೂ ಉಳಿದುಕೊಂಡೆ. ಎಂಥ ಉದಾರಿ ಸಜ್ಜನಳಾದ ಹೆಂಡತಿ ದೈವಾನುಗ್ರಹದಿಂದ ತನಗೆ ಉಳಿದುಕೊಂಡಳು ಎಂಬ ಕೃತಜ್ಞತಾಭಾವ ಅವನಲ್ಲಿ ಉಂಟಾಯಿತು. ಏನನ್ನೂ ಕೊಡದೆ ಆ ಹಣ್ಣುಹಣ್ಣು ಮುದುಕ ನನ್ನು ಕಳಿಸಿಕೊಟ್ಟುದು ಎಂಥ ಕಲ್ಲುಬುದ್ಧಿ, ಒಡವೆಯನ್ನು ತೋರಿಸು ಎಂದು ಹೆಂಡತಿಯನ್ನು ಗಡುಸಾಗಿ ಗದರಿಸಿ ಮಾತನಾಡಿದುದು ಎಷ್ಟು ದೊಡ್ಡತಪ್ಪು ಎಂಬ ಯೋಚನೆ ಅವನ ಮನಸ್ಸನ್ನು ಕುಟುಕಿತು. ತನ್ನ ಬದುಕೆಲ್ಲ ಹೀಗೇ ಈವರೆಗೆ ಎಷ್ಟು ಬಗೆಯಲ್ಲಿ ಕೆಟ್ಟಿತು ಎನ್ನಿಸಿತು.

ನಾಯಕನ ಮನಸ್ಸಿಗೆ ಯಾವುದು ಮುಟ್ಟಿದರೂ ಅದೇ ಆಳುವ ಪ್ರಭಾವ ವಾಗುತ್ತಿತ್ತು. ಅಂಥ ಏಕಾಗ್ರತೆಯೇ ಅವನು ಐಶ್ವರ್ಯವನ್ನು ಕೂಡಿಸು ವಂತೆ ಮಾಡಿದ್ದದ್ದು. ಅದರಿಂದ ಅವನಿಗೆ ಶಾಂತಿಯಾಗಲಿ ವಿಶ್ರಾಂತಿ ಯಾಗಲಿ ದೊರೆತಿರಲಿಲ್ಲ. ರಾಗದ್ವೇಷಗಳಿಂದ ಸಣ್ಣತನಗಳಿಂದ ಬಿಡುಗಡೆ ಬಂದಿರಲಿಲ್ಲ. ಈಗ ನಡೆದ ಘಟನೆಯಿಂದಾಗಿ ಅವನ ಮನಸ್ಸು ಅಷ್ಟೇ ರಾಗಭರದಿಂದ ಅದರ ಇದಿರುಭಾವನೆಗೆ ಅವಕಾಶಕೊಟ್ಟಿತು, ಎಂದರೆ ವಿಷಾದ ಭಾವನೆಗೆ–ಇದಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು ಎಂಬ ಭಾವನೆಗೆ. ತನ್ನ ಹೃದಯದಲ್ಲಿ ಹೊಸದಾಗಿ ಈ ಭಾವದ ಬುಗ್ಗೆಯನ್ನು ಉದ್ದೇಶವನ್ನು ಚಿಮ್ಮಿ ಕೆರಳಿಸಿ ತನ್ನ ಬದುಕಿನ ದಿಕ್ಕನ್ನೇ ಮಾರ್ಪಡಿಸಿದ, ತನಗೆ ಮುಕ್ತಿಯದಾರಿಯನ್ನು ಕಾಣಿಸಿದ, ಹೆಂಡತಿಯ ಪರವಾಗಿ

ಕೃತಜ್ಞತಾಭಾವ ಹುಟ್ಟಿತು. ಒಳಗೆ ಮುಚ್ಚಿ ಅಡಗಿದ್ದ ಆತನ ಭಾವವೆಲ್ಲ

"ಆದದ್ದೆಲ್ಲಾ ಒಳಿತೇ ಆಯಿತು, ನಮ್ಮ ಶ್ರೀಧರನ
ಸೇವೆ ಮಾಡಲು ಸಾಧನ ಸಂಪತ್ತಾಯಿತು......."

ಎಂಬ ಪ್ರಖ್ಯಾತವಾದ ಹಾಡು ಅವರ ಕೊರಳಿನಿಂದ ಆಗ ಬಂತೆನ್ನುತ್ತಾರೆ. ಹಿಂದೆ ತಂಬೂರಿ ದಂಡಿಗೆ ತುಳಸಿಮಣಿ ಆತನ ಮನಸ್ಸಿಗೆ ಹಿಡಿಸುತ್ತಿರಲಿಲ್ಲ. ಅದಕ್ಕೆ ವಿಮುಖನಾಗಿದ್ದ. ಈ ಪುಣ್ಯವನ್ನು ಒದಗಿಸಿದಂಥ 'ಹೆಂಡತಿ ಸಂತತಿ ಸಾವಿರವಾಗಲಿ' ಎಂಬ ಧನ್ಯತೆಯಲ್ಲಿ ಹೆಂಡತಿಗೆ ಹರಕೆ ಇಟ್ಟರು. ನನ್ನ ಕೈ ತಂಬೂರಿ ತೆಗೆದುಕೊಳ್ಳುವ ಹಾಗೆ ಮಾಡಿದ್ದಾಳೆ. ದಂಡಿಗೆ ಬೆತ್ತ ಹಿಡಿಸಿದ್ದಾಳೆ, ಜಪಸರ ಹಿಡಿಸಿದ್ದಾಳೆ, ಗೋಪಾಳಬುಟ್ಟಿ ಹಿಡಿಸಿ ದ್ದಾಳೆ. ಇಂಥ ಹೆಂಡತಿ ಸಂತತಿ ಸಾವಿರವಾಗಲಿ, ಎಂದು ಕೊರಲು ತೆಗೆದು ನಾಯಕನು ಸಂಕೋಚವಿಲ್ಲದೆ ಹಾಡಿದನು. ಹಿಂದೆ ಇದ್ದುದು ಹೆಮ್ಮೆ, ಅದರಲ್ಲಿ ಆತ ಬೀಗುತ್ತಿದ್ದ. ದಂಡಿಗೆ ಹಿಡಿದೆನೇ, ಭಿಕ್ಷದ ಚೀಲ ವನ್ನು ಕಂಕುಳಿಗೆ ಹಾಕಿದೆನೇ; ತುಳಸಿಮಣಿಯ ಹಾರವನ್ನು ಹಾಕಿ ಕೊಂಡೆನೇ, ನಳಿನಾಕ್ಷ ಪುರಂದರ ವಿಠಲ ತುಳಸಿಮಣಿ ಹಾರವನ್ನು ಧರಿಸು ವಂತೆ ಮಾಡಿದ್ದಾನೆ. ಹೆಂಡತಿಯ ಪ್ರೇಮವೂ, ಉದಾರ ಹೃದಯವೂ ಇದನ್ನು ನನಗೆ ಮಾಡಿಕೊಟ್ಟವು. ಮನೆ ಬಿಟ್ಟು ಹೊರಟಕೂಡಲೆ ಆವನ ಮನೋನಿಶ್ಚಯ ಯಾವ ಭೀತಿಯೂ ಇಲ್ಲದ್ದಾಯಿತು. ಬೇರಾವ ಸಂಗತಿಯನ್ನೂ ಎಣಿಸದೆ ಇಲ್ಲಿಂದ ಹಿಂದೆ ತಿರುಗುವ ಹಾಗೆ ಇಲ್ಲ ಎಂಬಂತಾ ಯಿತು. ಎಲ್ಲವೂ ಬೇಕು ಎಂದು ಹಿಂದೆ ಕೇಳುತ್ತಿದ್ದ; ಯಾವ ಒಂದನ್ನೂ ತನ್ನದಾಗಿರಲು ಬಯಸದೆ, ಇನ್ನುಮೇಲೆ ನಿಜವಾಗಿ ಬದುಕುತ್ತೇನೆಂದು ನಿಶ್ಚಯಿಸಿದ. ಆಗ ನಡೆಯುತ್ತಿದ್ದುದು ದಣಿಯ ಬದುಕು. ಈಗ ಅದು ದಾಸನ ಬದುಕಾಯಿತು.

ಊರು ಬಿಟ್ಟು ಹೊರಟು ತನ್ನ ಹುಟ್ಟೂರಿಂದ ಪಂಢರಪುರದ ಕಡೆಗೊ, ಹಂಪೆಗೊ, ತಿರುಪತಿಗೊ (ದಾರಿ ನಡೆದು ಹೋಗುತ್ತಿದ್ದಾಗ) ಒಂದು ಸಂಗತಿ ನಡೆಯಿತಂತೆ. ಕಾಡನ್ನು ದಾಟಬೇಕಿತ್ತು. ದೂರದ ದಾರಿ. ಇನ್ನಾರ ನೆರವು, ಜೊತೆ ಇಲ್ಲದೆ ನಡೆದು ಹೋಗಬೇಕಾಯಿತು. ತಾವು ಮುಂದೆ ನಡೆಯುತ್ತಿದ್ದಂತೆ, ಹೆಂಡತಿ ಹಿಂದೆ ಬರುತ್ತಿದ್ದಾಳೆ. ಆಕೆಯ

ಹೆಜ್ಜೆ ಭಾರವಾಗಿ ಎಳೆದುಕೊಂಡು ಬರುತ್ತಿದ್ದಾಳೆಂಬಂತೆ ಹಲವಾರು ಬಾರಿ ಭಯದಿಂದ ಆಕಡೆ ಈಕಡೆ ನೋಡುತ್ತ ನಡೆಯುತ್ತಿರುವಂತೆ ಕಂಡಿತು. ಆಕೆಗೆ ಏನಾಗಿರಬಹುದು ಎಂದು ನಾಯಕರು ಹೆಂಡತಿಯನ್ನು ಕೇಳಿದರಂತೆ. ದಾರಿಯಲ್ಲಿ ಕಳ್ಳರ—ದರೋಡೆಕಾರರ, ಭಯ ಇಲ್ಲವೆ? ಎಂದಳು ಆಕೆ. ಕಳ್ಳಕಾಕರ ಭಯಕ್ಕೆ ಕಾರಣವಾಗುವಂತೆ ಬೆಲೆಯುಳ್ಳ ಏನಾದರೂ ಪದಾರ್ಥ ಹೊತ್ತು ತರುತ್ತಿದ್ದೀಯೇನು ಎಂದು ಹೆಂಡತಿಯನ್ನು ಕೇಳಿದರು. ಆತನಿಗೆ ತಿಳಿಯಬಂದಿತು: ಮುಂದಿನ ಕಾಲದಲ್ಲಿ ಗಂಡನಿಗೆ ಅಗತ್ಯ ಬಿದ್ದಾಗ ಕೈಗಾವಲಾಗಿರಲಿ ಎಂದು ಚಿನ್ನದ ಬಟ್ಟಲನ್ನು ಸರಸ್ವತಿಬಾಯಿ ತನ್ನೊಡನೆ ತರುತ್ತಿದ್ದಳೆಂದು. ಅದನ್ನು ಬಿಸಾಡು—ಹಗುರವಾಗಿ ಮುಂದೆ ಹೆಜ್ಜೆ ಹಾಕು ಎಂದರು. ಅವರ ಸರ್ವತ್ಯಾಗಕ್ಕೆ ಕಾರಣಳಾದವಳು ಆಕೆ. ಅಂಥ ಒಂದು ಸಣ್ಣ ಆಟಿಕೆಯನ್ನು ಹೊತ್ತು ತರುವುದು ಆಕೆಯ ಯೋಗ್ಯತೆಗೆ ತಕ್ಕುದಲ್ಲ—ಎಂದಿರಬೇಕು. ಇಂಥ ಸಂಗತಿಗಳನ್ನು ಅನೇಕ ಮಹನೀಯರ ಜೀವನದ ಸಂಬಂಧಗಳಲ್ಲಿ ಹೇಳುತ್ತಾರೆಯಾದರೂ ಒಂದು ಬಗೆಯ ಬದುಕು, ಚಾರಿತ್ರ್ಯ ರೂಪುಗೊಳ್ಳುತ್ತಿರುವಾಗ, ವಿಶೇಷವಾಗಿ ಅದರ ದಿಕ್ಕೂ ಗಮ್ಯವೂ ಮಾರ್ಪಡುತ್ತಿರುವಾಗ ಅಂಥ ಚಿತ್ರವನ್ನು ಮನಸ್ಸಿಗೆ ರಚಿಸಿ ಕೊಡಲು ಇಂಥವು ಸಹಾಯ ಮಾಡುತ್ತವೆ. ಆತನ ಜೀವದ (ಭಾವ) ಭರವೆಲ್ಲ ಈ ಹೊಸ ಬಾಳಿಗೆ ತಿರುಗಿತ್ತು; ಅದರ ರೀತಿಗೆ, ಅಗತ್ಯಗಳಿಗೆ ಮನಸ್ಸುಕೊಟ್ಟ ಆತನ ಕಲ್ಪನಾಶಕ್ತಿ ಶ್ರೀಮಂತವಾದ್ದು; ತನ್ನ ಒಳಗೆ ಹುಟ್ಟಿದ ಭಾವನೆಗಳನ್ನು ಆ ಸಮಯದಲ್ಲಿ ಹುಟ್ಟಿದಂತಹ ಮಾತುಗಳಲ್ಲಿ ಕಲ್ಪಿಸಿಕೊಡಲು ಆತನನ್ನು ಅವು ಒತ್ತಿರಬೇಕು. ಆತನಿಗೆ ಸಂಗೀತದ ಸಂಸ್ಕಾರವಿತ್ತು. ಬಹುತರ ಭಕ್ತರ ಮತ್ತು ಅವರ ಪದಗಳ ಸಂಪ್ರದಾಯ ಮೊದಲಿಂದಲೂ ಪರಿಚಿತವಾಗಿತ್ತು. ಬಳಕೆಯಾಗಿದ್ದ ಆ ಹಾಡುಗಳಲ್ಲಿ, ಕೆಲವನ್ನು ತನ್ನ ಮನೆಯ ಜನರೂ ಹಾಡುತ್ತಿದ್ದಿರಬೇಕು. ತನ್ನ ಹುಟ್ಟೂ ರಲ್ಲಿಯೊ ಹತ್ತಿರದ ಬೇರೆ ಕಡೆಯಲ್ಲಿಯೊ ಇಂಥವು ಬೇಕಷ್ಟು ಬಳಕೆ ಯಲ್ಲಿದ್ದಿರಬೇಕು. ವೀರಶೈವ ವಚನಕಾರರ ಸಾಹಿತ್ಯವಿತ್ತು: ಆದ್ಯರ, ಆರಾಧ್ಯರ ಹೃದಯದಿಂದ ಉಕ್ಕಿಬಂದ ಪದಗಳಿದ್ದವು. ಸಂಪ್ರದಾಯ ದಿಂದ ಬಂದ ಈ ಸಂಪತ್ತು ಆತನಿಗೆ ತೆರೆದಿತ್ತು.

ಆ ಕೂಡಲೇ ಆತನು ಏನು ಮಾಡಿದನೆಂಬುದು ನಮ್ಮ ತಿಳುವಳಿಕೆಗೆ ಬಂದಿಲ್ಲ. ಒಂದು ಹೇಳಿಕೆಯಲ್ಲಿ ಆತನು ಪಂಢರಪುರಕ್ಕೆ ಹೋಗಿ ಅಲ್ಲಿ ಸುಮಾರು 12 ವರ್ಷಗಳ ಕಾಲ ಇದ್ದರೆನ್ನುತ್ತಾರೆ. ಒಂದು ದಿನ ಆತನಿಗೆ ಒಂದು ಕನಸು ಬಿದ್ದು ಕರೆ ಒಂದು ಕೇಳಿಸಿದಂತಾಯಿತಂತೆ: ಕೃಷ್ಣ ದೇವರಾಯನ ಆಸ್ಥಾನದಲ್ಲಿ ರಾಜಗುರುಗಳಾಗಿದ್ದ ವ್ಯಾಸರಾಯರನ್ನು ಸಂದರ್ಶನ ಮಾಡಲು ಹಂಪೆಗೆ ಹೋಗು; ಅಲ್ಲಿ ಅವರ ನಿರ್ದೇಶವನ್ನೂ ಹರಕೆಯನ್ನೂ ಪಡೆ ಎಂಬಂತೆ. ಆಗ, ತನ್ನ ಹೆಂಡತಿ ಮಕ್ಕಳೊಡನೆ* ಅಲ್ಲಿಗೆ ಹೋದರೆಂದೂ ಸಾಂಪ್ರದಾಯಿಕವಾಗಿ ಒಂದು ಕಥೆ. ಇದು 1502 ರಿಂದ 1525ರೊಳಗೆ† ಯಾವುದೋ ಸಂವತ್ಸರದಲ್ಲಿ–25ರ ಹತ್ತಿರ ಹತ್ತಿರದ ಯಾವುದೋ ವರ್ಷದಲ್ಲಿ ನಡೆದಿರಬೇಕು. ಹಿಂದಿನ ವರ್ಷಗಳಲ್ಲಿ ಶ್ರೀಮಂತ ರತ್ನಪಡಿ ವ್ಯಾಪಾರಿಯಾಗಿ ನಾಯಕನು ಹಂಪೆಗೆ ಹೋಗಿದ್ದಾಗ ಗುರು ವ್ಯಾಸರಾಯರ ಹೆಸರನ್ನು ಅನೇಕವಾಗಿ ಕೇಳಿದ್ದರು. ಬಹುಶಃ ಹೋಗಿ ಅವರನ್ನು ಕಂಡಿರಲಿಲ್ಲ. ಈಗ ನೇರ ವ್ಯಾಸರಾಯರಲ್ಲಿಗೆ ಹೋಗಿ ಪ್ರಣಾಮ ಸಲ್ಲಿಸಿ, ತನ್ನ ಬದುಕಿನಲ್ಲಿ ನಡೆದ ಸಂಗತಿಗಳನ್ನೂ, ತಾನು ಗುರುಗಳಲ್ಲಿಗೆ ಬರಲು ಕಾರಣವಾದ ಸಂಗತಿಗಳನ್ನೂ ಅವರಿಗೆ ಅರಿಕೆ ಮಾಡಿದರು. ವ್ಯಾಸರಾಯರಿಗೆ ಒಡನೆಯೇ ಆತನ ಜೀವಗುಣ ಅರ್ಥವಾಗಿ ಆತನನ್ನು ಶಿಷ್ಯನನ್ನಾಗಿ ಸ್ವೀಕರಿಸಿದರು.

---

* ನಾಲ್ಕು ಜನ. ಇಷ್ಟು ಹೊತ್ತಿಗೆ ಹೆಣ್ಣುಮಗಳಿಗೆ ಮದುವೆಯಾಗಿತ್ತೆನ್ನುತ್ತಾರೆ.

† ಈಚೆಗೆ ಶ್ರೀಕಪಟರಾಳ ಕೃಷ್ಣರಾಯರು ದಾಸರು ತೀರಿಕೊಂಡದ್ದು 1564 ರಲ್ಲಲ್ಲ. 1504ರಲ್ಲಿರಬಹುದು ಎಂದು ಊಹಿಸುತ್ತಾರೆ. ಇದರಿಂದ ಕಾಲದ ಲೆಕ್ಕ ಬಹು ವ್ಯತ್ಯಾಸವಾಗುತ್ತದೆ. ಹಾಗೆಯೇ ವ್ಯಾಸರಾಯರು ಆ ಹೊತ್ತಿಗೆ ಹಂಪೆಗೆ ಬಂದಿದ್ದರೆಂದಾಗಲಿ ಕೃಷ್ಣದೇವರಾಯ ಆಳುತ್ತಿದ್ದನೆಂಬ ಸಂಗತಿಯಾಗಲಿ ಸಲ್ಲದೆ ಹೋಗುತ್ತದೆ. ಇನ್ನೆಷ್ಟು ಹಾಡುಗಳ ಕರ್ತೃತ್ವ ಸಂಗತಿಗಳ ತಥ್ಯ ಐತಿಹ್ಯ ಲುಪ್ತವಾಗುತ್ತವೆ. ಈ ಒಂದೇಟಿಗೆ ಕುಹೂಯೋಗ, ಕನಕರ ಸಂಬಂಧ ಇತ್ಯಾದಿಗಳೆಲ್ಲವೂ ಉರುಳುತ್ತವೆ.

*

ಗುರು ಆತನಿಗೆ ಮಧ್ವಮತ ಸಿದ್ಧಾಂತಗಳನ್ನು ಉಪದೇಶ ಮಾಡಿದರು.* ಹರಿದಾಸನ ಜೀವನದಲ್ಲಿ ಇರಬೇಕಾದ ಭಕ್ತನ ಲಕ್ಷಣಗಳು ಭಕ್ತಿಯ ಸಮಯಗಳು ಇಂಥವೆಂಬುದನ್ನು ತಿಳಿಸಿದರು. ಶ್ರೀನಿವಾಸನಾಯಕ ದೀರ್ಘವಾಗಿ, ಆಳವಾಗಿ ದೇವರನ್ನು ಕುರಿತು, ಆಧ್ಯಾತ್ಮಿಕ ಜೀವನವನ್ನು ಕುರಿತು ಆಲೋಚನೆ ಮಾಡಿರಬೇಕು. ತನ್ನ ಬದುಕಿನಲ್ಲಿ ಮಾರ್ಪಾಡು ಉಂಟಾದ ಕಾಲದಿಂದ ಹಿಡಿದು ವಿಠಲದೇವರ ಸ್ತೋತ್ರಗಳನ್ನು ಹಾಡಿಕೊಳ್ಳುತ್ತಿದ್ದಿರಬೇಕು. ಈಗ ಆತನಿಗೆ ಭಕ್ತಿಯ ಸ್ವರೂಪದಲ್ಲಿ ಹೆಚ್ಚು ಮೊನೆವುಳ್ಳ ಲಕ್ಷಣ ತಿಳಿಯಬಂದಿತೆಂದು ಕಾಣುತ್ತದೆ. ವ್ಯಾಸರಾಯರು ಆತನಿಗೆ ದೀಕ್ಷೆ ಕೊಟ್ಟ ದಿವಸದಿಂದ ಆತನಿಗೆ ಪುರಂದರ ವಿಠಲನೆಂದು ಕರೆದುಕೊಳ್ಳಲು ಅನುವಾಯಿತು. ಅಲ್ಲಿಂದಾಚೆಗೆ ಬರೆದ ಪದಗಳಿಗೆಲ್ಲ ಪುರಂದರ ವಿಠಲ ಎಂಬ ಗುರುತು ಅಂಕಿತವಾಯಿತು. ಸುಳಾದಿ ಎಂಬ ಪ್ರಕಾರದಲ್ಲಿರುವ ಒಂದು ಹಾಡು ಈ ಸಮಯದಲ್ಲಿ ಗುರುವಿನ ಕೃಪೆ ಹೇಗೆ ಅನುಗ್ರಹವಾಗಿ ತನ್ನ ಮೇಲೆ ಹರಿದುಬಂದಿತೆಂಬುದನ್ನು ತೋರಿಸುತ್ತದೆ.

ವ್ಯಾಸರಾಯರ ಚರಣಕಮಲ ದರುಶನವೆನಗೆ |
ವಿಸು ಜನ್ಮದ ಸುಕೃತಫಲ ದೊರಕಿತೋ ; ಎನ್ನ |
ಸಾಸಿರ ಕುಲಕೋಟಿ ಪಾವನವಾಯಿತು |
ಶ್ರೀಶನ್ನ ಭಜಿಸುವುದಕಧಿಕಾರಿ ನಾನಾದೆ |
ದೋಷರಹಿತನಾದ ಪುರಂದರ ವಿಠಲನ |
ದಾಸರ ಕರುಣವೆನ್ನಮೇಲೆ ಇರಲಾಗಿ.

ಪುರಂದರ ವಿಠಲನ ಭಕ್ತರ ಕರುಣೆ ನನ್ನ ಮೇಲೆ ತೆರೆಯಿತು. ತನ್ನನ್ನು ಗುರು ಸ್ವೀಕರಿಸಿದ್ದರಿಂದ ಮಾತ್ರ ಈ ಪುಣ್ಯ ತನಗೆ ಉಂಟಾಯಿತು ಎಂದುಕೊಂಡರು.

---

* ಶ್ರೀನಿವಾಸನಾಯಕ ಈವರೆಗೆ ಒಂದು ಬಗೆ ಭಾಗವತ ಸಂಪ್ರದಾಯದವರಾಗಿ ಇದ್ದಿರಬಹುದೆಂಬ ಊಹೆ ಇದೆ. ಪಂಢರಪುರದಲ್ಲಿ ಆ ಪಂಥದ ಭಕ್ತವೃಂದ ಆ ಕಾಲದಲ್ಲಿ ಅಧಿಕವಾಗಿತ್ತು.

ಆತನಿಗೆ ವಿಶೇಷವಾಗಿ ಇನ್ನೊಂದು ಸಂಗತಿ ಮುಂದಟ್ಟಾಗುತ್ತದೆ. ಗುರುವಿಂದ ಸ್ವೀಕರಿಸಿದ ತಿಳಿವಳಿಕೆ, ಗುರು ಕಲಿಸದ ಅಥವಾ ನಿರ್ದೇಶಿಸದ ಕಾರ್ಯ—ಈ ಎರಡೂ ಹಾವು ಮಾಡಿದ ಉಪವಾಸದಂತೆ—ಎಂಬುದು. ಗುರು ವ್ಯಾಸರಾಯರು ಪುರಂದರವಿಠಲನೇ ವಿಶ್ವದ ಪರಮಪ್ರಭು ಎಂದು ನುಡಿಯುತ್ತಾರೆ. ಮಹಾಮಂತ್ರಗಳನ್ನು ನನಗೆ ಅನುಗ್ರಹಿಸಿದರು; ನನಗೇ ಒಂದು ವಿಶಿಷ್ಟವಾದ ಹೆಸರನ್ನು ಕೊಟ್ಟರು; ದೀಕ್ಷಾಸಮಯದಲ್ಲಿ ನನ್ನ ಭುಜಗಳ ಮೇಲೆ ಹರಿಯ ಲಾಂಛನವಾದ ಚಕ್ರದ ಮುದ್ರೆ ಒತ್ತಿದರು; ಅಂದಿನಿಂದ ನನ್ನ ಎಲ್ಲ ಭಯಗಳೂ ಮಾಯವಾಗಿದೆ; ಅಂಥ ಮುದ್ರೆ ಇಲ್ಲದ ದೇಹ ಮೈಲಿಗೆ—ಎಂದು ಹೇಳಿದ್ದಾರೆ. ಅದಿಲ್ಲದೆ ಮಾಡಿದ ಕೆಲಸ ಬೆಳಕಿಗೆ ಬರುವುದಿಲ್ಲ; ನನಗೆ ಅಂಕಿತ ದಯಪಾಲಿಸಿದ್ದಾರೆ ಎಂದಿದ್ದಾರೆ. ಅದೇ ಹಾಡಿನಲ್ಲಿ ತಮ್ಮ ಗುರುಗಳ ಹಿರಿಮೆಯನ್ನು ಕುರಿತ ವಿವರಗಳಿವೆ. ನ್ಯಾಯಾಮೃತ, ತರ್ಕತಾಂಡವ, ಚಂದ್ರಿಕಾ ಮುಂತಾದ ಗ್ರಂಥಗಳನ್ನು, ತರ್ಕದಲ್ಲಿ ವೇದಾಂತದಲ್ಲಿ ಅವರು ರಚಿಸಿದ್ದಾರೆ. ಮಾಯಾವಾದಿಗಳಾದ ಇಪ್ಪತ್ತೊಂದು ಮಂದಿ ವಿದ್ವಾಂಸರ ಬಾಯಿಗಳನ್ನು ಮುಚ್ಚಿ ಅವರು ಉಸಿರೆತ್ತದಂತೆ ಮಾಡಿದ್ದಾರೆ. ಮಧ್ವರಾಯರ ಅನುಗ್ರಹದಿಂದ ಪುರಂದರ ವಿಠಲನ ಭಕ್ತರಲ್ಲಿ ತಮ್ಮ ನಾಯಕತ್ವವನ್ನು ಸ್ಥಾಪಿಸಿಕೊಂಡಿದ್ದಾರೆ. ಗುರುಗಳು ಶೇಷನಿಂದ ಸ್ಫೂರ್ತಿಗೊಂಡವರು. ಭಕ್ತಪ್ರಹ್ಲಾದನ ಅವತಾರ. ಕುಹುಯೋಗದ ದುಷ್ಫಲಗಳಿಂದ ರಾಜನನ್ನು ಅವರು ರಕ್ಷಿಸಿದರು ಎನ್ನುವುದುಂಟು. ನಾಡಿನ ರಾಜನಿಗೆ ಕೇಡುಂಟಾಗುತ್ತದೆಂಬ ಸಮಯದಲ್ಲಿ ಅದನ್ನು ನಿವಾರಿಸಿ, ಆ ಸಮಯದಲ್ಲಿ ಸಿಂಹಾಸನದ ಮೇಲೆ ತಾನು ಕುಳಿತು ರಾಜನನ್ನು ರಾಜ್ಯವನ್ನು, ಕಾಪಾಡಿದ ಪುರುಷರು ವ್ಯಾಸರಾಯರೆಂದು ಘೋಷಿಸಿದರು. 'ವ್ಯಾಸಾಬ್ಧಿ' ಎಂಬ ಹೆಸರಲ್ಲಿ ರಾಜನು ಒಂದು ಕೆರೆಯನ್ನು ಕಟ್ಟಿಸಿದ್ದನು. ವ್ಯಾಸರಾಯರ ಜೀವನಕ್ಕೆ ಸಂಬಂಧಿಸಿದಂತೆ ಇಲ್ಲಿ ಒಕ್ಕಣಿಸಿರುವ ವಿವರಗಳು ಹಾಗಿವೆ: ಮಹಾನಾರಾಯಣ ಯೋಗಿಯಾದ ಶ್ರೀಪಾದರಾಯರಲ್ಲಿ ವ್ಯಾಸರಾಯರು ಶಿಕ್ಷಣ ಪಡೆದರು. ವಿಜಯೀಂದ್ರರನ್ನೂ ವಾದಿರಾಜರನ್ನೂ ಶಿಷ್ಯರಾಗಿ ನಡಸಿಕೊಂಡರು. ಆ ಇಬ್ಬರೂ ಪ್ರಖ್ಯಾತ ತತ್ವಜ್ಞರು. ವಿದ್ವಾಂಸರು, ಸಾಧುಗಳು (ಸಂತರು), ಬ್ರಹ್ಮ

ಸೂತ್ರಗಳ ಆಧಾರದ ಮೇಲೆ ಮಧ್ವಾಚಾರ್ಯರು ಉಪದೇಶ ಮಾಡಿದ್ದ ತತ್ತ್ವಪಂಥ ಅವರದು. ಕಾಶಿಯಲ್ಲಿ ಪ್ರಖ್ಯಾತರಾಗಿದ್ದ ಗದಾಧರ ಮಿಶ್ರರನ್ನು ಆ ಗುರು ಸೋಲಿಸಿದ್ದರು. ಕಾಶಿಮಿತ್ರ, ಪಕ್ಷಧರ, ವಾಜಪೇಯ, ನರಸಿಂಹಯೋಗಿ, ನರಸಿಂಹ ಮಿಶ್ರರಂಥ 108 ಮಂದಿ ವಿದ್ವಾಂಸರನ್ನು ಗೆದ್ದು ಅವರೆಲ್ಲ ಹರಿಯೇ ಶ್ರೇಷ್ಠ ಪರಮ ಪ್ರಭು ಎಂಬುದಾಗಿ ಪ್ರಕಟಿಸುವಂತೆ ಅವರ ಮೇಲೆಲ್ಲ ಜಯಪತ್ರವನ್ನು ಸಂಪಾದಿಸಿದರು. ಪುರಂದರ ವಿಠಲನೆ ಪರಮೋತ್ಕೃಷ್ಟ ಗುರುವಾಗಿರಲು ಬ್ರಹ್ಮಣ್ಯತೀರ್ಥರ ನೇರ ಶಿಷ್ಯರಾಗಿ ಅವರನ್ನು ಗುರುಗಳ ಗುರುವಾಗಿ ಪಡೆದವರು—ಎಂಬುವು ಈ ಸಂಗತಿಗಳು. ಗುರು ವ್ಯಾಸರಾಯರ ಪಾದಕಮಲವೆ ನನಗೆ ವಿಶ್ರಾಂತಿಯ ನೆಲೆ ಎನ್ನುತ್ತಾರೆ ದಾಸರು. ಅವರಿಂದಲೇ ಪುರಂದರ ವಿಠಲನ ಹಿರಿಮೆಯನ್ನು ನಾನು ಅರಿತುಕೊಳ್ಳಲು ಶಕ್ಯವಾದದ್ದು ಎಂದು ವ್ಯಾಸರಾಯರು ಆತನನ್ನು ಶಿಷ್ಯನನ್ನಾಗಿ ಸ್ವೀಕರಿಸಿದಾಗ ಆತನ ಬಾಳಿಗೆ ಯಾವ ಬಗೆಯ ಅನುಗ್ರಹ ಬಂತು ಎಂಬುದರ ಸ್ವರೂಪವನ್ನು ಈ ಹಾಡು ಸ್ಥಾಪಿಸುತ್ತದೆ. ಆತನ ಮನಸ್ಸಿನಲ್ಲಿದ್ದ ಎಲ್ಲ ಸಂದೇಹಗಳೂ ನಿವಾರಣೆಗೊಂಡವಂತೆ. ತಾನು ಕೈಕೊಂಡ ಕಾರ್ಯಸಾಧನೆಗೆ ಬೇಕಾದ ಸಮಸ್ತ ತಿಳಿವನ್ನು ಸಾಂತ್ವನವನ್ನು ಆ ಗುರುವಿನಲ್ಲಿಯೇ ಕಂಡುಕೊಂಡರು ಎನ್ನುತ್ತಾರೆ.

ಹೊಸತಾಗಿ ಆತನಿಗೆ ಬಂದ ಸ್ಫೂರ್ತಿಯ ಒತ್ತಡದಲ್ಲಿ ಆಗ ಆತನ ಬಾಯಿಂದ ಹಾಡುಗಳು ಬಂದವು. ತನ್ನ ಹೃದಯದ ಅಗತ್ಯಗಳಾವುವು ಆಕಾಂಕ್ಷೆಗಳಾವುವು ಎಂಬುದನ್ನು ಕುರಿತಾದವು ಆ ಹಾಡುಗಳು. ಹಾಗೆಯೇ ಜನ ಬದುಕುತ್ತಿದ್ದ ಬದುಕು, ದೇವರ ಪ್ರವೇಶಕ್ಕೆ ಒದಗದಂತೆ ಹೃದಯಗಳನ್ನು ಮುಚ್ಚಿದ್ದವರ ಬದುಕು, ಅದನ್ನು ಹೊಸ ದಾರಿಗೆ ತರುವ ರೀತಿ—ಇದನ್ನು ಕುರಿತು ಆಗಿರಬೇಕು. ಹಾಗೆಯೇ ಹಿಂದೆ ತಾನು ಬದುಕುತ್ತಿದ್ದ ಬದುಕಿಗೂ ಮಾರ್ಪಾಡುಗೊಂಡ ಬದುಕಿನ ರೀತಿಗೂ ಸಂಬಂಧಪಟ್ಟಂತೆಯೂ ಕೆಲವು ಕಷ್ಟ ತೊಂದರೆಗಳು ಒದಗಿರಬಹುದು. ಮಾರ್ಪಾಡಿಗೆ ಹೊಂದಿಕೊಳ್ಳಬೇಕಾದ ಸಂದರ್ಭದಲ್ಲಿ ಸಂಧಿಕಾಲದ ಲಕ್ಷಣಗಳು ಕಾಣಿಸಿಕೊಳ್ಳುವುದು ಸಹಜ. ಹಿಂದಿನದನ್ನು ಬಿಟ್ಟುಕೊಡಬೇಕಾಗಿತ್ತು. ಹೊಸ ಬಗೆಯ ಸಿದ್ಧಿಗಾಗಿ ಹೊಸ ರೀತಿಗಳನ್ನು ಗಳಿಸಬೇಕಾಗಿತ್ತು. ವ್ಯಾಸ

ರಾಯರು ಅವರಿಗೆ ಹರಿದಾಸ ಜೀವನಕ್ಕೆ ದೀಕ್ಷೆ ಕೊಡುತ್ತಲೇ ಈ ಹೊಸ ಪ್ರಕಾರಕ್ಕೆ ಅವರು ದುಮುಕಿದರು. ಈ ಬೋಧೆಯನ್ನು, ಮಹೋದ್ದೇಶವನ್ನು ಹೊರಹೊಮ್ಮಿಸುವುದರಲ್ಲಿ ಆತನ ಮನಸ್ಸು ನೇರವಾಗಿ ತೊಡಗಿತು. ವ್ಯಾಸರಾಯರು ಶ್ರೀಕೃಷ್ಣ ಎಂಬ ಅಂಕಿತದಲ್ಲಿ ಪದಗಳನ್ನು ರಚಿಸುತ್ತಿದ್ದರು. ಅವರ ಗುರುಗಳಾದ ಶ್ರೀಪಾದರಾಯರ ಅಂಕಿತ 'ರಂಗವಿಠಲ' ಎಂದು. ಇಬ್ಬರ ಪದ ರಚನಾ ಪ್ರಕಾರ ಬಳಕೆಯಲ್ಲಿತ್ತು. ಇವರ ಕಲ್ಪನಾಶಕ್ತಿಯೂ ಅದಕ್ಕೆ ಮಾತು ಕೊಡುವ ಶಕ್ತಿಯೂ ತುಂಬಾ ಸಂಪನ್ನವಾದದ್ದು. ಪುರಂದರ ವಿಠಲನೆಂಬ ಹೊಸ ಹೆಸರು ಬಂದಾಗ ಶ್ರೀನಿವಾಸ ನಾಯಕರು ಧಾರಾಳವಾಗಿ ಆ ಅಂಕಿತದಲ್ಲಿ ಪದಗಳನ್ನು ರಚಿಸಿದರು. * ಪುರಂದರದಾಸರಿಂದ ದಾಸಪಂಥ ಸ್ವಲ್ಪ ಹೆಚ್ಚು ಕಡಮೆ ಸ್ಪಷ್ಟವಾಗಿ ತಲೆ ಎತ್ತಿತು. ಆದರೆ ಈ ಪಂಥದ ಚರಿತ್ರೆಯನ್ನು ತಿಳಿಸಹೋಗುವಾಗ ಆ ಬಗೆಯ ಕೃತಿ ರಚನೆಗೂ ಅಲ್ಲಿ ಪ್ರತಿಫಲಿಸುವ ನಡೆ ಮತ್ತು ವ್ಯಕ್ತಿ ವಿಶೇಷಕ್ಕೂ ಮೂಲ ಶ್ರೀಪಾದರಾಯರು, ವ್ಯಾಸರಾಯರು ಎಂಬುದನ್ನು ಮರೆಯಬಾರದು. †

ವ್ಯಾಸರಾಯರ ಸುತ್ತಲೂ ವಿದ್ವಾಂಸರ ಮಂಡಲಿಯೊಂದು ಮಾಧ್ವ ಪಂಥದ ಪ್ರಕ್ರಿಯೆಗಳನ್ನೂ, ಉಪದೇಶಗಳನ್ನೂ ಪ್ರತಿಪಾದಿಸುವುದರಲ್ಲಿಯೂ, ಪ್ರಚಾರ ಮಾಡುವುದರಲ್ಲಿಯೂ ತೊಡಗಿತ್ತು. ವೇದ ಉಪನಿಷತ್ತುಗಳು, ಧರ್ಮಶಾಸ್ತ್ರ, ಗೀತೆ, ರಾಮಾಯಣ, ಭಾರತ, ಭಾಗವತಾದಿಗಳು ಇವೆಲ್ಲವನ್ನೂ ದ್ವೈತವೇದಾಂತ ದೃಷ್ಟಿಯಿಂದ ಅವರಲ್ಲಿ ವ್ಯಾಖ್ಯಾನ,

---

* ಶ್ರೀಪಾದರಾಯರು, ವ್ಯಾಸರಾಯರು ಇಬ್ಬರು ಮಾಧ್ವ ಮಠಗಳಲ್ಲಿ ಪೀಠಸ್ಥರಾದ್ದರಿಂದ ಅವರನ್ನು ದಾಸರೆಂದು ಕರೆಯುವುದಿಲ್ಲ.

† ಅಚಲಾನಂದ ಮುಂತಾದ ಇನ್ನು ಕೆಲವು ಹೆಸರುಗಳನ್ನು ಇಲ್ಲಿ ಎತ್ತಿಕೊಂಡಿಲ್ಲ. ಅವರ ಕಾಲ ಹತ್ತನೆಯ ಶತಮಾನಕ್ಕಿಂತ ಆಚೆಗೆ ತೆಗೆದುಕೊಂಡು ಹೋಗುವುದುಂಟು. ಆದರೆ ಮಧ್ವಾಚಾರ್ಯರಿಗೆ ಈಚಿನವರು ಅವರು. ಅಲ್ಲಿನ ಭಾಷೆಯಾಗಲಿ, ವಿಷಯವಾಗಲಿ ಅಷ್ಟು ಹಿಂದಿನ ಕಾಲಕ್ಕೆ ತಕ್ಕುದಾಗುವುದಿಲ್ಲ. ನರಹರಿ ತೀರ್ಥರು ಕೆಲವು ಪದಗಳನ್ನು ಮಾಡಿದ್ದಾರೆಂದೂ ಪ್ರತೀತಿ ಇದೆ. ಅವರು ಶ್ರೀ ಮಧ್ವರ ನೇರ ಶಿಷ್ಯರು.

ಅಧ್ಯಯನ ನಡೆದಿತ್ತು. ಶ್ರುತಿ, ಸ್ಮೃತಿಗಳ ಪಾಂಡಿತ್ಯ ಅವರಲ್ಲಿ ವಿಶೇಷ. ಹಿಂದೆ ಯಾವ ಸಂಗತಿಗಳನ್ನು ವಿಶದಪಡಿಸದೆ ಬಿಟ್ಟಿದ್ದರೊ ಅಥವಾ ಸಂದಿಗ್ಧವೆಂದು ಭಾವಿಸಿದರೊ ಅಂಥದನ್ನು ಜಯತೀರ್ಥರು ನಿಷ್ಕೃಷ್ಟವಾಗಿ ವ್ಯಾಖ್ಯಾನ ಮಾಡಿ ಸ್ಥಾಪಿಸಿದ್ದರು. ವಾದದಲ್ಲಿ ವಿದ್ವತ್ತಿನಲ್ಲಿ ಹೇಗೆ ದಕ್ಷರೂ, ಬಲಿಷ್ಠರೂ ಆಗಿದ್ದರೊ ಅವರ ಹೃದಯದ ಭಕ್ತಿಭಾವವೂ ಹಾಗೆಯೇ ಆಳವಾಗಿತ್ತು. ವ್ಯಾಸಕೂಟದಲ್ಲಿದ್ದವರಂತೂ ಶಾಸ್ತ್ರದಲ್ಲಿ ನಿಷ್ಣಾತರಾದವರು. ಭಾಗವತ ಗ್ರಂಥ ಅವರಿಗೆ ಸುಪರಿಚಿತ. ಮೊದಲ ಬಾರಿಗೆ ಮಧ್ವಾಚಾರ್ಯರೇ ಭಾಗವತಕ್ಕೆ ಒಂದು ಪ್ರಧಾನ ಸ್ಥಾನವನ್ನು ಕೊಟ್ಟು ಅದನ್ನು ಪ್ರಮಾಣ ಗ್ರಂಥವಾಗಿ ಸ್ವೀಕರಿಸಿದವರು ಎನ್ನುತ್ತಾರೆ. ಈ ಹೊಸ ಪಂಥದ ವಿಶೇಷ ಲಕ್ಷಣವಾಗಿ ಕೃಷ್ಣಾರಾಧನೆ ಬೆಳೆದಿತ್ತು. ವ್ಯಾಸಕೂಟದ ಪರಿಮಂಡಲದಲ್ಲಿ ಎಲ್ಲವೂ ಪ್ರೌಢ, ಪಾಂಡಿತ್ಯಪೂರ್ಣ, ಬುದ್ಧಿಗಮ್ಯ. ಸಾಮಾನ್ಯಜನರಿಗೆ ತಿಳಿವಳಿಕೆ ಕೊಡಲೆಂದು ಈ ತತ್ವಗಳ ಪರಿಚಯವನ್ನು ಶ್ರೀಪಾದರಾಯರೂ ವ್ಯಾಸರಾಯರೂ ಕನ್ನಡದಲ್ಲಿ ಹಾಡುಗಳನ್ನು ಬರೆದಿದ್ದರು. ಆ ಮೂಲಕ ಸಾಮಾನ್ಯ ಜನದ ಸಂಪರ್ಕವನ್ನು ತಂದುಕೊಳ್ಳಬೇಕೆಂದು ಯತ್ನಿಸಿದ್ದರೂ, ವ್ಯಾಸಕೂಟದ ಮೇಧಾವಿಗಳಿಗೆ ಮೊದಮೊದಲು ದಾಸ ಪಂಥದೊಡನೆ ಹೆಚ್ಚು ಕೆಳೆ ಬೆಳೆಯಲಿಲ್ಲ. ಮುಖ್ಯಾಚಾರ್ಯರಾದ ವ್ಯಾಸರಾಯರು ಅದನ್ನು ಅವರು ಒಪ್ಪಿಕೊಳ್ಳುವಂತೆ ಮಾಡಬೇಕಿತ್ತು. ವಿದ್ವಾಂಸರು ಸಂಕುಚಿತ ಬುದ್ಧಿಯುಳ್ಳವರಾಗಿ ಈ ಪ್ರಯತ್ನದಲ್ಲಿ ವಿರೋಧ ಮಾಡಿದ್ದರಾದ್ದರಿಂದ ಅದನ್ನು ಎದುರಿಸಿ ವ್ಯಾಸರಾಯರು ಬೋಧೆ ಮಾಡಬೇಕಾಯಿತು. ಆದರೆ ಪುರಂದರದಾಸರ ಅನುಭವವನ್ನಾಗಲಿ, ಉಕ್ತಿಯನ್ನಾಗಲಿ ಯಾರೂ ಓಸರಿಸುವಹಾಗಿರಲಿಲ್ಲ. ಅಷ್ಟು ಸಹಜ, ಪ್ರಾಮಾಣಿಕ, ಮನಸ್ಸನ್ನು ಸುಲಭವಾಗಿ ಒಲಿಸಿಕೊಳ್ಳುವಂಥಾದ್ದು. ಅವರ ಹಾಡುಗಳಲ್ಲಿ ಕಾಣುತ್ತಿದ್ದ ಜೀವದ ಹಿರಿಮೆ ಅವರ ಬದುಕು, ಮಾತು ತುಂಬಾ ಶುಚಿಯಾದವು. ವೇದಗಳಲ್ಲಿಯೂ ಉಪನಿಷತ್ತುಗಳಲ್ಲಿಯೂ ಪ್ರತಿಪಾದಿತವಾದ ತತ್ವಗಳಿಗೆ ಹತ್ತಿರವಾಗಿದ್ದವಾದುದರಿಂದ ಆ ಪದಗಳಿಗೆ ಮೈಗೊಡದಿರುವುದು ಅಶಕ್ಯವಾಗಿತ್ತು. ಸ್ವಂತವಾಗಿ ದೊಡ್ಡ ಶ್ರೀಮಂತರಾಗಿದ್ದವರು ವಿಜಯನಗರದ ಸಾಮ್ರಾಜ್ಯದ ಅತ್ಯಂತ

ಧನಿಕರೂ, ವೀರರೂ, ಉನ್ನತರೂ ಆದವರೊಡನೆಯೆ ಒಟ್ಟು ನಾಡಿನಲ್ಲಿದ್ದ ರಾಜರ, ಶ್ರೀಮಂತರ, ಸಹವಾಸವಿಟ್ಟು ಹಿಂದೆ ವ್ಯವಹಾರವಿಟ್ಟುಕೊಂಡಿದ್ದವರು ಸಮಸ್ತ ಸಂಪತ್ತನ್ನೂ ತ್ಯಾಗಮಾಡಿ ಬದುಕನ್ನು ದೇವರ ಕಡೆ ತಿದ್ದಿಕೊಂಡು ದಿವಸ ದಿವಸವೂ ಹಂಪೆಯ ರಸ್ತೆಗಳಲ್ಲಿ ದೇವರ ನಾಮಗಳನ್ನು ಹಾಡುತ್ತ, ಕೊಟ್ಟವರಿಂದ ಭಿಕ್ಷ ಸ್ವೀಕರಿಸುತ್ತ ತಿರುಗುತ್ತಿದ್ದ ದೃಶ್ಯ ಇತರ ಎಲ್ಲ ವಾದವನ್ನೂ ಮೀರಿದ ವಾದವೂ ಶ್ರದ್ಧೆಗೆ ಸ್ಥಾಪಕ ಪ್ರಮಾಣವೂ ಆಗಿತ್ತು. ಆದ್ದರಿಂದ ವ್ಯಾಸಕೂಟದ ಶಿಷ್ಯರಿಗೆ ಪುರಂದರದಾಸರು, ನಿಜವಾದ ದಾಸರೆಂಬುದನ್ನು ತೋರಿಸುವುದು ಸುಲಭವಾಯಿತು. ಶಾಸ್ತ್ರ, ಪುರಾಣ, ವೇದಗಳಲ್ಲಿ ವಿದ್ಯಾ ವಿವೇಕ, ಪ್ರಜ್ಞೆ ಅದೇ ವೈಷ್ಣವ ಪಕ್ಷಪಾತ ಈ ಹಾಡುಗಳಲ್ಲಿ ಯುಕ್ತವಾಗಿ, ಬಲವಾಗಿ, ಸತ್ಯಪ್ರಕಾಶವಾಗಿ ಇರುವುದನ್ನು ಅವರು ತೋರಿಸಿಕೊಟ್ಟರು. ದಾಸರು ನುಡಿದುದು ಬರೆದುದು ಗುಣದಲ್ಲಿಯೂ, ಮೌಲ್ಯದಲ್ಲಿಯೂ ಉಪನಿಷತ್ತುಗಳಿಗೆ ಏನೂ ಕಡಿಮೆಯಿಲ್ಲವೆಂಬುದನ್ನು ತೋರಿಸಿದರು. ಮೊದಮೊದಲು ವ್ಯಾಸಕೂಟದವರಿಗೆ ಉದ್ರೇಕವೇ ಆಯಿತು. ಆದರೆ; ಕ್ರಮವಾಗಿ ಅವರಿಗೇ ಗೊತ್ತಾಯಿತು: ತಾವು ಪ್ರಮಾಣಗ್ರಂಥಗಳಿಂದು ಬಗೆದಿದ್ದ ಮಹಾಗ್ರಂಥಗಳ ಸಂಸ್ಕೃತ ಜನದ ಭಾಷೆಯಿಂದ ಬಹು ದೂರ; ಕ್ಲಿಷ್ಟ. ಸಾಮಾನ್ಯರ ಗ್ರಹಣಕ್ಕೆ ಮೀರಿದುದು ಎಂದು ಪುರಂದರರು ನುಡಿದದ್ದು ಸರಳ, ಸುಲಭ, ನೇರ. ಯಾವ ವಿಷಯಸಂಪತ್ತು ತಮ್ಮ ಪೂಜ್ಯ ಗ್ರಂಥಗಳಲ್ಲಿ ಇದ್ದಿತೊ, ಅದೇ ಸಂಪತ್ತು ಇದರಲ್ಲಿಯೂ ತುಂಬಿತ್ತು; ಹೆಚ್ಚು ಸುಲಭವಾಗಿ ಇದು ಅರ್ಥವಾಗುವಂಥದು. ತಾವು ಜನವರ್ಗಕ್ಕೆ ಕೊಡಬಹುದಾದ ಪ್ರಕಾರಗಳಲ್ಲಿ ದೊರಕಿಸಬಲ್ಲದಿತ್ತು. ಅನತಿಕಾಲದಲ್ಲಿ ಗುರುಗಳ ಅಧಿಕಾರದ ಪರಿಮಂಡಲದಲ್ಲಿಯೇ ಇದಕ್ಕೆ 'ಪುರಂದರೋಪನಿಷತ್' ಎಂಬ ಹೆಸರೂ ಸ್ಥಾನಮಾನವೂ ಬಂದುವು. ಪುರಂದರದಾಸರಿಗೆ ವೇದ್ಯವಾಯಿತು. ಜ್ಞಾನಪಥ, ಧ್ಯಾನ, ಜಪ, ತಪಸ್ಸು, ಮಂತ್ರ, ತಂತ್ರ ಇವುಗಳಲ್ಲಿ ಯಾವುದನ್ನು ಗುರುವಿಂದ ಪಡೆಯಲಿಲ್ಲವೊ ಅದು 'ಅಸತ್' ಎಂದು ಗುರು ವ್ಯಾಸರು ನನಗೆ ತಿಳಿಸಿಕೊಟ್ಟಿದ್ದಾರೆ. ಪುರಂದರವಿಠಲನು ಪರನು ಎಂದರುಹಿ, ದುರಿತ ಭಯವನ್ನೆಲ್ಲ ಪರಿಹರಿಸಿದ್ದು ಈ ಹಿರಿಮೆ. ಗುರು

ಉಪದೇಶವಿಲ್ಲದ ಜ್ಞಾನ, ಯೋಗ, ಕ್ರಿಯೆಗಳು ನಿಷಿದ್ಧ. ಶೋಭಿಸುವುದಿಲ್ಲ. ಅಂಕಿತವಿಲ್ಲದಿರಬಾರದು ಎಂದು ಗುರುಗಳಿತ್ತ ಅಂಕಿತವನ್ನು ಮೆರೆದರು. ಬಹುಶಃ ಶ್ರೀನಿವಾಸನಾಯಕನು, ಹರಿಹರರನ್ನು ಸಮಾನವಾಗಿ ಎಣಿಸಿ ಅವರಿಬ್ಬರಲ್ಲಿ ಯಾರಿಗೂ ಅಧಿಕತೆಯಿಲ್ಲವೆಂದು ತಿಳಿದಿದ್ದ ಭಾಗವತ ಸಂಪ್ರದಾಯವನ್ನು, ಮಧ್ವರು ಉಪದೇಶಿಸಿದ ವಿಷ್ಣು ಪಾರಮ್ಯದ ಕಡೆ ಅದು ತಿರುಗಿಸಿತು. * ಇಲ್ಲಿ ಒಂದಕ್ಕೊಂದಕ್ಕಿರುವ ಭೇದಗಳು ವಿದಿತವಾಗುತ್ತವೆ. ದೇವರು—ಜೀವ, ಜೀವ—ಜಡ, ಜಡ—ಜಡ, ಜಡ—ದೇವ ಈ ವಿಭೇದಗಳುಳ್ಳ ತತ್ವಪ್ರಕಾರ ಸ್ಫುಟವಾಗಿ ವ್ಯಕ್ತಗೊಳ್ಳುತ್ತವೆ. ಸೃಷ್ಟವಾದ ಜಗತ್ತಿನಲ್ಲಿ ಇವುಗಳ ನಡುವೆ ಯಾವ ಯಾವ ಮಟ್ಟ—ವ್ಯತ್ಯಾಸ ಕ್ರಿಯಾವ್ಯಾಪಾರ ಇವೆಯೊ ಅವುಗಳಲ್ಲಿ ಯಾವ ಯಾವ ವರ್ಗಗಳಿವೆಯೊ ಅವುಗಳನ್ನೆಲ್ಲ ಕಾಣಬಹುದು.

ಪುರಂದರದಾಸರಿಗೆ ಈ ಗುರುವಿನ ಅನುಗ್ರಹ ತನ್ನ ಜೀವನಕ್ಕೆ ಒಂದು ಪಾವನತೆ ತಂದಿತು ಎಂಬ ಭಾವವುಂಟಾಯಿತು. ಹರಿದಾಸರ ಸಂಗ ತನಗೆ ದೊರಕಿತು ಇನ್ನೇನು, ಇನ್ನೇನು.

ರಾಗ ಸೌರಾಷ್ಟ್ರ : ತಾಳ ಅಟ್ಟ.

ಹರಿದಾಸರ ಸಂಗ ದೊರೆಯಿತು ಎನಗೀಗ ಇನ್ನೇನಿನ್ನೇನು |
ವರಗುರು ಉಪದೇಶ ಎನಗಾಯಿತು ಇನ್ನೇನಿನ್ನೇನು
ಮಾಯದ ಸಂಸಾರ ಮಮಕಾರ ತಗ್ಗಿತು ಇನ್ನೇನಿನ್ನೇನು
ತೋಯಜಾಕ್ಷನ ನಾಮ ಜಿಹ್ವೆಯೊಳ್ ನೆಲಸಿತು ಇನ್ನೇನಿನ್ನೇನು
ಹಲವುದೈವಗಳಲ್ಲಿ ಹಂಬಲ ಬಿಟ್ಟಿತು ಇನ್ನೇನಿನ್ನೇನು
ಜಲಜನಾಭನ ಧ್ಯಾನ ಹೃದಯದೊಳು ನೆಲಸಿತು ಇನ್ನೇನಿನ್ನೇನು
ತಂದೆ ತಾಯಿ ಮುಚುಕುಂದವರದನಾದ ಇನ್ನೇನಿನ್ನೇನು

* ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ವತಃ
ಭೇದೋ ಜೀವಗಣಾ ಹರೇರನುಚರಾಃ ನೀಚೋಚ್ಚಭಾವಂ ಗತಾಃ |
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿ ತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ||

ಸಂದೇಹವಿಲ್ಲ ಮುಕುಂದ ದಯಮಾಡಿದ ಇನ್ನೇನಿನ್ನೇನು

ಏನೆಂದು ಹೇಳಲಿ ಆನಂದ ಸಂಭ್ರಮ ಇನ್ನೇನಿನ್ನೇನು
ಆ ನಂದಗೋಪನ ಕಂದನ ಮಹಿಮೆಯ ಇನ್ನೇನಿನ್ನೇನು

ಎನ್ನ ವಂಶಗಳಲ್ಲಿ ಪಾವನವಾದವು
ಚಿನ್ಮಯ ಪುರಂದರ ವಿಠಲಯ್ಯ ದೊರಕಿದ ಇನ್ನೇನಿನ್ನೇನು

ಹುಟ್ಟು ಸಾವುಗಳ ಸಂಸಾರಚಕ್ರ ಮತ್ತು ಇದರ ಮೋಹ ಹೋಯಿತು. ಮಮತೆ ಅಭಿಮಾನ ಹೋಯಿತು. ನನ್ನ ನಾಲಿಗೆಯ ಮೇಲೆ ಪ್ರಭುವಿನ ಹೆಸರು ನೆಲಸಿ ನಿಂತಿತು. ಇನ್ನೇನು ಬೇಕು. ಸಮಸ್ತ ನಿರ್ಬಂಧಗಳಿಂದ ಬಿಡುಗಡೆ ಬಂದಿತು. ಮನಸ್ಸಿನಲ್ಲಿ ಎಲ್ಲವೂ ನಿಶ್ಚಯವಾಯಿತು ಎಂಬ ಭಾವಸ್ಥಾಪಿತವಾಯಿತು. ದಾಸ ಜೀವನವನ್ನು ಪುರಂದರದಾಸರು ಹೀಗೆ ಆರಂಭಿಸಿದರು.

ಹಾಗೆಯೇ ಆತನಿಗೆ ಮಂದಟ್ಟಾಯಿತು: ಗುರುವಿಗೆ ಪೂರ್ತಿಯಾಗಿ ಸೋತು ಶರಣಾದ ಹೊರತು, ಆಗುವವರೆಗೂ ಮುಕ್ತಿಯಿಲ್ಲ ಎಂಬುದು.

ರಾಗ ನಾದನಾಮಕ್ರಿಯ : ಆದಿತಾಳ

ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ || ಪ ||
ಪರಿಪರಿಶಾಸ್ತ್ರವನೋದಿದರೇನು ವ್ಯರ್ಥವಾಯಿತು ಯುಕುತಿ || ಅನು ||

ಆರುಶಾಸ್ತ್ರವನೋದಿದರೇನು ನೂ
ರಾರು ಪುರಾಣ ಮುಗಿಸಿದರೇನು |
ಸಾರಸಜ್ಜನರ ಸಂಗವ ಮಾಡದೆ
ಧೀರನೆಂದು ತಾ ತಿರುಗಿದರೇನು || ೧ ||

ಕೊರಳೊಳು ಮಾಲೆಯ ಧರಿಸಿದರೇನು
ಬೆರಳೊಳು ಜಪಮಣಿ ತಿರುವಿದರೇನು |
ಮರಳಿ ಮರಳಿ ತಾ ಹೊರಳಿ ಬೂದಿಯೊಳು
ಮರುಳನಂದದಿ ತಿರುಗಿದರೇನು || ೨ ||

ಧಾರುಣಿಯೆಲ್ಲ ಆಳಿದರೇನು ಶ
ರೀರ ಸುಖವನು ಬಿಡಿಸಿದರೇನು |

ಯಾರ ಜನಕಸಿರಿ ಪುರಂದರ ವಿಠಲನ
ಸಾರ ಮಹಿಮೆಗಳ ತೋರಬಲ್ಲ | ಸದ್ಗುರುವಿನ ಗುಲಾಮ || ೩ ||

ಅನೇಕ ಶಾಸ್ತ್ರಗಳನ್ನು ಅರಿತಿದ್ದರೂ, ಇವರು ತಮ್ಮ ಭಕ್ತಿ ವ್ಯರ್ಥವಾಗಿದೆ ಯೆಂದು ತಿಳಿಯುತ್ತಾರೆ. ಈ ಪದ್ಯದಲ್ಲಿ ಪುರಂದರದಾಸರು ಮಧ್ವಾಚಾರ್ಯರು ಪ್ರಚಾರ ಮಾಡಿದ ದ್ವೈತ ತತ್ವದ ಸಮಸ್ತಭಕ್ತರಾಗುತ್ತಾರೆ. ಇಲ್ಲಿಂದ ಮುಂದೆ ಆತನನ್ನು ಕುರಿತ ಎಲ್ಲ ಕಥೆಗಳನ್ನೂ ಈ ಜನ್ಮದಲ್ಲಿ ಮಧ್ವಾಚಾರ್ಯರಾಗಿರುವವರು, ಹಿಂದೆ ಹನುಮಂತನಾಗಿ ಆಮೇಲೆ ಭೀಮ ನಾಗಿ ಅವತರಿಸಿದ್ದರು ಎಂಬುದೂ ಸೇರುತ್ತದೆ. ಇತರ ಕಥೆಗಳು ಈತನ ಮನಃಪಟಲದಲ್ಲಿ ಸೇರಿಕೊಳ್ಳುತ್ತವೆ. (ವ್ಯಾಸರಾಜರು) ಪ್ರಹ್ಲಾದನ ರೂಪತಾಳಿ, ಮೈತಾಳಿದ್ದರೆಂಬುದೂ ಕ್ರಮವಾಗಿ, ನಂಬಿಕೆಗೆ ಬರುತ್ತದೆ. ಈ ಪ್ರಸಂಗದಲ್ಲಿ ಅನೇಕ ಸಾಧುಸಂತರ ಚರಿತ್ರೆಯಿದೆ. ಅವರೆಲ್ಲಾ ಭಕ್ತಿಗೆ ಮಾದರಿಗಳು, ಮಾರ್ಗದರ್ಶಕರು. ಕರಿ, ಧ್ರುವ, ಪಾಂಚಾಲಿ, ಪ್ರಹ್ಲಾದ, ಅಹಲ್ಯೆ, ಭೀಷ್ಮ, ವಿಭೀಷಣ, ರುಕ್ಮಾಂಗದ, ಗಿರಿಜೆ, ಅಜಾಮಿಳ ಮುಂತಾದವರೆಲ್ಲ ಇಂಥವರು. ಭಕ್ತಿಗೆ ಸಂಬಂಧಿಸಿದ ಸಂಗತಿಗಳನ್ನು ಸ್ಥಾಪಿಸುವುದರಲ್ಲಿ ನಿದರ್ಶನಗಳು. ಅವರಲ್ಲಿ ನಾಲ್ವರು ಐವರು ಅತಿಶಯರು. ನಾರದನು ಹರಿನಾಮವೆಂಬ ಭಕ್ತಿಯ ಬಿತ್ತವನ್ನು ಬಿತ್ತಿದನು. ಧ್ರುವರಾಜ ನಲ್ಲಿ ಅದು ಮೊಳೆಯಿತು. ಪ್ರಹ್ಲಾದನಲ್ಲಿ ಚಿಗುರೊಡೆಯಿತು. ರಕ್ಮಾಂಗದ ನಲ್ಲಿ ಎಲೆಯ ಕುಡಿಗಳಿಟ್ಟವು. ಭೀಷ್ಮರಲ್ಲಿ ಕುಸುಮಿಸಿತು. ದ್ರೌಪದಿ ಯಲ್ಲಿ ಕಾಯಿಬಿಟ್ಟಿತು. ಗಜೇಂದ್ರನಲ್ಲಿ ಆ ಕಾಯಿ ದೋರೆ ಹಣ್ಣಾಯಿತು. ಶುಕಮುನಿಯಲ್ಲಿ ಮಾಗಿ ಪೂರ್ತಿ ಹಣ್ಣಾಯಿತು. ಹಣ್ಣನ್ನು ತಿಂದು ಮುಕ್ತಿ ಹೊಂದಿದವನು ಅಜಾಮಿಳ. ಪರಮ ಪುರುಷನಾದ ಹರಿ ತನ್ನ ಶಕ್ತಿಯಿಂದ ಸೃಷ್ಟಿಮಂಡಲವನ್ನು ನಿರ್ಮಾಣ ಮಾಡಿದನು. ಸಮಸ್ತ ಭೂತಾಂಶ ಗಳನ್ನು ಬಿತ್ತರಿಸಿದ ರೀತಿಯನ್ನು ಪಂಥದವರೆಲ್ಲರೂ ಕಡುನೇಮದಿಂದ ಅನುಸರಿಸಿದರು.

ಮಧ್ವ ಪ್ರಕಾರದ ವೈಷ್ಣವಕ್ಕು ರಾಮಾನುಜ ಪಂಥದ ವೈಷ್ಣವಕ್ಕು ಒಂದು ವಿಶೇಷ ವ್ಯತ್ಯಾಸವಿದೆ. ಭಕ್ತನು ದೇವರಿಗೆ ಪೂರ್ತಿಯಾಗಿ ಭಕ್ತಿ

ಯಲ್ಲಿ ಅರ್ಪಣ ಮಾಡಿಕೊಂಡರೆ, ತನ್ನೆಲ್ಲವನ್ನೂ ಒಪ್ಪಿಸಿ ಪ್ರಸನ್ನನಾದರೆ ಅಲ್ಲಿ ದೇವರು ಅವನ ಕೈಹಿಡಿದು ಉದ್ಧಾರ ಮಾಡುತ್ತಾನೆ. ಇಲ್ಲಿ ಅಷ್ಟು ಸಾಲದು. ಜೀವಾತ್ಮನಾದ ವ್ಯಕ್ತಿಗೂ ದೇವರಿಗೂ ಭಿನ್ನತೆ ಸಂಪೂರ್ಣ. ಮಾಧ್ವ ಪಂಥದಲ್ಲಿ ಭೂಮಿಯಲ್ಲಿ ಹಾಗೆ, ಸ್ವರ್ಗದಲ್ಲಿಯೂ ಹಾಗೆಯೇ. ಮಾಧ್ವ ಪಂಥದಲ್ಲಿ ಭಕ್ತಿ ಶ್ರಮಸಾಧ್ಯವಾದುದು. ಸಮಾಜದ ಎಲ್ಲ ನೇಮಗಳು, ನಡವಳಿಕೆಗಳು, ವರ್ಣಾಶ್ರಮದ ವ್ಯವಸ್ಥೆಗೆ ಒಳಪಟ್ಟು ನಡೆಯಬೇಕು. ಕರ್ಮದ ಅಂಕೆ ಬಲವಾದ್ದು. ವೈರಾಗ್ಯ ಅದಕ್ಕೆ ದಿಕ್ಕುಗಾಣಿಸಬೇಕು. ಜ್ಞಾನನಿಲವನ್ನು ವಿಶದಪಡಿಸಿ ಅರಿವು ತಂದು ಕೊಡಬೇಕು. ವಿವೇಕವೂ ಭಕ್ತಿಯೂ ಭಕ್ತಿಯ ಕೈಹಿಡಿದೇ ನಡೆಯಬೇಕು."

ಮಹಾತ್ಮ್ಯ ಜ್ಞಾನಪೂರ್ವಸ್ತು, ಸುದೃಢಃ ಸರ್ವತೋ ಅಧಿಕಃ |
ಸ್ನೇಹೋ ಭಕ್ತಿರಿತಿ ಪ್ರೋಕ್ತಃ ತಯಾ ಮುಕ್ತಿಃ ನ ಚಾನ್ಯಥಾ ||

ಎಂಬವು, ಆಚಾರ್ಯರು ಆಡಿದ ಮಾತುಗಳು. ಪರಮ ಪುರುಷನಾದ ಹರಿಯ ಹಿರಿಮೆಯನ್ನು ಅರಿತುಕೊಂಡು ದೃಢವಾಗಿ ಉತ್ತಮ ರೀತಿಯಲ್ಲಿ ಪಡೆದ ಸ್ನೇಹವೇ ಭಕ್ತಿ. ಅಂಥ ಭಕ್ತಿಯ ಮೂಲಕವಾಗಿ ಮಾತ್ರ ಮುಕ್ತಿ ಪಡೆಯಬಹುದು. ಬೇರೆ ದಾರಿಗಳಿಲ್ಲ. ಇದಕ್ಕೆ 9 ಪ್ರಕಾರಗಳಿವೆಯೆಂದೂ ಅವನ್ನೆಲ್ಲ ವಿವರವಾಗಿ ತಿಳಿಸಿದ್ದಾರೆ.

ವಿಷ್ಣು ಅಥವಾ ಹರಿ ಎಂಬುದು ದೈವ. ವಿಷ್ಣುವಿನ ಎಲ್ಲ ಅವತಾರಗಳನ್ನು ಹಿರಿಯವೆಂದು ಒಪ್ಪಿದ್ದರೂ ಉದಾಹರಣೆಗಾಗಿ ರಾಮಾವತಾರವನ್ನು ಅವರು ತುಂಬ ಮಾನ್ಯ ಮಾಡುತ್ತಾರೆ. ಆದರೆ ಹರಿದಾಸರಿಗೆಲ್ಲ ಅತೀವವಾಗಿ ಪ್ರಿಯವಾಗಿರುವುದು ಕೃಷ್ಣಾವತಾರ. ಅವನಲ್ಲಿ ಪ್ರಿಯವಾದ ಭಾಗವತದ ಪ್ರಸಂಗಗಳೂ ಇವೆ. ಮಹಾಭಾರತದಲ್ಲಿ ಕೃಷ್ಣಮೂರ್ತಿತ್ವ ತುಂಬ ಗಂಭೀರವಾದ್ದು. ಭಯ ಭೀತಿ ಉಂಟುಮಾಡುವಂಥದ್ದು. ಅವನಲ್ಲಿ ಕಾಣುವ ಗುಣ ಯೋಧನಂತೆ; ಸಲಹೆಕಾರನಂತೆ. ಅವನನ್ನು ಸಮೀಪಿಸುವುದೂ ಎಚ್ಚರಿಕೆಯಿಂದಲೇ ನಡೆಯಬೇಕಾದ್ದು. ಕಾರ್ಯ ಸಾಧನೆ ಮಾಡುವವನನ್ನಾಗಿ ಅವನಿಗೆ ಅಲ್ಲಿ ಪ್ರಾಶಸ್ತ್ಯ ಹೆಚ್ಚು. ಎಲ್ಲರಿಗೂ

ಉಪದೇಶವಿಲ್ಲದ ಜ್ಞಾನ, ಯೋಗ, ಕ್ರಿಯೆಗಳು ನಿಷಿದ್ಧ. ಶೋಭಿಸುವುದಿಲ್ಲ. ಅಂಕಿತವಿಲ್ಲದಿರಬಾರದು ಎಂದು ಗುರುಗಳಿತ್ತ ಅಂಕಿತವನ್ನು ಮೆರೆದರು. ಬಹುಶಃ ಶ್ರೀನಿವಾಸನಾಯಕನು, ಹರಿಹರರನ್ನು ಸಮಾನವಾಗಿ ಎಣಿಸಿ ಅವರಿಬ್ಬರಲ್ಲಿ ಯಾರಿಗೂ ಅಧಿಕತೆಯಿಲ್ಲವೆಂದು ತಿಳಿದಿದ್ದ ಭಾಗವತ ಸಂಪ್ರದಾಯವನ್ನು, ಮಧ್ವರು ಉಪದೇಶಿಸಿದ ವಿಷ್ಣು ಪಾರಮ್ಯದ ಕಡೆ ಅದು ತಿರುಗಿಸಿತು. * ಇಲ್ಲಿ ಒಂದಕ್ಕೊಂದಕ್ಕಿರುವ ಭೇದಗಳು ವಿದಿತವಾಗುತ್ತವೆ. ದೇವರು—ಜೀವ, ಜೀವ—ಜಡ, ಜಡ—ಜಡ, ಜಡ—ದೇವ ಈ ವಿಭೇದಗಳುಳ್ಳ ತತ್ವಪ್ರಕಾರ ಸ್ಫುಟವಾಗಿ ವ್ಯಕ್ತಗೊಳ್ಳುತ್ತವೆ. ಸೃಷ್ಟವಾದ ಜಗತ್ತಿನಲ್ಲಿ ಇವುಗಳ ನಡುವೆ ಯಾವ ಯಾವ ಮಟ್ಟ—ವ್ಯತ್ಯಾಸ ಕ್ರಿಯಾವ್ಯಾಪಾರ ಇವೆಯೊ ಅವುಗಳಲ್ಲಿ ಯಾವ ಯಾವ ವರ್ಗಗಳಿವೆಯೊ ಅವುಗಳನ್ನೆಲ್ಲ ಕಾಣಬಹುದು.

ಪುರಂದರದಾಸರಿಗೆ ಈ ಗುರುವಿನ ಅನುಗ್ರಹ ತನ್ನ ಜೀವನಕ್ಕೆ ಒಂದು ಪಾವನತೆ ತಂದಿತು ಎಂಬ ಭಾವವುಂಟಾಯಿತು. ಹರಿದಾಸರ ಸಂಗ ತನಗೆ ದೊರಕಿತು ಇನ್ನೇನು, ಇನ್ನೇನು.

ರಾಗ ಸೌರಾಷ್ಟ್ರ : ತಾಳ ಅಟ್ಟ.

ಹರಿದಾಸರ ಸಂಗ ದೊರೆಯಿತು ಎನಗೀಗ ಇನ್ನೇನಿನ್ನೇನು |
ವರಗುರು ಉಪದೇಶ ಎನಗಾಯಿತು ಇನ್ನೇನಿನ್ನೇನು
ಮಾಯದ ಸಂಸಾರ ಮಮಕಾರ ತಗ್ಗಿತು ಇನ್ನೇನಿನ್ನೇನು
ತೋಯಜಾಕ್ಷನ ನಾಮ ಜಿಹ್ವೆಯೊಳ್ ನೆಲಸಿತು ಇನ್ನೇನಿನ್ನೇನು
ಹಲವುದೈವಗಳಲ್ಲಿ ಹಂಬಲ ಬಿಟ್ಟಿತು ಇನ್ನೇನಿನ್ನೇನು
ಜಲಜನಾಭನ ಧ್ಯಾನ ಹೃದಯದೊಳು ನೆಲಸಿತು ಇನ್ನೇನಿನ್ನೇನು
ತಂದೆ ತಾಯಿ ಮುಚುಕುಂದವರದನಾದ ಇನ್ನೇನಿನ್ನೇನು

* ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್‌ತತ್ವತಃ
ಭೇದೋ ಜೀವಗಣಾ ಹರೇರನುಚರಾಃ ನೀಚೋಚ್ಚಭಾವಂ ಗತಾಃ |
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿ ತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ||

ಸಂದೇಹವಿಲ್ಲ ಮುಕುಂದ ದಯಮಾಡಿದ ಇನ್ನೇನಿನ್ನೇನು

ಏನೆಂದು ಹೇಳಲಿ ಆನಂದ ಸಂಭ್ರಮ ಇನ್ನೇನಿನ್ನೇನು
ಆ ನಂದಗೋಪನ ಕಂದನ ಮಹಿಮೆಯ ಇನ್ನೇನಿನ್ನೇನು

ಎನ್ನ ವಂಶಗಳಲ್ಲಿ ಪಾವನವಾದವು
ಚಿನ್ಮಯ ಪುರಂದರ ವಿಠಲಯ್ಯ ದೊರಕಿದ ಇನ್ನೇನಿನ್ನೇನು

ಹುಟ್ಟು ಸಾವುಗಳ ಸಂಸಾರಚಕ್ರ ಮತ್ತು ಇದರ ಮೋಹ ಹೋಯಿತು. ಮಮತೆ ಅಭಿಮಾನ ಹೋಯಿತು. ನನ್ನ ನಾಲಿಗೆಯ ಮೇಲೆ ಪ್ರಭುವಿನ ಹೆಸರು ನೆಲಸಿ ನಿಂತಿತು. ಇನ್ನೇನು ಬೇಕು. ಸಮಸ್ತ ನಿರ್ಬಂಧಗಳಿಂದ ಬಿಡುಗಡೆ ಬಂದಿತು. ಮನಸ್ಸಿನಲ್ಲಿ ಎಲ್ಲವೂ ನಿಶ್ಚಯವಾಯಿತು ಎಂಬ ಭಾವಸ್ಥಾಪಿತವಾಯಿತು. ದಾಸ ಜೀವನವನ್ನು ಪುರಂದರದಾಸರು ಹೀಗೆ ಆರಂಭಿಸಿದರು.

ಹಾಗೆಯೇ ಆತನಿಗೆ ಮಂದಟ್ಟಾಯಿತು: ಗುರುವಿಗೆ ಪೂರ್ತಿಯಾಗಿ ಸೋತು ಶರಣಾದ ಹೊರತು, ಆಗುವವರೆಗೂ ಮುಕ್ತಿಯಿಲ್ಲ ಎಂಬುದು.

ರಾಗ ನಾದನಾಮಕ್ರಿಯ : ಆದಿತಾಳ

ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ || ಪ ||
ಪರಿಪರಿಶಾಸ್ತ್ರವನೋದಿದರೇನು ವ್ಯರ್ಥವಾಯಿತು ಯುಕುತಿ || ಅನು ||

ಆರುಶಾಸ್ತ್ರವನೋದಿದರೇನು ನೂ
ರಾರು ಪುರಾಣ ಮುಗಿಸಿದರೇನು |
ಸಾರಸಜ್ಜನರ ಸಂಗವ ಮಾಡದೆ
ಧೀರನೆಂದು ತಾ ತಿರುಗಿದರೇನು || ೧ ||

ಕೊರಳೊಳು ಮಾಲೆಯ ಧರಿಸಿದರೇನು
ಬೆರಳೊಳು ಜಪಮಣಿ ತಿರುವಿದರೇನು |
ಮರಳಿ ಮರಳಿ ತಾ ಹೊರಳಿ ಬೂದಿಯೊಳು
ಮರುಳನಂದದಿ ತಿರುಗಿದರೇನು || ೨ ||

ಧಾರುಣಿಯೆಲ್ಲ ಆಳಿದರೇನು ಶ
ರೀರ ಸುಖವನು ಬಿಡಿಸಿದರೇನು |

ಯಾರ ಜನಕಸಿರಿ ಪುರಂದರ ವಿಠಲನ
ಸಾರ ಮಹಿಮೆಗಳ ತೋರಬಲ್ಲ | ಸದ್ಗುರುವಿನ ಗುಲಾಮ || ೩ ||

ಅನೇಕ ಶಾಸ್ತ್ರಗಳನ್ನು ಅರಿತಿದ್ದರೂ, ಇವರು ತಮ್ಮ ಭಕ್ತಿ ವ್ಯರ್ಥವಾಗಿದೆ ಯೆಂದು ತಿಳಿಯುತ್ತಾರೆ. ಈ ಪದ್ಯದಲ್ಲಿ ಪುರಂದರದಾಸರು ಮಧ್ವಾ ಚಾರ್ಯರು ಪ್ರಚಾರ ಮಾಡಿದ ದ್ವೈತ ತತ್ವದ ಸಮಸ್ತಭಕ್ತರಾಗುತ್ತಾರೆ. ಇಲ್ಲಿಂದ ಮುಂದೆ ಆತನನ್ನು ಕುರಿತ ಎಲ್ಲ ಕಥೆಗಳನ್ನೂ ಈ ಜನ್ಮದಲ್ಲಿ ಮಧ್ವಾಚಾರ್ಯರಾಗಿರುವವರು, ಹಿಂದೆ ಹನುಮಂತನಾಗಿ ಆಮೇಲೆ ಭೀಮ ನಾಗಿ ಅವತರಿಸಿದ್ದರು ಎಂಬುದೂ ಸೇರುತ್ತದೆ. ಇತರ ಕಥೆಗಳು ಈತನ ಮನಃಪಟಲದಲ್ಲಿ ಸೇರಿಕೊಳ್ಳುತ್ತವೆ. (ವ್ಯಾಸರಾಜರು) ಪ್ರಹ್ಲಾದನ ರೂಪತಾಳಿ, ವೈತಾಳಿದ್ದರೆಂಬುದೂ ಕ್ರಮವಾಗಿ, ನಂಬಿಕೆಗೆ ಬರುತ್ತದೆ. ಈ ಪ್ರಸಂಗದಲ್ಲಿ ಅನೇಕ ಸಾಧುಸಂತರ ಚರಿತ್ರೆಯಿದೆ. ಅವರೆಲ್ಲಾ ಭಕ್ತಿಗೆ ಮಾದರಿಗಳು, ಮಾರ್ಗದರ್ಶಕರು. ಕರಿ, ಧ್ರುವ, ಪಾಂಚಾಲಿ, ಪ್ರಹ್ಲಾದ, ಅಹಲ್ಯೆ, ಭೀಷ್ಮ, ವಿಭೀಷಣ, ರುಕ್ಮಾಂಗದ, ಗಿರಿಜೆ, ಅಜಾಮಿಳ ಮುಂತಾದವರೆಲ್ಲ ಇಂಥವರು. ಭಕ್ತಿಗೆ ಸಂಬಂಧಿಸಿದ ಸಂಗತಿಗಳನ್ನು ಸ್ಥಾಪಿಸುವುದರಲ್ಲಿ ನಿದರ್ಶನಗಳು. ಅವರಲ್ಲಿ ನಾಲ್ವರು ಐವರು ಅತಿಶಯರು. ನಾರದನು ಹರಿನಾಮವೆಂಬ ಭಕ್ತಿಯ ಬಿತ್ತವನ್ನು ಬಿತ್ತಿದನು. ಧ್ರುವರಾಜ ನಲ್ಲಿ ಅದು ಮೊಳೆಯಿತು. ಪ್ರಹ್ಲಾದನಲ್ಲಿ ಚಿಗುರೊಡೆಯಿತು. ರುಕ್ಮಾಂಗದ ನಲ್ಲಿ ಎಲೆಯ ಕುಡಿಗಳಿಟ್ಟವು. ಭೀಷ್ಮರಲ್ಲಿ ಕುಸುಮಿಸಿತು. ದ್ರೌಪದಿ ಯಲ್ಲಿ ಕಾಯಿಬಿಟ್ಟಿತು. ಗಜೇಂದ್ರನಲ್ಲಿ ಆ ಕಾಯಿ ದೋರೆ ಹಣ್ಣಾಯಿತು. ಶುಕಮುನಿಯಲ್ಲಿ ಪಾಗಿ ಪೂರ್ತಿ ಹಣ್ಣಾಯಿತು. ಹಣ್ಣನ್ನು ತಿಂದು ಮುಕ್ತಿ ಹೊಂದಿದವನು ಅಜಾಮಿಳ. ಪರಮ ಪುರುಷನಾದ ಹರಿ ತನ್ನ ಶಕ್ತಿಯಿಂದ ಸೃಷ್ಟಿಮಂಡಲವನ್ನು ನಿರ್ಮಾಣ ಮಾಡಿದನು. ಸಮಸ್ತ ಭೂತಾಂಶ ಗಳನ್ನು ಬಿತ್ತರಿಸಿದ ರೀತಿಯನ್ನು ಪಂಥದವರೆಲ್ಲರೂ ಕಡುನೇಮದಿಂದ ಅನುಸರಿಸಿದರು.

ಮಧ್ವ ಪ್ರಕಾರದ ವೈಷ್ಣವಕ್ಕು ರಾಮಾನುಜ ಪಂಥದ ವೈಷ್ಣವಕ್ಕು ಒಂದು ವಿಶೇಷ ವ್ಯತ್ಯಾಸವಿದೆ. ಭಕ್ತನು ದೇವರಿಗೆ ಪೂರ್ತಿಯಾಗಿ ಭಕ್ತಿ

ಯಲ್ಲಿ ಅರ್ಪಣ ಮಾಡಿಕೊಂಡರೆ, ತನ್ನೆಲ್ಲವನ್ನೂ ಒಪ್ಪಿಸಿ ಪ್ರಸನ್ನನಾದರೆ ಅಲ್ಲಿ ದೇವರು ಅವನ ಕೈಹಿಡಿದು ಉದ್ಧಾರ ಮಾಡುತ್ತಾನೆ. ಇಲ್ಲಿ ಅಷ್ಟು ಸಾಲದು. ಜೀವಾತ್ಮನಾದ ವ್ಯಕ್ತಿಗೂ ದೇವರಿಗೂ ಭಿನ್ನತೆ ಸಂಪೂರ್ಣ. ಮಾಧ್ವ ಪಂಥದಲ್ಲಿ ಭೂಮಿಯಲ್ಲಿ ಹಾಗೆ, ಸ್ವರ್ಗದಲ್ಲಿಯೂ ಹಾಗೆಯೇ. ಮಾಧ್ವ ಪಂಥದಲ್ಲಿ ಭಕ್ತಿ ಶ್ರಮಸಾಧ್ಯವಾದುದು. ಸಮಾಜದ ಎಲ್ಲ ನೇಮಗಳು, ನಡವಳಿಕೆಗಳು, ವರ್ಣಾಶ್ರಮದ ವ್ಯವಸ್ಥೆಗೆ ಒಳಪಟ್ಟು ನಡೆಯಬೇಕು. ಕರ್ಮದ ಅಂಕೆ ಬಲವಾದ್ದು. ವೈರಾಗ್ಯ ಅದಕ್ಕೆ ದಿಕ್ಕುಗಾಣಿಸಬೇಕು. ಜ್ಞಾನನಿಲವನ್ನು ವಿಶದಪಡಿಸಿ ಅರಿವು ತಂದು ಕೊಡಬೇಕು. ವಿವೇಕವೂ ಭಕ್ತಿಯೂ ಭಕ್ತಿಯ ಕೈಹಿಡಿದೇ ನಡೆಯ ಬೇಕು. ”

ಮಹಾತ್ಮ್ಯ ಜ್ಞಾನಪೂರ್ವಸ್ತು, ಸುದೃಢಃ ಸರ್ವತೋ ಅಧಿಕಃ |
ಸ್ನೇಹೋ ಭಕ್ತಿರಿತಿ ಪ್ರೋಕ್ತಃ ತಯಾ ಮುಕ್ತಿಃ ನ ಚಾನ್ಯಥಾ ||

ಎಂಬವು, ಆಚಾರ್ಯರು ಆಡಿದ ಮಾತುಗಳು. ಪರಮ ಪುರುಷನಾದ ಹರಿಯ ಹಿರಿಮೆಯನ್ನು ಅರಿತುಕೊಂಡು ದೃಢವಾಗಿ ಉತ್ತಮ ರೀತಿಯಲ್ಲಿ ಪಡೆದ ಸ್ನೇಹವೇ ಭಕ್ತಿ. ಅಂಥ ಭಕ್ತಿಯ ಮೂಲಕವಾಗಿ ಮಾತ್ರ ಮುಕ್ತಿ ಪಡೆಯಬಹುದು. ಬೇರೆ ದಾರಿಗಳಿಲ್ಲ. ಇದಕ್ಕೆ 9 ಪ್ರಕಾರಗಳಿವೆ ಯೆಂದೂ ಅವನ್ನೆಲ್ಲ ವಿವರವಾಗಿ ತಿಳಿಸಿದ್ದಾರೆ.

ವಿಷ್ಣು ಅಥವಾ ಹರಿ ಎಂಬುದು ದೈವ. ವಿಷ್ಣುವಿನ ಎಲ್ಲ ಅವತಾರಗಳನ್ನು ಹಿರಿಯವೆಂದು ಒಪ್ಪಿದ್ದರೂ ಉದಾಹರಣೆಗಾಗಿ ರಾಮಾವತಾರವನ್ನು ಅವರು ತುಂಬ ಮಾನ್ಯ ಮಾಡುತ್ತಾರೆ. ಆದರೆ ಹರಿದಾಸರಿಗೆಲ್ಲ ಅತೀವ ವಾಗಿ ಪ್ರಿಯವಾಗಿರುವುದು ಕೃಷ್ಣಾವತಾರ. ಅವನಲ್ಲಿ ಪ್ರಿಯವಾದ ಭಾಗವತದ ಪ್ರಸಂಗಗಳೂ ಇವೆ. ಮಹಾಭಾರತದಲ್ಲಿ ಕೃಷ್ಣಮೂರ್ತಿತ್ವ ತುಂಬ ಗಂಭೀರವಾದ್ದು. ಭಯ ಭೀತಿ ಉಂಟುಮಾಡುವಂಥದ್ದು. ಅವನಲ್ಲಿ ಕಾಣುವ ಗುಣ ಯೋಧನಂತೆ; ಸಲಹೆಕಾರನಂತೆ. ಅವನನ್ನು ಸಮೀಪಿಸುವುದೂ ಎಚ್ಚರಿಕೆಯಿಂದಲೇ ನಡೆಯಬೇಕಾದ್ದು. ಕಾರ್ಯ ಸಾಧನೆ ಮಾಡುವವನನ್ನಾಗಿ ಅವನಿಗೆ ಅಲ್ಲಿ ಪ್ರಾಶಸ್ತ್ಯ ಹೆಚ್ಚು. ಎಲ್ಲರಿಗೂ

ಸುಲಭವಾಗಿ ದೊರಕುವವನಲ್ಲ;—ಉನ್ನತರಾಗಲಿ ಕಡಮೆಯವರಾಗಲಿ ಗಂಡಸರಾಗಲಿ, ಹೆಂಗಸರಾಗಲಿ, ಭಕ್ತರ ಅಗತ್ಯಕ್ಕೆ ಕೃಷ್ಣ ಹೆಚ್ಚು ಸುಲಭನೂ, ಸರಳನೂ ಆಗಬೇಕು. ತಮಗೆ ಪ್ರಿಯನಾದ ದೇವನನ್ನಾಗಿ ಹರಿದಾಸರು ಕೃಷ್ಣನನ್ನು ಆಯ್ದುಕೊಂಡಾಗ ಅವನ ಪ್ರೀತಿಗೆ ಪಾತ್ರನಾಗುವ ಬಾಲಕೃಷ್ಣ ಮಥುರೆಯಲ್ಲಿರುವಾಗ ನಡೆದ ಕಥೆಗಳ ಸಂಬಂಧ ಅವರ ಮನಸ್ಸಿಗೆ ತುಂಬಾ ಪ್ರಿಯವಾಗುತ್ತದೆ. ಅವನಿಗೂ ಅವನ ಸಾಕು ತಾಯಿಯಾದ ಯಶೋದೆಗೂ ನಡೆದ ಪ್ರೀತಿಯ ಭಾವ ಒಂದು ಕಡೆ ವಾತ್ಸಲ್ಯಭಾವವಾಗಿ ಕಾಣುವುದಾದರೆ, ವ್ರಜದಲ್ಲಿನ ಬಗೆಬಗೆಯ ವಯಸ್ಸಿನ ಹೆಂಗಸರ ಪ್ರೀತಿ ವಿವಿಧ ವರ್ಣದ ಲೀಲಾವಿನೋದಗಳಿಂದ ರಂಜನೆಗೊಳ್ಳುತ್ತದೆ. ದಾಸರು ರಂಗಯ್ಯ, ವಿಠಲ ಎಂದು ಕರೆಯುವಾಗಲೂ ಕೃಷ್ಣನಿಗೆ ಅವು ಪ್ರತಿನಾಮಗಳು ಮಾತ್ರ. ಅವನ ಯಾವ ಆಟಗಳೂ ಅವರ ಒಲವಿಗೆ ಒಪ್ಪಿಬರುತ್ತವೆ. ಅಸಭ್ಯವೆಂದು ತೋರುವ ಚೇಷ್ಟೆಗಳನ್ನು ಕಂಡರೆ ಅವನ್ನು ಕುರಿತು ದೂರಿಯಾರು ಮಾತ್ರ. ಅವರಲ್ಲಿ ಒಯಸುವ ಸ್ವಾತಂತ್ರ್ಯಗಳಿಗೆ ನಿಷೇಧವಿರುವಂತೆ ಕಾಣುವುದಿಲ್ಲ. ಅವರೆಲ್ಲರಿಗೂ, ಎಂದರೆ ಎಲ್ಲ ಕೃಷ್ಣಭಕ್ತರಿಗೂ, ಕೃಷ್ಣ ವಿಶ್ವಾಸ, ಶ್ರದ್ಧೆ; ಅತ್ಯುಚ್ಚ ನಡವಳಿಕೆಯಾಗುತ್ತದೆ. ಇತರ ಮೌಲ್ಯಗಳಲ್ಲಿ, ಈ ಮೌಲ್ಯ ಪರಮ ಮೌಲ್ಯವಾಗಿ ಗಣ್ಯವಾಗುತ್ತದೆ. ತಂದೆ-ಮಗ, ಗಂಡ-ಹೆಂಡತಿ ಮುಂತಾದ ನಾಡಾಡಿ ಸಂಬಂಧಗಳು ಈ ಬಗೆಗೆ ಹೊರತಾಗುತ್ತವೆ. ಅಥವಾ ಅವಕ್ಕೆ ಮೇಲ್ಪಟ್ಟು ಇದು ನಿಲ್ಲುತ್ತದೆ. ಗಣನೆಗೆ ಬರುವುದಿಲ್ಲ.* ಪುರಂದರ ದಾಸರ ಗೀತಗಳಲ್ಲಂತೂ ಈ ಕಥೆಗಳಲ್ಲಿ, ಪ್ರಕರಣಗಳಲ್ಲಿ ಬೇರೆ ಬಗೆಯ ಕೃಷ್ಣಪಂಥಗಳಲ್ಲಿಯೂ-ಅಷ್ಟೇ ಏನು? ಈಚಿನ ಕಾಲದಲ್ಲಿ ಬಳಕೆಗೆ ಬಂದು ಇತರ ದಾಸರು ಆಮದು ಮಾಡಿ ತರುವ-ಐಂದ್ರಿಯಕವಿಲಾಸಗಳೂ, ಹಸಿತನಗಳೂ ಅದೃಷ್ಟವಶಾತ್ ಕಾಣಬರುವುದಿಲ್ಲ.

ಕೃಷ್ಣನನ್ನು ಕಾಣಲು ಇರುವ ಹಲವು ಮಾರ್ಗಗಳು ಭಕ್ತರ ನಿಲವುಗಳಿಗೂ ಭಾವಗಳಿಗೂ ಸಂಬಂಧಿಸಿದವು. ಪಂಚ ಭಾವಗಳು ಪ್ರಸಿದ್ಧ

* ಶ್ರೀ ವ್ಯಾಸರಾಯರೇ ಮಧುರ ಭಕ್ತಿಗೆ ಸಂಬಂಧಿಸಿದಂತೆ ಕೆಲವು ಗೀತಗಳನ್ನು ಬರೆದಿರುವುದು ಚೇತೋಹಾರಿಯಾಗಿದೆ. ಕುತೂಹಲವನ್ನುಂಟುಮಾಡುವ ಹಾಗಿದೆ.

ವಾದುದು: ಮಧುರ, ವಾತ್ಸಲ್ಯ, ಸಖ್ಯ, ಸೇವ್ಯ, ಶಾಂತ. ತಮಗೂ ಪರಮ ಪುರುಷನಿಗೂ ನಡುವೆ ನೆಲಸುವ ಪ್ರೀತಿಯನ್ನು ಸಾಧಿಸುವುದಕ್ಕೆ ಇವು, ಈ ವರ್ಗದ ಸಂಬಂಧಗಳನ್ನು ಸೂಚಿಸುತ್ತವೆ. ಬಹು ಚೆಲುವಾದ ಇಂಪಾದ ಗೀತಗಳು, ವಾತ್ಸಲ್ಯ ಭಾವದಲ್ಲಿ ತಾಯಿ ಯಶೋದೆಗೂ ಮಗ ನಿಗೂ ನಡುವೆಯ ಭಾವವನ್ನು ಕಾಣಿಸುವ ಅವಕ್ಕೆ ಎರಡನೆ ಕೈ. ಗೋಪಿ ಯರಿಗೂ ಕೃಷ್ಣನಿಗೂ ನಡುವೆ ಬೆಳೆದ ಸಂಬಂಧವನ್ನು ಕುರಿತು ತನ್ನ ಕೊಳಲ ವಾದನದ ಮೂಲಕವೂ ನೃತ್ಯದ ಮೂಲಕವೂ ವ್ರಜದ ಹೆಂಗಳೆ ಯರೆಲ್ಲರಿಗೂ ತನ್ನನ್ನು ಪ್ರಿಯನನ್ನಾಗಿ ಮಾಡಿಕೊಳ್ಳುತ್ತಾನೆ. ಅಲ್ಲಿನ ಸಣ್ಣವಯಸ್ಸಿನ ಹೆಂಗಸರೆಲ್ಲರಿಗೂ ಬೇಕಾದವನಾಗುತ್ತಾನೆ. ಅವನನ್ನು ಕಾಣದೆ ಒಂದು ದಿನ ಬದುಕಲಾರರೆಂಬಂತೆ ಅವರ ಒಡನಾಟ ಬೆಳೆಯು ತ್ತದೆ. ಉದ್ಧವನು, ಕಂಸನ ಸಭೆಗೆ ಅವನನ್ನು ಕರೆಯಬಂದಾಗ ಅವರು ತಬ್ಬಲಿಗಳಾಗುತ್ತಾರೆ. ಯಾವುದೇ ವಯಸ್ಸಿನವರಾಗಲಿ ಮನಸ್ಸು ಎಳತನ ದಲ್ಲಿದ್ದರೆ ಈ ಸಂಬಂಧ ಪ್ರೀತಿದಾಯಕವೇ. ಪ್ರೀತಿಯ ಆ ಸೌಕುಮಾರ್ಯ ಇಲ್ಲಿ ತುಂಬ ನವುರಾಗಿದೆ, ಸೂಕ್ಷ್ಮವಾಗಿದೆ. ಸಖ್ಯ ಭಾವವೆಂಬುದು ಸುದಾಮನಿಗೂ ಕೃಷ್ಣನಿಗೂ ಬೆಳೆದದ್ದು ಒಂದು ರೀತಿ. ನಾರದನ ಕೆಲವು ಕಥೆಗಳು ಒಂದು ಬಗೆಯವು.... ಅರ್ಜುನನೊಡನೆಯದು ಗಂಡು ಪ್ರೀತಿ. ಸೇವ್ಯಭಾವ ಒಡೆಯನಿಗೂ ಸೇವಕನಿಗೂ ಇರುವಂಥದು. ಹೆಚ್ಚು ಗಂಭೀರವಾದದು. ಇಲ್ಲಿನ ಶಿಕ್ಷಣ ಕಿಂಕರಭಾವನಿಷ್ಠವಾದ್ದು. ಬದುಕಿ ನಲ್ಲಿಯೂ ಅಭ್ಯಾಸಗಳಲ್ಲಿಯೂ ಕಾರ್ಯಗಳಲ್ಲಿಯೂ, ಸೇವಕ ತನ್ನ ರೀತಿ ನೀತಿಗಳನ್ನು ಸುವ್ಯವಸ್ಥೆಗೊಳಿಸಿಕೊಳ್ಳಬೇಕು. ತನ್ನ ಬದುಕಿನ ಮತ್ತು ಪ್ರಪಂಚಕ್ಕೆ ಸಂಬಂಧಿಸಿದ ಇತರ ಆಸಕ್ತಿಗಳನ್ನೂ ಬಂಧನಗಳನ್ನೂ ಬಿಸಾಡ ಬೇಕಾಗುತ್ತದೆ. ಒಡೆಯನ ಹಿರಿಮೆಯನ್ನು ಗ್ರಹಿಸಿ ಅದಕ್ಕೆ ಒಳಪಟ್ಟು ನಡೆಯುವುದರಲ್ಲಿಯೇ ಮಗ್ನವಾಗಬೇಕಾಗುತ್ತದೆ. ಪರಮಾತ್ಮನ ಸರ್ವ ಗುಣ ಪರಿಪೂರ್ಣತೆಯ ಧ್ಯಾನ ಅನುಸಂಧಾನಗಳೇ ಅಲ್ಲಿ ಕಾರ್ಯ. ಹಾಗೆ ಮಾಡಿದರೆ ಮಾತ್ರ ಅಲ್ಲಿ ತಾದಾತ್ಮ್ಯಶಕ್ಯ. ಅವನವನ ಸ್ಥಾನ ವನ್ನು ಅವನು ಅರಿಯಬೇಕು. ದೈವದತ್ತವಾದ ಸ್ಥಾನವನ್ನು ಅರಿತು ಭಕ್ತಿ, ಸೇವೆ ಸಲ್ಲಬೇಕು. ತನಗೆ ದೊರಿತ ಯುಕ್ತ ಸ್ಥಾನದಲ್ಲಿ ತಾನಿರು

ವೃದನ್ನು ಕಲಿಯಬೇಕು. ಇಂಥಾ ಎಲ್ಲ ಲಕ್ಷಣಗಳ ಭಕ್ತಿಯನ್ನು ಹರಿ ದಾಸರ ಕೀರ್ತನೆಗಳು ಒದಗಿಸುತ್ತವೆ. ನಿದರ್ಶನವಾಗಿ ಬರುವ ಕಥೆಗಳು ಬಹು ಕಾಲದಿಂದ ಜನ ಕೇಳಿದವು. ಹಾಡುವವನ ಆತ್ಮದ ಅಚ್ಚ ಸರಳತೆ ದಾಸ ಜೀವನದ ಪರಿಶುದ್ಧ ಅನಾಸಕ್ತಿ ಇಲ್ಲಿ ಅನನ್ಯಾಸಕ್ತಿ ಎಂದರೆ ಇತರ ವಿಷಯಗಳನ್ನೂ ಕುರಿತು–ಒಂದು ಕಡೆ, ಅದರ ಜೊತೆಗೆ ಪರಮಾತ್ಮನಲ್ಲಿ ತುಂಬಿ ತುಳುಕುವ ಪ್ರೀತಿ ಅದನ್ನೇ ವ್ಯಕ್ತಪಡಿಸುವ, ಜೀವವರ್ಗವೆಲ್ಲಕ್ಕೂ ಹೊಮ್ಮುವ ಪ್ರೇರಣೆ. ಹಾಡುಗಳಲ್ಲಿನ ಮೋಹಕವಾದ ನಾದಮಾಧುರ್ಯ ಗಳಿಂದ ಈ ಕೃತಿಗಳು ಕೇಳುವವರಿಗೆ ಮಹದಾನಂದವನ್ನುಂಟುಮಾಡ ಬಲ್ಲವು. ವೀರಶೈವ ವಚನಕಾರರು ಸ್ಥಳದಿಂದ ಸ್ಥಳಕ್ಕೆ ಹೋಗುತ್ತಿದ್ದ ವರಲ್ಲ. ಅವರು ಅನುಭವ ಮಂಟಪದಲ್ಲಿಯೊ ಬೇರೆಲ್ಲಿಯೊ ಮನಸ್ಸಿನ ಆಳದಿಂದ ಆಡಿನುಡಿದವು ವಚನಗಳು. ಇಹವನ್ನು, ಪರವನ್ನು ಬಿಟ್ಟ, ಶಿವನಲ್ಲಿ ತನಗಿರುವ ಭಕ್ತಿಯನ್ನು ನಿವೇದಿಸುವುದು ತಮ್ಮ ನಿಲವನ್ನು ಸೂಚಿಸುವವು. ಹರಿದಾಸರು ಜನದ ನಡುವೆ ಸುತ್ತಾಡುತ್ತಿದ್ದವರು. ಬೀದಿ ಯಲ್ಲಿ ಕಂಡ ಗಂಡಸರೊಡನೆ, ಹೆಂಗಸರೊಡನೆ ಮಾತನಾಡುತ್ತ ಸಮಯಕ್ಕೆ ಅಗತ್ಯ ಕಂಡಹಾಗೆ ಮಾತನಾಡುತ್ತಾರೆ. ತಿಳಿವಳಿಕೆ ಕೊಡುತ್ತಾರೆ. ಮಾರ್ಗವನ್ನು, ಮನಸ್ಸನ್ನು ತಿದ್ದುತ್ತಾರೆ. ಸತ್ಯವನ್ನು ನುಡಿದು ದೇವರ ಕಡೆಗೆ ತಿರುಗಿಸುತ್ತಾರೆ. ಆ ಮೂಲಕ ಜನಕ್ಕೆ ಸಂತೋಷವೂ ನೆಮ್ಮದಿಯೂ ಬರುತ್ತವೆ. ಹಾಡಿನ ರೂಪದಲ್ಲಿ ಅವರ ನುಡಿ ನಮಗೆ ಬಂದಿವೆ. ಹಾಡಿನ ಗೇಯತೆ ಅದನ್ನು ಕಿವಿಗಿಂಪು ಮಾಡುತ್ತದೆ.

ಅವತಾರ ತತ್ವವನ್ನು ಅವರು ಒಪ್ಪಿಕೊಂಡದ್ದರ ಒಂದು ವಿಶೇಷ ಲಕ್ಷಣ ವಾಗಿ ಯಶೋದೆ–ಕೃಷ್ಣರ ವಾತ್ಸಲ್ಯಸಂಬಂಧಕ್ಕೆ ಅತಿಶಯವಾದ ಜನ ಪ್ರಿಯತೆಯನ್ನು ತಂದುಕೊಟ್ಟಿತು. ಅದು ಗೋಪಿಕಾಗೀತಗಳು ಸೇರಿ ನಮ್ಮ ನಾಡಿನ ಹಾಡು–ಗಾನ, ನೃತ್ಯ, ಚಿತ್ರಕಲೆ ಶಿಲ್ಪ ಇವುಗಳ ಬಹು ಮಟ್ಟಿನ ಸೌಭಾಗ್ಯಕ್ಕೆ ಕಾರಣವಾಗಿವೆ. ಅವಿಲ್ಲದಿದ್ದರೆ ಈ ಕಲೆಗಳಲ್ಲಿ ನಮಗೆ ಹೆಚ್ಚು ಕೃತಿಸಂಪತ್ತಿಯೇ ಇರುತ್ತಿರಲಿಲ್ಲ. ಅದರ ರಂಜಕತೆ ಯಲ್ಲಿಯೂ ಕೊರತೆ ಇರುತ್ತಿತ್ತು. ಹತ್ತು ಅವತಾರದ ಕಥೆ, ಹರಿದಾಸರ ಕಾಲದ ಹೊತ್ತಿಗೆ ಜನರಲ್ಲಿ ಸ್ವೀಕೃತವಾಗಿತ್ತು. ಈ ದೇವರು, ಅವತಾರ

ಗಳು ಒಂದೇ ಸತ್ವವಾದ್ದರಿಂದ ರಾಮಾಯಣ ಕಥೆಯ ಕೃಷ್ಣಕಥೆಯ ಸಂಗತಿಗಳೂ ಹೆಸರುಗಳೂ ಇವುಗಳೊಡನೆ ಕಲಸಿಕೊಳ್ಳುತ್ತವೆ. ಬೌದ್ಧ, ಜೈನ* ವಿಷಯಗಳು ಸೇರಿಹೋಗಿ ದಿಗಂಬರ ಜೈನರ ಬತ್ತಲತನ ಬೌದ್ಧಾವತಾರಕ್ಕೆ ಲಕ್ಷಣದಂತೆ ವರ್ಣಿತವಾಗುತ್ತವೆ. ಭಕ್ತಿ ಪ್ರಭಾವಯುತ ಸ್ತೋತ್ರವೊಂದು ಕಡೆ ಪ್ರಿಯತೆಗೆ ಇಲ್ಲಿ ಧಾರಾಳವಾದ ಅವಕಾಶ ಸಿಕ್ಕುತ್ತದೆ. ಅವನ್ನು ವ್ಯಕ್ತಗೊಳಿಸಬೇಕಾದ ಎಲ್ಲದರಲ್ಲಿಯೂ ವಿಶ್ವಾಸವಿರುವುದರಲ್ಲಿ ಆ ಸಂಬಂಧದಲ್ಲಿ ಬಂದುದೆಲ್ಲ ಸರಿ. ಸಮತೋಲ ಔಚಿತ್ಯ ಸಮತೆ ಪ್ರಮಾಣಗಳಲ್ಲಿ ಏರುಪೇರಾದಾವು. ಅಂಥದಕ್ಕೆ ಹೆಚ್ಚು ಲಕ್ಷ್ಯವಿರುವುದಿಲ್ಲ. ಅದು ಹೇಗೇ ಇರಲಿ, ಕೃಷ್ಣನಿಗೂ ಗೋಪಿಯರಿಗೂ ಇರುವ ಸಂಬಂಧದಲ್ಲಿ ಪ್ರೀತಿಯ ಕಾವಿದೆ; ಗೌರವವಿದೆ; ಆಪ್ತಭಾವವಿದೆ. ಅವನ್ನು ಕೆಲವಲ್ಲಿ ಅತಿಗೆ ಎಳೆದುಕೊಂಡು ಹೋಗುವ ಪ್ರಕಾರಗಳಿವೆಯಾದರೂ ಹಾಡುವವರಿಗೆ ಆ ಕಡೆಗೆ ಲಕ್ಷ್ಯವಿಲ್ಲ. ಕೆಲವು ಸಾಮಾಜಿಕ ದೃಷ್ಟಿಯಿಂದ ಹಸಿಯಾಗಿ ಕಾಣುವ, ಅಥವಾ ಸಂಕೋಚ ಉಂಟುಮಾಡಬಲ್ಲವಾಗಿರಬಹುದು. ಮುಂದಿನ ಕಾಲದ ಜನರ ಅಭಿರುಚಿ ಅದು ಕಣ್ಣು ಮುಚ್ಚಿಕೊಂಡು ನುಂಗುವಂತೆ ಮಾಡಿಯಾವು. ಆಗ ಕೃಷ್ಣನ ವಯಸ್ಸು ತುಂಬಾ ಚಿಕ್ಕದು. ಅವನ ಆಟವನ್ನೂ, ವಿಲಾಸಗಳನ್ನೂ ವರ್ಣಿಸುವುದರಲ್ಲಿ ಶೃಂಗಾರ ಭಾವದ ಪ್ರೌಢ ಪ್ರಕಾರಗಳನ್ನೂ, ಲೀಲೆಗಳನ್ನೂ ವರ್ಣಿಸಿರುವುದು ಇದಕ್ಕೆ ಕಾರಣ. ಇಂಥ ಕತೆಗಳು ತನ್ನ ಕಿವಿಗೆ ಬಿದ್ದಾಗ ತಾಯಿ ಮಗನ ಮೇಲೆ ಇಂಥ ದೂರುಗಳನ್ನು ಒಪ್ಪುವುದೇ ಇಲ್ಲ. ಅಲ್ಲದೆಯೆ ಕೃಷ್ಣನು ದೇವರೆಂದು ಒಪ್ಪಿಕೊಂಡುಬಿಟ್ಟಮೇಲೆ ಸಮಾಜದ ಮತ್ತು ಲೋಕಜೀವನದ ಇತರ ಎಲ್ಲ ಬಾಂಧವ್ಯಗಳ ನಿಷ್ಠೆ ಕರಗಿಹೋಗುತ್ತದೆ.

---

* ಬೌದ್ಧ ಪಂಥ ಸಂಪ್ರದಾಯದವರಿಂದ ಮಾನ್ಯವಾಗಿರಲಿಲ್ಲ. ಆದರೆ ಸಾಮಾಜಿಕ ಸಂಘಟನೆಯ ದೃಷ್ಟಿಯಿಂದಲೂ ಸಂಸ್ಕೃತಿಯ ಸಮರಸವನ್ನು ಸಾಧಿಸುವುದ ಕ್ಕೋಸ್ಕರವಾಗಿಯೂ ಬುದ್ಧನನ್ನು ಅವತಾರ ಪುರುಷನೆಂದು ಸೇರಿಸಿಕೊಂಡರು. ಕಲ್ಕಿ ಅವತಾರ ಆಗಿಹೋಯಿತೋ ಇನ್ನೂ ಆಗಲಿದೆಯೋ ನಿರ್ಣಯವಾಗಿ ಎಲ್ಲರೂ ಒಪ್ಪಿದ ಸಂಗತಿಯಲ್ಲ.

ಗುರುಗಳಾದ ವ್ಯಾಸರಾಯರು ಪುರಂದರದಾಸರಿಗೆ ದೇಶದ ಮೇಲೆಲ್ಲಾ ಸುತ್ತಾಡಿ ತೀರ್ಥಯಾತ್ರೆ ಮಾಡಲು ಅಪ್ಪಣೆ ಕೊಟ್ಟರು. ದಾಸರು ಕರ್ಣಾಟಕದಲ್ಲೆಲ್ಲಾ ಸುತ್ತಾಡಿದ್ದಲ್ಲದೇ ದಕ್ಷಿಣದಲ್ಲಿಯೂ, ಉತ್ತರ ಭಾರತ ದಲ್ಲಿಯೂ* ಸಂಚಾರ ಮಾಡಿ ತಮ್ಮ ಆರಾಧ್ಯ ದೇವತೆಯ ಗುಣಗಾನ ವನ್ನು ಮಾಡುತ್ತ ಸಂಚರಿಸಿದರೂ ಎಲ್ಲ ಸ್ಥಳಗಳಿಗಿಂತ ಹೆಚ್ಚಾಗಿ ತಿರುಪತಿಗೆ ದಾಸರ ಪ್ರೀತಿ ಅತಿಶಯವಾಗಿ ಒಲಿತ್ತು. ಅವರಿಗೆ ಅದಕ್ಕಿಂತ ಹೆಚ್ಚು ಚೆಲುವಾದ ಹೆಚ್ಚು ಸ್ಫೂರ್ತಿ ಕೊಡುವ ಸ್ಥಳ ಇರಲಿಲ್ಲ. ನಮ್ಮ ಜನದ ಸ್ಮೃತಿಯಲ್ಲಿ ಅದು ಅತ್ಯಂತ ಪುಣ್ಯಸ್ಥಳವೆಂಬ ನಂಬಿಕೆಯಿತ್ತು. ಪುರಾತನ ಕಾಲದಿಂದಲೂ ವೇಂಗಡಂ ಎಂಬ ಹೆಸರು ಪ್ರಖ್ಯಾತವಾಗಿದೆಯಲ್ಲದೆ ದಕ್ಷಿಣ ವೈಷ್ಣವಪಂಥದ ಆಳ್ವಾರುಗಳ ಒಂದು ಭಕ್ತಿಸ್ಥಾನವೂ ಅವರ ಹಾಡುಗಳಿಗೆ ಸಂಬಂಧಪಟ್ಟದ್ದಾಗಿತ್ತು. ಅಲ್ಲದೆ ಕೃಷ್ಣದೇವರಾಯನೂ ವ್ಯಾಸರಾಯರೂ ಅದರ ಸಂದರ್ಶನಕ್ಕೆ ಮೇಲೆ ಮೇಲೆ ಹೋಗುತ್ತಿದ್ದರು. ಪುರಂದರದಾಸರು ಅವರೊಡನೆ ಸೇರಿಕೊಂಡಿರುತ್ತಿದ್ದರು. ಶ್ರೀನಿವಾಸ ಅಥವಾ ವೆಂಕಟರಮಣ ಎಂಬ ಸ್ತೋತ್ರಗಳುಳ್ಳ ಅವರ ಅನೇಕ ಹಾಡು ಗಳಿವೆ. ಅವರಿಗಾಗಿ ಕೃಷ್ಣದೇವರಾಯ ಒಂದು ಮಂಟಪವನ್ನು ಕಟ್ಟಿಸಿ ಕೊಟ್ಟನೆಂದಿದೆ. ಇತರ ಸಂಪರ್ಕ, ಕಾಟಗಳಿಲ್ಲದೆ ಅವರು ಅಲ್ಲಿ ತಮ್ಮ ಪ್ರತಿದಿನದ ಪೂಜೆ ಪ್ರಾರ್ಥನೆ ಕಾರ್ಯಗಳನ್ನು ಮಾಡಿಕೊಳ್ಳಬಹುದಾ ಗಿತ್ತು. ಆ ಸ್ಥಳದೊಡನೆಯೂ ಒಂದೆರಡು ಪವಾಡಗಳನ್ನು ಹೇಳುತ್ತಾರೆ. ಒಂದು ದಿನ ದಾಸರು ಭಕ್ತವೃಂದವೊಂದಕ್ಕೆ ಭೋಜನ ಮಾಡಿಸುತ್ತಿದ್ದರಂತೆ. ತುಪ್ಪ ಸಾಲದೆ ಬಂತಂತೆ. ಎಂದಿನಂತೆ ಇಂಥ ಕಾರ್ಯಗಳಲ್ಲಿ ನೆರವಾಗು ತ್ತಿದ್ದ ಅಪ್ಪಣ್ಣದಾಸನಿಗೆ ತುಪ್ಪ ತಂದು ಬಡಿಸಲು ದಾಸರು ಹೇಳಿದರಂತೆ. ಅಪ್ಪಣ್ಣ ಹತ್ತಿರದಲ್ಲೆಲ್ಲಿಯೂ ಇರಲಿಲ್ಲ. ಇನ್ಯಾರೊ ಅತಿಥಿಗಳಿಗೆ

---

* ಸ್ಥಳದ ದೇವರನ್ನು ಕುರಿತು ಹಾಡು ಹುಟ್ಟಿ ಬೆಳೆದಿದ್ದರೂ ಕಡೆಗೆ ಆ ದೇವರ ಅಂತರ್ಗತನಾದ ಹರಿ ಅಥವಾ ವಿಷ್ಣುವಿಗೇ ಅದು ಮುಡಿಪು; ಪುರಂದರರಿಗೆ ಹನುಮನ ಅಥವಾ ಮಧ್ವರ ಮತವೇ ಮತ. ಆ ಭಕ್ತಿಯೇ ಭಕ್ತಿ. ಹರಿಸರ್ವೋತ್ತಮತ್ವ ಒಂದರ ವಿಷಯದಲ್ಲಿ ಯಾವ ಇತರ ವಿಶ್ವಾಸಗಳಿಗೂ ಎಡೆಯಿರಲಿಲ್ಲ. ದ್ವೈತ ಪಂಥಕ್ಕೆ ಅವರು ತಿರುಗಿದಾಗ ಈ ಸಂಗತಿ ಅವರ ಪ್ರಧಾನ ಸಮಯವಾಯಿತು.

ಬೇಕಾದಷ್ಟು ತುಪ್ಪ ಬಡಿಸಿದರು. ಆಮೇಲೆ ದಾಸರು ಅಪ್ಪಣ್ಣನನ್ನು ಕುರಿತು ತುಪ್ಪ ಬಡಿಸಲು ತಡವೇಕಾಯಿತೆಂದು ಕೇಳಿದರು. ತಾನು ಬಡಿಸಲಿಲ್ಲವೆಂದು ಅಪ್ಪಣ್ಣದಾಸನು ಹೇಳಿದನಂತೆ. ಆಯಿತು, ಪುರಂದರ ದಾಸರು ತನ್ನ ಆರಾಧ್ಯದೇವತೆಯ ನೆರವು ಸ್ಥಿರವಾಗಿ ಇದೆ ಎಂದು ಸೂಚಿಸಲು ಅಗತ್ಯ ಸಮಯಗಳಲ್ಲಿ ಸಮಯಕ್ಕೆ ತಕ್ಕಂತೆ ಹಾಗೇ ಬೇಕಾದುದೆಲ್ಲವನ್ನೂ ದೊರಕಿಸುತ್ತ ಕೃಪೆ ತೋರಿಸಿದ್ದು ಅರಿವಾಯಿತು. ಇದೇನು ಮೊದಲ ಸಲವಲ್ಲ. ಹಲವು ವರ್ಷಗಳ ಹಿಂದೆ ಇಂಥವೇ ಒಂದೆರಡು ಸಂಗತಿಗಳು ಪಂಢರಪುರದಲ್ಲಿ ನಡೆದಿದ್ದವೆನ್ನುತ್ತಾರೆ: ಅಲ್ಲಿ ವಿಠಲನಿಗೂ ದಾಸರಿಗೂ ನಡುವೆ ಕೆಲವು ಸಂದರ್ಭಗಳು ಹುಟ್ಟಿಕೊಂಡು ದಾಸರ ಪರೀಕ್ಷೆ ನಡೆದಿತ್ತು. ದೇವರ ಪ್ರಸಾದದ ಸುಳಿವು ದೊರೆತಿತ್ತು. ಒಮ್ಮೆ ದಾಸರು ನೀರು ಬೇಕೆಂದು ಅಪ್ಪಣ್ಣನಿಗೆ ತರಹೇಳಿದರಂತೆ. ಆತ ಕೂಡಲೆ ಬರಲಿಲ್ಲ; ನೀರು ತರಲಿಲ್ಲ. ಅವನ ಹಾಗೆಯೇ ಇದ್ದ ಬೇರೆ ಒಬ್ಬರು ನೀರು ತಂದು ಕೊಟ್ಟರಂತೆ. ಹೀಗೆ ತಡಮಾಡಿದುದಕ್ಕಾಗಿ ಕೋಪಗೊಂಡ ದಾಸರು, ಆ ನೀರಿನ ಚೊಂಬನ್ನೇ ಎತ್ತಿ ಅವನ ತಲೆಗೆ ಪೆಟ್ಟು ಕೊಟ್ಟರಂತೆ. ನೀರು ಒದಗಿಸಿದವನು ಅಪ್ಪಣ್ಣನಲ್ಲ. ವಿಠಲಸ್ವಾಮಿ. ಆ ದಿನ ವಿಠಲಸ್ವಾಮಿಯ ಹಣೆಯ ಮೇಲೆ ಒಂದು ಬೋರೆಯಾಯಿತು. ಸ್ವಾಮಿಯ ಕಣ್ಣುಗಳಿಂದ ಕಂಬನಿ ಸುರಿಯತೊಡಗಿತು. ಯಾರು ಏನು ಮಾಡಿದರೂ ಕಣ್ಣೀರು ನಿಲ್ಲಲಿಲ್ಲ. ಈ ಸಂಗತಿಯನ್ನು ದಾಸರಿಗೆ ತಿಳಿಸಿ ಅಲ್ಲಿನವರು ಅವರ ನೆರವು ಬೇಡಿದರಂತೆ. ದಾಸರು ಗರ್ಭಗುಡಿಯೊಳಕ್ಕೆ ಹೋಗಿ ಮೃದುವಾಗಿ ತನ್ನ ದೇವರ ಬೋರೆಯ ಮೇಲೆ ಕೈಯಾಡಿಸಿದರಂತೆ. ಕೆಟ್ಟ ಕೋಪಕ್ಕೆ ಈಡಾಗಿ ತಾನು ಮಾಡಿದ ಅಪರಾಧವನ್ನು ಮನ್ನಿಸಬೇಕೆಂದು ಬೇಡಿಕೊಂಡರಂತೆ. ಕೂಡಲೆ ಊದಿಕೊಂಡಿದ್ದ ಬೋರೆ ಇಳಿದು ದೇವರ ಕಣ್ಣಿಂದ ಕರೆಯುತ್ತಿದ್ದ ಕಣ್ಣೀರು ನಿಂತಿತಂತೆ.

ಎರಡನೆಯ ಸಂಗತಿ ಇನ್ನೊಂದು; ಬಳಿಕದ್ದು; ವಿಠಲ ಪುರಂದರದಾಸರ ನಡುವೆ ಹುಟ್ಟಿಕೊಂಡ ಒಂದು ತಾಪಕಾರಣ. ಪುರಂದರದಾಸರ ಹೆಸರು ಶುದ್ಧ ಚಾರಿತ್ರ್ಯ, ದೇವರಲ್ಲಿ ಆತನಿಗಿದ್ದ ಒಲವು ಎಲ್ಲರಿಗೂ ತಿಳಿದುದು. ಪಂಢರಪುರದಲ್ಲಿದ್ದ ಅತಿ ಸುಂದರಿಯಾದ ವೇಶ್ಯೆಗೂ ತಿಳಿದಿತ್ತು. ಒಂದು

*

ರಾತ್ರಿ ಮಹಾತ್ಮರಾದ ದಾಸರು ತನ್ನ ಮನೆಗೆ ಬಂದುದನ್ನು ಕಂಡು ಆಕೆಗೆ ಆಶ್ಚರ್ಯವಾಯಿತು. ಬಹು ಬೆಲೆಯುಳ್ಳ ಒಂದು ಕಡಗವನ್ನು ಅವಳಿಗೆ ದಾಸರು ಮೆಚ್ಚಾಗಿ ಕೊಟ್ಟರಂತೆ. ಅದು ವಿಠಲದೇವರ ಅಲಂಕಾರದ್ದು. ದಾಸರಿಗೆ ಸೇವೆ ಸಲ್ಲಿಸಲು ಆಕೆಗೆ ತುಂಬ ಸಂತೋಷವಾಯಿತು. ಇಂಥ ವಿಸ್ಮಯಕರ ಸಂಗತಿ ಮಾತ್ರ ಆಕೆಗೆ ಚೋದ್ಯವಾಗಿ ಕಾಣಿಸಿತು. ಬೇರೊಂದು ದಿನ ಬಂದು ಅದರ ಜೊತೆಯ ಕಡಗವನ್ನು ಕೊಡುತ್ತೇನೆಂದು ಅವಳಿಗೆ ಹೇಳಿಹೋದರಂತೆ. ಮಾರನೆಯ ಬೆಳಿಗ್ಗೆ ವಿಠಲದೇವರ ಅಲಂಕಾರದ ಕಡಗ ದೇವರ ಕೈಯಲ್ಲಿ ಇಲ್ಲದ್ದು ಪತ್ತೆಯಾಯಿತು. ಎಷ್ಟೇ ಹುಡುಕಿದರೂ ಸಫಲವಾಗಲಿಲ್ಲ. ಆ ದಿನದ ಆರಾಧನೆಗಾಗಿ ವೇಶ್ಯೆ ದೇವಾಲಯಕ್ಕೆ ಬಂದಾಗ ಅವಳ ಕೈಯಲ್ಲಿ ಇದ್ದ ಕಡಗ ದೇವರ ಕೈಗಡಗ ದಂತೆಯೇ ಇದ್ದುದು ತಿಳಿದು ಅಲ್ಲಿದ್ದವರಿಗೆ ಸಂಶಯ ಕೆರಳಿತು. ಸ್ವಲ್ಪಕಾಲ ಅವಳು ಈ ರಹಸ್ಯವನ್ನು ಬಿಟ್ಟುಕೊಡಲು ಒಪ್ಪಲಿಲ್ಲ. ಅವಳನ್ನು ಪೀಡಿಸಿ ಹಿಂಸೆಗೊಳಿಸಿದಾಗ ಅವಳು ಹೇಳಬೇಕಾಯಿತು, ಪುರಂದರದಾಸರು ಅದನ್ನು ತನಗೆ ಕೊಟ್ಟರೆಂದು. ಕೋಲಾಹಲವೇ ಉಂಟಾಯಿತು. ದಾಸರನ್ನು ಅಲ್ಲಿಗೆ ಕರೆತಂದು ಒಂದು ಕಂಬಕ್ಕೆ ಕಟ್ಟಿಹಾಕಿ ಕೋರಡೆ ಪೆಟ್ಟು ಕೊಟ್ಟ ರಂತೆ. ದಾಸರಿಗೆ ಈ ಸಂಬಂಧದಲ್ಲಿ ಏನೂ ತಿಳಿಯದು. ಅವರು ಪೂರಾ ಪೆಟ್ಟು ತಿಂದಾಗ ಗರ್ಭಗುಡಿಯಿಂದ ಒಂದು ಧ್ವನಿ ಕೇಳಿಸಿತಂತೆ–'ದಾಸರು ನಿರಪರಾಧಿಗಳು ಅವರನ್ನು ಹೋಗಬಿಡಿ' ಎಂದು. ತನ್ನ ಹಣೆಯ ಮ್ಯೇಲೆ ಬಡಿದುದಕ್ಕಾಗಿ ಒಡೆಯನಾದ ಪಂಢರಿನಾಥನು ತನ್ನ ಮೇಲೆ ವಿನೋದಕ್ಕಾಗಿ ಈ ಶಿಕ್ಷೆಯನ್ನು ವಿಧಿಸಿದ್ದಾನೆಂದು ದಾಸರು ಅರಿತು ಕೊಂಡರು. ಈ ಸನ್ನಿವೇಶವನ್ನು ಕುರಿತ ಒಂದು ಪ್ರಖ್ಯಾತವಾದ ಹಾಡಿದೆ :—

ರಾಗ–ಪಂತುವರಾಳಿ, ಛಾಪುತಾಳ:

ಮುಯ್ಯಕ್ಕೆ ಮುಯ್ಯಿ ತೀರಿತು, ಜಗ
ದಯ್ಯ ವಿಜಯ ಸಹಾಯ ಪಂಢರಿರಾಯ || ಪಲ್ಲವಿ ||
ಸಣ್ಣವನೆಂದು ನಾ ನೀರು ತಾವೆಂದರೆ |
ಬೆಣ್ಣಗಳ್ಳ, ಕೃಷ್ಣ ಮರುಳು ಮಾಡಿ |

ಚಿನ್ನದ ಗಿಂಡಿಲಿ ನೀರ ತಂದಿತ್ತರೆ |
ಕಣ್ಣು ಕಾಣದೆ ನಾ ತೋಣದೆ ಪಂಢರಿರಾಯ || |೧|
ಎನ್ನ ಪೆಸರು ಮಾಡಿ ಸೂಳಿಗೆ ಕಂಕಣ |
ವನ್ನು ನೀನೆ ಕೊಟ್ಟು ನಿಜವ ಮಾಡಿ ||
ಎನ್ನ ಪಿಡಿಸಿ ಪರಮ ಭಂಡನ ಮಾಡಿ |
ನಿನ್ನ ಮುಯ್ಯಕೆ ಮುಯ್ಯ ತೀರಿಸಿಕೊಂಡಯ್ಯ || |೨|
ಭಕ್ತವತ್ಸಲನೆಂಬ ಬಿರುದು ಬೇಕಾದರೆ |
ಭಕ್ತರಾಧೀನನಾಗಿರಬೇಡವೆ |
ಯುಕ್ತಿಯಲ್ಲಿ ನಿನ್ನಂಥ ದೇವರ ನಾಕಾಣೆ |
ಮುಕ್ತೀಶ ಪುರಂದರವಿಠಲ ಪಂಢರಿರಾಯ ||

ಈ ಹಾಡು ಕೆಲವರ ವಿಶ್ವಾಸದಲ್ಲಿ ಅವರ ಜೀವನದಲ್ಲಿ ನಡೆದ ವ್ಯಕ್ತಿಶವಾದ ಒಂದು ಘಟನೆ ಎಂಬ ಅಧಿಕಾರಯುತ ಪ್ರಮಾಣ ಎಂದಾಗಿದೆ. ಇದಕ್ಕೆ ನೆರವು ದೊರೆತು ಉಪಷ್ಟಂಭಕವಾಗಿರುವುದು. ಪಂಢರಪುರದ ದೇವಸ್ಥಾನದಲ್ಲಿ ಇಂದಿನವರೆಗೂ ತೋರಿಸುವ ಕಂಬ ಇದೆ. ಅದನ್ನು ಪುರಂದರ ಕಂಬ ಎನ್ನುತ್ತಾರೆ. ದಾಸರನ್ನು ಕಟ್ಟಿಹಾಕಿ ಅವರಿಗೆ ಕೋರಡೆ ಪೆಟ್ಟನ್ನು ಕೊಟ್ಟದ್ದಕ್ಕೆ ಸಾಕ್ಷಿ ಎಂಬಂತೆ;* ಅಥವಾ ಆ ಕಂಬದಿಂದ ಈ ಕಥೆ ಕಟ್ಟಿ ಬಂತೊ!

ಇಂಥ ಕಥೆಗಳು ಭಕ್ತ ಜನರ ಬಾಯಲ್ಲಿ ಅನೇಕವಾಗಿರುತ್ತವೆ. ಅವು ಎಷ್ಟೆಷ್ಟು ನಂಬಲು ಅಶಕ್ಯವಾದುವೊ, ಅಷ್ಟಷ್ಟು ಕೆಲವೇಳೆ ಜನರ ವಿಶ್ವಾಸ ಹೆಚ್ಚು ಆಳವಾಗುವುದು ಸಾಮಾನ್ಯ. ವ್ಯಾವಹಾರಿಕವಾಗಿ ಸರಿ ತಪ್ಪು ಎಂಬ ಅಂಶಗಳು ಇಂಥಲ್ಲಿ ಲೆಕ್ಕಕ್ಕೆ ಬಾರವು. ವಾಸ್ತವ ಅತಿವಾಸ್ತವ ಎಂಬ ವಿವೇಚನೆ ಬರುವುದಿಲ್ಲ. ಯೋಗ್ಯವೇ ಅಲ್ಲವೇ ಎಂಬ ಅಂಶಗಳು

* ಬಹುಶಃ ದಾಸರು ತಮ್ಮ ಪೂಜೆಗಾಗಿ ಅದಕ್ಕೆ ಒರಗಿ ನಿಂತುಕೊಳ್ಳುತ್ತಿದ್ದರೊ ಏನೊ. ತರುವಾಯದ ಕಾಲದಲ್ಲಿ ಈ ಹಾಡಿನ ಸಾಂಗತ್ಯ ಆ ಕಂಬಕ್ಕೆ ದೊರೆತಿರಬೇಕು.

ಕಲಸಿಕೊಳ್ಳುತ್ತವೆ. ಸರಿ–ತಪ್ಪು ಎಂಬವುಗಳಿಗಿಂತ ದೇವರು ಮೇಲ್ಪಟ್ಟು, ಯಾವುದು? ಯಾಕೆ? ಹೇಗೆ? ಎಂಬುದು ಅವನಿಗೆ ಗೊತ್ತು. ಭಕ್ತರೊಡನೆ ಆಟವಾಡಲು ಅವನು ಬಯಸುತ್ತಾನೆ. ಇಂಥ ಸಂದರ್ಭದಲ್ಲೆಲ್ಲ ನಿಜವಾದ ಭಕ್ತಿ ಇದ್ದು ತಮ್ಮ ಪರವಾದ ಶ್ರದ್ಧೆ ವಿಶ್ವಾಸ ಇರುವವನಿಗೆ ಇಂಥುದೆಲ್ಲಾ ಅರ್ಥವಾಗುತ್ತದೆ. ಇದನ್ನು ಅವನು ಸ್ವೀಕರಿಸುತ್ತಾನೆ ಎಂಬುದು ಸ್ವೀಕಾರಕ್ಕೆ ಮುಂಚೆಯೇ ಸಂದಿರುವ ಸಂಗತಿ. ಸಂಪ್ರದಾಯ ಇದನ್ನು ಒಪ್ಪಿಕೊಳ್ಳುತ್ತದೆ. ಅಂಥವನಿಗೆ ಹುಟ್ಟು ಸಾವುಗಳೆಂಬ ಚಕ್ರ ವಿನ್ನೆಲ್ಲಿ ಬಂತು? ಸುಂದರವಾದ ಒಂದು ಸುಳಾದಿಯಲ್ಲಿ ದಾಸರು ಹೀಗೆ ಹೇಳುತ್ತಾರೆ:

> ಹರಿಯ ಒಂಬತ್ತು ಭಕ್ತಿಯ ಬಲ್ಲ ಧೀರ
> ಮರಳಿ ಸಂಸ್ಕೃತಿಯ ದಾರಿಗೆ ಹುಟ್ಟಿಬಾರ
> ದುರಾಚಾರ ದುಷ್ಕೃತಿಗಳನು ಕಂಡು ಸೇರ
> ಹಿರಿಯರೊಳು ಬಿರುನುಡಿಯ ಜಿಹ್ವೆಗೆ ತಾರ ||

ಆಚಾರದಲ್ಲಿ, ಕೆಟ್ಟತನ, ಕೆಟ್ಟದ್ದನ್ನು ಉಂಟುಮಾಡುವುದು ಇವನ್ನು ಕಂಡರೆ ಅವನಿಗಾಗದು. ಅವನ ನಾಲಿಗೆ ಹಿರಿಯರನ್ನು ಕುರಿತು ಬಿರುನುಡಿಯೊಂದನ್ನೂ ನುಡಿಯುವುದಿಲ್ಲ. ಸಂತತವಾಗಿ ಹರಿಯ ಸ್ತೋತ್ರವನ್ನು ಹೇಳುತ್ತಿರುತ್ತಾನೆ. ಅವನ ಹಿರಿಮೆಯನ್ನೇ ಕುರಿತು ಹಾಡುತ್ತಿರುತ್ತಾನೆ. ಅರುವತ್ತು ನಿಮಿಷ ಕಾಲವೂ ವ್ಯರ್ಥವಾಗಿಹೋಗದಂತೆ ಪರಮ ಪದವಿಯನ್ನು ಕುರಿತು ಚಿಂತಿಸುತ್ತಾನೆ. ಭಾಗವತರ ಸಮ್ಮೇಳನದಲ್ಲಿ ಬೆರೆಯುತ್ತಾನೆ. ನೆರೆಹೊರೆಗೆಲ್ಲ ಮುಕ್ತಿಯನ್ನು ಕರೆಯುತ್ತಾನೆ. ಹರಿದಾಸರ ದಾಸತ್ವವನ್ನು ಪಡೆದವನವನು. ನರನಾಗಿ ಮುಕ್ತಿಯನ್ನೊಲಿಸಿ ಕೀರ್ತಿ ಪಡೆಯುತ್ತಾನೆ. ಆತ್ಮನಿವೇದನದಿಂದ ಹರಿಗೆ ತನ್ನನ್ನು ಅರ್ಪಿಸಿಕೊಳ್ಳುತ್ತಾನೆ. ಉರಿ, ಜಲ, ಮಣ್ಣು, ಬಯಲುಗಾಳಿ ಇವನ್ನು ಹೊಂದುವುದಿಲ್ಲ. ಹರಿಕಥಾಶ್ರವಣ, ನಾಮಕೀರ್ತನೆ, ಸ್ಮರಣೆ, ಪಾದಸೇವೆ, ಪೂಜನ, ವಂದನ, ದಾಸ್ಯ, ಸಖ್ಯ, ಆತ್ಮಸಮರ್ಪಣ, ಮುಕ್ತಿಪಥ ತತ್ವ ಇವುಗಳಿಂದ

ಪುರಂದರ ವಿಠಲನ ಪರಮಾತ್ಮ ಸಿದ್ಧ ಗುರು ಮಧ್ವತತ್ವದ ಶ್ರುತಿ ಸ್ಮೃತಿಯಲ್ಲಿ ಸಿದ್ಧ ಎನ್ನುತ್ತಾನೆ.

ಸಾಮಾನ್ಯವಾಗಿ ಹರಿದಾಸರ ಎಲ್ಲ ಹಾಡುಗಳೂ ಈ ಬಗೆಯ ಜೀವನವನ್ನು ಕುರಿತವು; ಮಧ್ವಾಚಾರ್ಯರ ತತ್ವಕ್ಕೆ ಹೊಂದಿಕೊಂಡು ಬದುಕನ್ನು ಕಣ್ಣಿಗೆ ಕಾಣಿಸುತ್ತದೆ. ಸಿರಿವಲ್ಲಭನಂಘ್ರಿಯ ನೆರೆನಂಬಿದವರಿಗೆ ಬಡತನ ಲೆಕ್ಕವಿಲ್ಲ. ನುಡಿ ಎರಡಾಗುವುದಿಲ್ಲ. ಅವರು ಕೋಪ ಮಾಡುವುದಿಲ್ಲ. ಬೆಡಗು ಹೆಣ್ಣುಗಳನ್ನು ಕಡೆಗಣ್ಣಲ್ಲೂ ನೋಡುವುದಿಲ್ಲ. ಮಾತು, ಕ್ರಿಯೆ, ಸಂಬಂಧ, ದೇಹ, ಮನಸ್ಸು ಎಲ್ಲವೂ ಆ ಕಾರ್ಯಕ್ಕೆ ಗಮನವುಳ್ಳವಾಗಿರುತ್ತವೆ. ಅವ್ವಲಕುಮಿಯ ರಮಣ ವಿಷ್ಣು ಅವನಿಗೆ ಗರ್ವವಿಲ್ಲ. 'ಹುವ್ವ ತರುವವರ ಮನೆಗೆ ಹುಲ್ಲನ್ನು ತರುವನು. ಒಂದು ದಳ ತುಳಸಿಯನ್ನು, ಗಂಧ, ಪುಷ್ಪ, ತಂದು ಅರ್ಪಿಸಿದರಾಯಿತು. ಬಂಧಗಳನ್ನು ಪರಿಹರಿಸುತ್ತಾನೆ. ತನ್ನ ಮಂದಿರಗಳಲ್ಲಿ ಇರಿಸಿಕೊಂಡು ಆನಂದ ಉಣಿಸುತ್ತಾನೆ. ತನ್ನ ಭಕ್ತರ ಮನೆಗಳಲ್ಲಿ ತೊತ್ತು ಕೆಲಸ ಮಾಡುತ್ತಾನೆ–ಎನ್ನುತ್ತಾರೆ, ಅಂಥ ಸಂದರ್ಭಗಳನ್ನೆಲ್ಲ ಒಕ್ಕಣಿಸುತ್ತಾರೆ. ಆತನಿಗೆ ಪರಮ ಸುಖ, ಸಂತೋಷ, ಯಂತ್ರವಾಹಕನಾದ ನಾರಾಯಣ ನಾಮ ದೊರಕಿತು. ಅದನ್ನು ಅಂತರಂಗದಲ್ಲಿ ತಾನು ಜಪಿಸಬಹುದು ಎಂಬುದು ಆನಂದಕ್ಕೆ ಕಾರಣ. ಯಾವ ಆಸೆಗೂ ಈಡಾಗಲಿಲ್ಲ. ಕ್ಲೇಶಪಟ್ಟು ಬೀಳಲಿಲ್ಲ. ಆತನ ದಿವ್ಯನಾಮ ಶಾಶ್ವತವಾದ್ದು. ಅರ್ಥ ವೆಚ್ಚವಾಗಲಿಲ್ಲ. ಪ್ರಯೋಜನವೊ; ಮಹಾಮುಕ್ತಿ ಪದವನ್ನು ಸೇರುವಂತಾಯಿತು. ಹಿಂದಿನ ಪಾಪವೆಲ್ಲ ಕಳೆಯಿತು. ಕುಲಕೋಟಿ ಉದ್ಧಾರವಾಯಿತು. ಹಾಸಬಹುದು ಹೊದೆಯಬಹುದು. ಸೂಸು ಒಡಲನು ತುಂಬಬಹುದು. ಅಷ್ಟು ದೊಡ್ಡದು. ತನ್ನನ್ನು ಸುತ್ತಿಕೊಂಡು ಅದು ಕಾಪಾಡುತ್ತದೆ. ಒಂದು ಬಾರಿ ಸ್ತುತಿಸಿದರೆ ಒಂದು ಕೋಟಿ ಜಪದ ಫಲ ಬರುತ್ತದೆ ಎನ್ನುತ್ತಾರೆ. ಆ ಸಂತೋಷ ಭಜನೆಯಲ್ಲಿಯೊ ಸ್ಮರಣೆಯಲ್ಲಿಯೊ ದಾಸರಿಗೆ ಬಾರದಿದ್ದರೆ ಇಂಥ ನೆಮ್ಮದಿ ಬರುವುದು ಕಷ್ಟವಾಗುತ್ತಿತ್ತು. ಹರಿನಾಮವನ್ನು ಉಚ್ಚರಿಸುವವನಿಗೆ ಎಂಥೆಂಥ ಫಲಗಳು ಬರುವುವು! ಗಂಗೆಯನ್ನು ನೋಡಿ ಅಲ್ಲಿ ಸ್ನಾನ ಮಾಡಿದರೆ ಬರುವ ಪುಣ್ಯ, ವೇದಶಾಸ್ತ್ರಗಳ ಜ್ಞಾನದ ಫಲ; ಅಚ್ಚ ಬಂಗಾರದ

ಗಟ್ಟಿ ಅದು; ಪರಕ್ಕಾಗಿ ಯಾರು ಪ್ರಯತ್ನಿಸುತ್ತಾರೊ ಅವರಿಗೆ ಫಲಸಿದ್ಧಿ ಖಂಡಿತ. ಪುಣ್ಯ ನದಿಗಳಲ್ಲಿ ಸ್ನಾನ ಮಾಡದಿರಬಹುದು, ಮಂತ್ರ, ಜಪ, ಉಚ್ಚರಿಸದಿರಬಹುದು, ಧಾರಾಳವಾಗಿ ದಾನಧರ್ಮ ಮಾಡಲಾಗದಿರ ಬಹುದು, ಜ್ಞಾನಿಗಳಲ್ಲದಿರಬಹುದು, ರಹಸ್ಯವಾದ ಧ್ಯಾನಮಾರ್ಗವನ್ನು ಸುತರಾಂ ಅರಿಯದೆ ಇರಬಹುದು. ಅಂಥವರಿಗೂ ಹರಿಭಕ್ತಿಯ ಪ್ರಯೋಜನ ದೊರೆಯುತ್ತದೆ. ಮನುಷ್ಯನಾಗಿ ಹುಟ್ಟಿದವನ ಪಾಪ ಗಳನ್ನೆಲ್ಲ ಶುದ್ಧಿಮಾಡಿ ಅವನನ್ನು ಉದ್ಧರಿಸುತ್ತದೆ. ಅವನು ನಿಜವಾಗಿ ನಂಬಬೇಕು ಮಾತ್ರ. ಪುರಂದರ ವಿಠಲನ ಪ್ರೇಮವನ್ನು ಸಂಪಾದಿಸ ಬೇಕು. ಆ ಪ್ರಭುವಿನ ಹೆಸರುಗಳನ್ನು, ಅವು ಎಷ್ಟು ಸವಿ ಎಂಬುದರ ಕಡೆಗೆ ಅವರ ಮನಸ್ಸು ಹೋಗಿ ನಿಲ್ಲುತ್ತದೆ. ಕಿವಿಯಲ್ಲಿ ಆ ಶಬ್ದ ಮೊಳಗು ತ್ತದೆ. ಅರ್ಥಗ್ರಾಹ್ಯವಾಗುತ್ತದೆ. ಸೂಚನೆಯಾಗುವ ಸಂದರ್ಭ ಒದಗಿ ಬರುತ್ತದೆ. ಸುಮ್ಮನೆ ಆ ಹೆಸರುಗಳನ್ನು ನುಡಿದುಕೊಂಡರೆ ಸಾಕು—ಗಾಢ ವಾದ ಒಂದು ದಿವ್ಯಭಾವ ಹುಟ್ಟಿಬರುತ್ತದೆ, ಉಚ್ಚರಿಸುವ ನಾಲಗೆ ಹೆಚ್ಚಾಗಿ ಯಾವ ಅರ್ಥವನ್ನು ಇಟ್ಟುಕೊಂಡೂ ಉಚ್ಚರಿಸಬೇಕಿಲ್ಲ. ಆ ನುಡಿತದ ಲಯವೇ ತಟ್ಟುತ್ತದೆ. ಅಕ್ಷರಗಳ ಮಾತ್ರೆಗಳ ರಂಗುರಂಜನೆ ವಿಶಿಷ್ಟವಾದ ಒಂದು ಸಂತೋಷವನ್ನು ತರುತ್ತದೆ, ಎನ್ನುತ್ತಾರೆ. ಒಂದೊಂದು ಸಲ ಅನೇಕ ಉಪಮೆಗಳು—

> ಹರಿಯೆಂಬ ನಾಮಾಮೃತದ ಸುರುಚಿಯು ಪರಮ ಭಕ್ತರಿಗಲ್ಲದೆ
> ಅರಿಯದ ಕಷುಮೂರ್ಖ ನೀಚ ಜನರಿಗೆಲ್ಲ ಹರುಷವಾಗಬಲ್ಲದೆ—
> ಅಂದಿಗೆ ಅರಳೆಲೆಯಿಟ್ಟರೆ ಕೋಡಗ ಕಂದನಾಗಬಲ್ಲುದೆ |
> ಹಂದಿಗೆ ಸಕ್ಕರೆ ತುಪ್ಪ ತಿನ್ನಿಸಲು ಗಜೇಂದ್ರನಾಗಬಲ್ಲುದೇ |
> ಚಂದಿರನ ಪೂರ್ಣ ಕಳೆಯನು ತೋರಲು ಅಂಧ ನೋಡಬಲ್ಲನೆ
> ಇಂದಿರೆಯರಸನ ನಾಮದ ಮಹಿಮೆಯ ಮಂದಜ್ಞಾನಿ ಬಲ್ಲನೆ !

ಇದು ಒಂದು ಚರಣ. ಪರಿಪರಿ ಬಂಗಾರವಿಟ್ಟರೆ ದಾಸಿಯು ಅರಸಿಯಾಗ ಬಲ್ಲಳೆ | ಭರದಿಂದ ಶ್ವಾನನ ಬಾಲವ ತಿದ್ದಲು ಸರಳವಾಗಬಲ್ಲುದೆ | ಮೋಡ ವನು ನೋಡಿ ಮಯೂರ ಕುಣಿವಂತೆ ಕೋಳಿ ನೋಡಿ ಕುಣಿಯಬಲ್ಲುದೆ |

ಗೋಡೆಗೆ ಎದುರಾಗಿ ನಾಟ್ಯವಾಡಿದರೆ ಅದು ನೋಡಿ ಸುಖಿಸಬಲ್ಲುದೆ | ಹಾಡಿನ ಕುಶಲತೆ ಕಿವುಡನು ತಾನು ಸರಿಮಾಡಿಕೊಳಬಲ್ಲನೆ | ನಮ್ಮ ಪುರಂದರ ವಿಠಲನ ಮೂಢ ಅಜ್ಞಾನಿ ಬಲ್ಲನೆ | ಇಂಥ ಸಂದರ್ಭಗಳಲ್ಲಿ ಮನಸ್ಸಿಗೆ ಒಂದು ಯೋಚನೆ ಬರುತ್ತದೆ. ಪಲ್ಲವಿಯ ಆರಂಭದ ತತ್ವವನ್ನು ನುಡಿದು ಬಿಟ್ಟಮೇಲೆ ಉಳಿದ ಹೋಲಿಕೆಗಳೆಲ್ಲ ತಾವಾಗಿ ಅಲ್ಲಿನ ಸತ್ಯ ವನ್ನು ಸ್ಥಾಪಿಸುವುದಕ್ಕೆ ನೆರವಾಗುತ್ತದೆ. ಅನುಭವಶಾಲಿಯಾಗಿ ಕಲ್ಪನೆಯ ಶಕ್ತಿಯುಳ್ಳವನು ಇಂಥವು ಇನ್ನೂ ಹತ್ತನ್ನು ಸುಲಭವಾಗಿ ಸೇರಿಸಬಹುದು. ಪಲ್ಲವಿಯ ದೇವರ ಹೆಸರನ್ನಾಗಲಿ, ತತ್ವವನ್ನಾಗಲಿ, ಒಪ್ಪದವನಿಗೆ ಇಷ್ಟು ಪ್ರಮಾಣವೂ ಭಕ್ತಿಯ ಕಡೆಗೆ ನಡಸದೆ ಹೋಗಬಹುದು. ಆದುದರಿಂದಲೇ ಭಕ್ತಿಗೆ ಮತಧರ್ಮಕ್ಕೆ ನಂಬಿಕೆ ಪರಮ ಪ್ರಧಾನ.

"ಹರಿನಾಮ ಕೀರ್ತನೆ ಅನುದಿನ ಪೂಳ್ಪನಿಗೆ, ನರಕಭಯಗಳುಂಟೆ ?" ಎಂಬುದು ಇನ್ನೊಂದು ಕೀರ್ತನೆ. ಇದಕ್ಕೆ ನೆರವಾಗಿ ಎಷ್ಟು ಹೋಲಿಕೆ ಗಳು ಕೇಸರಿಗಂಜದ ಮೃಗವುಂಟೆ ದಿ | ನೇಶನಿಗಂಜದ ತಮವುಂಟೆ ಕುಲಿಶವನೆದುರಿಪ ಗಿರಿವುಂಟೆ–ಬಲು | ಪ್ರಳಯ ಬಂದಾಗ ಜೀವಿಪರುಂಟೆ ಜಲಜನಾಭ ಗೋವಿಂದ ಜನಾರ್ಧನ | ಕಲುಷಹರಣ ಕರಿರಾಜ ರಕ್ಷಕನೆಂಬ ಹೆಸರುಗಳನ್ನು ನೆನಸಿಕೊಂಡರೆ ಉಳಿದ ಎಲ್ಲ ದೋಷಗಳೂ ಮುರಿದು ಬೀಳುವುವು. ಗರುಡನಿಗೆ ಅಂಜದ ಫಣಿವುಂಟೆ ದಳ್ಳುರಿಯುಲಿ ಬೇಯುವ ತೃಣವುಂಟೆ ! ಎಂದವರೇ ನರಹರಿ ನಾರಾಯಣ, ಕೃಷ್ಣ ಕೇಶವ ಎಂದುಚ್ಚ ರಿಸುವವರಿಗೆ ಎಲ್ಲ ಲೋಪಗಳೂ, ದೋಷಗಳೂ ತುಂಬಿಕೊಳ್ಳುತ್ತವೆ.

ವಿಷ್ಣುವಿನ ನೇರವಾದ ಗಟ್ಟಿಸಹಾಯ ಕೂಡ ಅಗತ್ಯವಿಲ್ಲ. ಅವನ ಹೆಸರಿನ ಸಹಾಯ ದೊರೆತರೆ ಸಾಕು. ಈ ಸಂಬಂಧದಲ್ಲಿ ಪ್ರಖ್ಯಾತವಾದ ಹಾಡಿದೆ. 'ನೀನೇಕೊ. ನಿನ್ನ ಹಂಗ್ಯಾಕೊ, ನಿನ್ನ | ನಾಮದ ಬಲವೆನ ಗಿದ್ದರೆ ಸಾಕೊ | ಈ ಸಂಬಂಧದಲ್ಲಿ ರಾಮನಾಮವನು ಜಪಿಸುತ್ತಿದ್ದ ವಾಲ್ಮೀಕಿಯ ಉದ್ಧಾರ ಹೇಗಾಯಿತೆಂದು ನೆನೆಯುತ್ತಾರೆ. ನಾರದ, ಭೀಷ್ಮ, ಅಜಾಮಿಳ, ಪ್ರಹ್ಲಾದ, ಗಜೇಂದ್ರ, ಧ್ರುವ, ಈ ಭಕ್ತರ ಹೆಸರು ಗಳು ಸಂತತವಾಗಿ ಪರಮಸಾಕ್ಷಿಗಳಾಗುತ್ತಾರೆ. ಹರಿಯ ನಾಮ ಅವರನ್ನು

ಕಾಪಾಡಿತು. ಆ ನಾಮವೇ ಅಮೃತಾನ್ನದಂತಿದೆ. ಅದು ದೊರಕಿರುವಾಗ ನೀನೊಲಿದಿದ್ದಂತೆಯೇ; ಇನ್ನು ಹಸಿದಿರಲೇಕೆ ಎಂದು ಕೇಳುತ್ತಾರೆ. ಈ ಸಂಬಂಧದಲ್ಲಿ ಹೆಸರಿಗೆ ಬರುವ ಪಕ್ವಾನ್ನಗಳದು—ಬಾಯಲ್ಲಿ ನೀರೂರಿಸುತ್ತವೆ.*

ಇನ್ನೊಮ್ಮೆ ದಾಸರು ಜನರನ್ನು ಕುರಿತು ಕೂಗಿ ಹೇಳುತ್ತಾರೆ. ಹಣ್ಣು ಬಂದಿದೆ ಕೊಳ್ಳಿರೊ ಎಂದು. ಚಿನ್ನ ಬಾಲಕೃಷ್ಣನೆಂಬ ಚೆನ್ನಾದ ಬಾಳೆ ಹಣ್ಣಂತೆ ಅದು. ಸಾಮಾನ್ಯ ಹಣ್ಣಿಗೂ, ಈ ಹಣ್ಣಿಗೂ ಹೆಚ್ಚಿನ ವ್ಯತ್ಯಾಸವುಂಟು. ಆ ಹಣ್ಣಿಗಿಂತ ಇದು ಮೇಲು. ಕೊಳೆತು ಹೋಗುವುದಲ್ಲ | ಹುಳಿತು ನಾರುವುದಲ್ಲ | ಕಳಿದು ಬೀಸಾಡಿಸಿಕೊಳ್ಳುವುದಲ್ಲ | ಅಳತೆಕೊಂಬುದಲ್ಲ, ಗಿಳಿಕಚ್ಚಿ ತಿಂಬೊದಲ್ಲ | ಶ್ರೀಹರಿಯೆಂಬ ಒಳಿತಾದ ಹಣ್ಣಿದು. ಇನ್ನೊಂದು ಹಾಡಿನಲ್ಲಿ ಅದೇ ಮುತ್ತು ಕೊಳ್ಳಿರಯ್ಯಾ ಎಂದಾಗುತ್ತದೆ. ಅದು ಸಚ್ಚಿದಾನಂದದ ದಿವ್ಯಮುತ್ತು ಎನ್ನುತ್ತಾರೆ. ಮುತ್ತಿನ ಗುಣವೆಲ್ಲ ಇಲ್ಲಿಗೆ ಸೇರಿಕೊಳ್ಳುತ್ತದೆ. ಈ ಆಣಿಮುತ್ತನ್ನು ಜ್ಞಾನವೆಂಬ ದಾರದಲ್ಲಿ ಪೋಣಿಸಿದೆ. ಹಣಕೊಟ್ಟು ಇದನ್ನು ಕೊಳ್ಳಬೇಕಿಲ್ಲ. ಧ್ಯಾನಕೊಟ್ಟು ಕೊಂಡರಾಯಿತು. ಕಟ್ಟಬಾರದು ಇದನು. ಮೂಗಿನಲ್ಲಿಟ್ಟು ಮೆರೆಯಬಾರದು, ಹಿಡಿಯಲಿಕ್ಕೆ ಹೋದರೆ ಸಿಲುಕದು. ಕಡೆಯ ಬೆಲೆ ಕಾಣದು. ಪುರಂದರ ವಿಠಲ ಒಡೆಯ ಎಂಬ ದಿವ್ಯಮುತ್ತನ್ನು ಹಿಡಿಯಬಹುದು. ಇನ್ನಷ್ಟು ಸವಿಯಾದ ಪದಾರ್ಥ ಕಲ್ಲುಸಕ್ಕರೆ. ಹಣ್ಣು, ಮುತ್ತು ಆಗಿದ್ದದ್ದು ಈ ಹಾಡಿನಲ್ಲಿ ಕಲ್ಲುಸಕ್ಕರೆಯಾಗುತ್ತದೆ. ಅದರ ಸವಿಯನ್ನು ಬಲ್ಲವರೇ ಬಲ್ಲರು. ಕೃಷ್ಣನ ದಿವ್ಯನಾಮವೆಂಬ ಕಲ್ಲುಸಕ್ಕರೆಯ

---

* ಉಪ್ಪಿನಕಾಯಿ, ಪಾಕಾದಿ......ಶಾಲ್ಯಾನ್ನ, ಪಳಿದ, ಬಗೆಬಗೆಯ ಸಾರು; ಕರಿದ ಹೂರಣಗಡುಬು, ವಡೆ, ಸೇವಿಗೆ, ಸವಿಸವಿಯ ಪರಮಾನ್ನ, ದೋಸೆ, ಸೂಸಲಗಡುಬು, ನೊರೆಹಾಲು ಸಕ್ಕರೆ,......ಸಜ್ಜಿಗೆ, ಕರಿದ ಹಪ್ಪಳ, ಸಂಡಿಗೆ, ಪರಿಪರಿಯ ಪಕ್ವಾನ್ನ......ರಾಶಿ; ಮಧುರಮಂಡಿಗೆ, ಬೀಸೂರಿಗೆ—ಪರಿಪರಿಯ ಭಕ್ಷ್ಯ. ಆ ಗೋವಿಂದನಿಗೂ ಒಂದು ಸಲಕ್ಕೆ ಸಾಕಾಗಬೇಕು. 'ಸಾಮಾನ್ಯರಿಗೆ ಅವುಗಳಲ್ಲಿ ಒಂದೊ, ಎರಡೊ ಒಮ್ಮೆಗೆ ಪರಿತೃಪ್ತಿ ತರಬಲ್ಲದು. ದುರ್ಭಿಕ್ಷ—ದೂಷಿತವಾದ ನಮ್ಮ ಕಾಲದ ಜನಕ್ಕೆ ಇದು ಕನಸಿನ ಕಲ್ಪನೆ.

ಸವಿ ಸವಿದವರಿಗೆ ತಾನೇ ಗೊತ್ತು. ಸಕ್ಕರೆಗೆ ಸಂಬಂಧಿಸಿದ ದುರ್ಗುಣ ಗಳು, ಲೋಪದೋಷಗಳು ಇದಕ್ಕಿಲ್ಲ. ಎತ್ತ ಹೇರುವುದಲ್ಲ, ಹೊತ್ತು ಮಾರುವುದಲ್ಲ | ಒತ್ತೊತ್ತಿ ಗೋಣಿಯ ತುಂಬೋದಲ್ಲ | ಎತ್ತ ಹೋದರೂ ಮತ್ತೆ ಸುಂಕವು ಇದಕಿಲ್ಲ | ಹತ್ತೆಂಟುಸಾವಿರಕೆ ಬೆಲೆಯಿಲ್ಲದಂಥಾದ್ದು ಅದು—ಸುಂಕದ ಕಾಟ ಆ ಕಾಲದಲ್ಲಿಯೂ ಪೀಡೆಯಾಗಿಯೇ ಇದ್ದಿರಬೇಕು. ವ್ಯಾಪಾರಕ್ಕಾಗಿ ಬರುವ ಸಕ್ಕರೆ ನಷ್ಟಬೀಳಬಲ್ಲುದು. ಈ ಸಕ್ಕರೆ ನಷ್ಟ ಬೀಳುವುದಲ್ಲ; ನಾಶವಾಗುವುದಿಲ್ಲ. ಕಟ್ಟಿ ಇಟ್ಟರೆ ಮತ್ತೆ ಕೆಡುವುದಿಲ್ಲ | ಎಷ್ಟೇ ದಿನವಿಟ್ಟರೂ ಕೆಟ್ಟುಹೋಗುವುದಿಲ್ಲ | ಪಟ್ಟಣದೊಳಗೆ ಒಂದು ಲಾಭ, ಎನಿಸುವಂಥ ಪದಾರ್ಥವಿದು. ಎಷ್ಟೇ ಮಾರಿದರೂ ಅದಕೆ ಅಂತ್ಯ ಇಲ್ಲ. ಎಂತು ನೆನೆಯಲೂ ಪಾಪ ಪರಿಹಾರವಾಗುತ್ತದೆಯೊ ಹೊರತಾಗಿ ಇನ್ನ್ಯಾವ ಆತಂಕವಿಲ್ಲ ಎನ್ನುತ್ತಾರೆ. ಈ ಕಲ್ಲುಸಕ್ಕರೆಯನ್ನು ಕೊಳ್ಳಿ ಕೊಳ್ಳಿ ಎನ್ನುತ್ತಾರೆ. ಒಂದು ಸಣ್ಣ ಸಾಸಿವೆಯ ಕಾಳಿನಷ್ಟು ಕಾಲ ಒಡೆಯನನ್ನು ನೆನಸಿಕೊಳ್ಳುವವನಿಗೆ ಎಂದರೆ ಹಸುವಿನ ಕೊಂಬಿನ ಮೇಲೆ ಸಾಸಿವೆಯ ಕಾಳು ನಿಲ್ಲುವಷ್ಟು ಕಾಲ ನೆನೆಯುವವನಿಗೆ ಕೂಡ ಜೀವನ್ಮುಕ್ತಿ ದೊರೆಯುವುದಂತೆ. ಆ ಕೊಂಬಿನ ತುದಿಯಲ್ಲಿ ಸಾಸಿವೆ ನಿಂತಷ್ಟೆ ಹೊತ್ತಾದರಾಗಲಿ | ದೇವ ದೇವ ನಿನ್ನನ್ನು ನೆನೆದವ ಜೀವನ್ಮುಕ್ತ ನಲ್ಲವೆ ಎಂಬುದು ಒಂದು ಉಗಾಭೋಗದ ಭಾಗ. ಹೀಗಿರುವಾಗ ಸರ್ವ ಕಾಲದಲ್ಲಿ ಒರಲುತ್ತ, ನರಳುತ್ತ | ಹರಿಹರಿ ಎಂದವ ಜೀವನ್ಮುಕ್ತನೆಂಬುದು ಏನು ಆಶ್ಚರ್ಯವಯ್ಯ ಪುರಂದರವಿಠಲ ಎನ್ನುತ್ತಾರೆ. ನಿರಂತರವಾಗಿ ಅವನನ್ನು ನೆನೆಯುವ ಅವನ ಸ್ತೋತ್ರಗಳನ್ನು ಕುರಿತು ಹಾಡುವ ಅವಕಾಶ ಗಳಿಗೆ ಕವಿ ಹಂಬಲಿಸುತ್ತಾನೆ. ಇನ್ನಾವುದೂ | ಅಷ್ಟು ಸಂತೋಷವನ್ನು ತಾರದು | ತ್ರಿಶೂಲ ಡಮರುಗ ಭಸ್ಮಿತ ರುದ್ರಾಕ್ಷ ಎಂದು ಆರಂಭವಾಗುವ ಸುಳಾದಿ ಏಳು ತಾಳಗಳಲ್ಲಿಯೂ ವೇದಾನಂತಕೋಟಿಯನ್ನು ಭೇದಿಸಿ ಸಂತಸದೆ ನೋಡುತಿಹುದು ಒಂದೇ ಮೂರುತಿ. ಆ ದಿವ್ಯಮೂರ್ತಿಗೆ ಎಷ್ಟು ರೂಪಗಳು, ಅವನೇ ಅನಂತ ಮೂರುತಿ, ಅನಂತ ಕೀರುತಿ, ಪುರಂದರವಿಠಲನದೇ ಅನಂತನಾಮ. ದಾಸರ ಸಂತೋಷಕ್ಕೆ ಮಿತಿಯಿಲ್ಲ. ಒಡೆಯನ ಪದವನ್ನಾಗಲಿ ಅವನ ಮೈಯ ಅಂಗಾಂಗಗಳ ಪ್ರತಿಯೊಂದು

ಭಾಗವನ್ನು ನೆನಸಿಕೊಂಡಾಗಲಿ, ನಂಬಿದವನೊಬ್ಬನ ಭಕ್ತಿಯ ಸರಳತೆ ಯಲ್ಲಿ ಇದನ್ನು ಹೇಳುವಾಗ ರಾಗ, ತಾಳ, ಸಾಹಿತ್ಯ, ಭಾವ ಒಂದಾಗಿ ಸೇರಿಕೊಂಡು ಬೆಸೆದುಕೊಳ್ಳುತ್ತವೆ. ಮನಸ್ಸಿನಲ್ಲಿ, ಅಚ್ಚೊತ್ತಿ ನಿಲ್ಲು ತ್ತದೆ. ಇದರ ಪರಿಣಾಮ ಹಾಡುವನ ಮೇಲೆ ಸಂಪೂರ್ಣವಾಗಿ ನಿಲ್ಲುತ್ತದೆ.

ಮಹಾತ್ಮ್ಯ ಸುಳಾದಿ ಎಂಬುದಾಗಿ ಪ್ರಖ್ಯಾತವಾದ ಅದರಲ್ಲಿ ವೇದ ಉಪನಿಷತ್ತುಗಳಲ್ಲಿ ಇರುವ ಕೆಲವು ಸ್ತೋತ್ರಗಳ, ಖಂಡಗಳ ಸಮಾನಾರ್ಥಕ ವರ್ಣನೆಯಿದೆ. ಅದರ ರಚನೆ ವಿಶೇಷವಾದುದು. ಅಣುವಾಗಬಲ್ಲ, ಮಹತ್ತಾಗಬಲ್ಲ, ಅಣುಮಹತ್ತೆರಡೂ, ಒಂದಾಗಬಲ್ಲ ಎಂಬ ಧಾಟಿಯಲ್ಲಿ ಬೆಳೆಯುತ್ತದೆ. ರೂಪವಾಗಬಲ್ಲ | ಅರೂಪವಾಗಬಲ್ಲ—ರೂಪ ಅರೂಪ ಎರಡೊಂದಾಗಬಲ್ಲ | ವ್ಯಕ್ತವಾಗಬಲ್ಲ, ಅವ್ಯಕ್ತವಾಗಬಲ್ಲ—ವ್ಯಕ್ತ ಅವ್ಯಕ್ತ ಎರಡೊಂದಾಗಬಲ್ಲ | ಸಗುಣವಾಗಬಲ್ಲ, ನಿರ್ಗುಣವಾಗಬಲ್ಲ—ಸಗುಣ ನಿರ್ಗುಣವೆರಡೊಂದಾಗಬಲ್ಲ | ಅಘಟನಾಘಟನಶಕ್ತ ಅಚಿಂತ್ಯಾದ್ಭುತ ಮಹಿಮ | ಸ್ವಗತಭೇದ ವಿವರ್ಜಿತ, ಪುರಂದರ ವಿಠಲ ಎಂದು ಮೊದಲ ನೆಯ ಖಂಡ ರೂಪುಗೊಳ್ಳುತ್ತದೆ. ಎರಡನೆಯದು, ಇನ್ನಷ್ಟು ಆದರೆ ಬೇರೆ ರೀತಿಯಲ್ಲಿ ಅರ್ಥವನ್ನು ಬಳಸುತ್ತದೆ. ಕಣ್ಣಲ್ಲಿ ಕೇಳುವ— ಕಾಂಬುವನರಿವ ಆಘ್ರಾಣಿಸುವ, ಆಸ್ವಾದಿಸುವ | ಶ್ರವಣದಿ ಕೇಳುವ ಕಾಂಬುವನರಿವ | ರಸನದಿ ಕೇಳುವ....| ಸ್ಪರುಶದಿ ಕೇಳುವ....| ಘ್ರಾಣದಿ ಕೇಳುವ—ಲೋಕವಿಲಕ್ಷಣ, ದಿವ್ಯಕರುಣ ಲೋಕರಿಗಾಶ್ಚರ್ಯ ಪುರಂದರ ವಿಠಲ. ಒಂದು ಬಗೆಯಲ್ಲಲ್ಲ. ಎಲ್ಲ ಅಂಗಗಳಲ್ಲಿಯೂ ಎಲ್ಲವನ್ನೂ ಮಾಡಬಲ್ಲ ಶಕ್ತಿ ಅದರ ಮಹತ್ವ. ಸಾಮಾನ್ಯ ಜನರಲ್ಲಿ ಒಂದೊಂದು ಅಂಗ ಒಂದು ಕ್ರಿಯೆಗೆ ವಿಶಿಷ್ಟ. ಕಣ್ಣು ವಾಸನೆ ನೋಡುವುದಲ್ಲ. ನಾಲಗೆ ಕೇಳುವುದಲ್ಲ—ಈ ಮಹತ್ತಿಗೆ ಎಲ್ಲವೂ ಒಟ್ಟಿಗೆ ಶಕ್ಯ. ಮಧ್ವಾ ಚಾರ್ಯರ, ಗೀತಾತಾತ್ಪರ್ಯದಲ್ಲಿ ಈ ಅರ್ಥವನ್ನು ಮೆರಸುವ ಒಂದು ಪದ್ಯಭಾಗವಿದೆ :

"ಶೃಣೋತಿ ಚಕ್ಷುಷಾದೇವ ಶ್ರೋತ್ರೇಣ ಚ ವಿಚಕ್ಷತೇ
ಅಪಾಣಿರಪಿ ಚಾದತ್ತೇ ಹ್ಯಪದೋ ವ್ರಜತಿ ದ್ರುತಂ |
ಏವಂ ಸರ್ವೇಂದ್ರಿಯೈಃ ಸರ್ವಂ ಕರೋತಿ ನ ಕರೋತಿ ಚ"

ಈ ಸುಳಾದಿಯ ಇತರ ಚರಣಗಳು ಆಚಾರ್ಯರ ಬ್ರಹ್ಮತರ್ಕ, ಭಾರತ ತಾತ್ಪರ್ಯಗಳಿಂದಲೊ ಅಥವಾ ಛಾಂದೋಗ್ಯ ಉಪನಿಷತ್ತಿನ ಮೇಲೆ ಅವರು ಮಾಡಿರುವ ವ್ಯಾಖ್ಯಾನದಿಂದಲೊ ತೆಗೆದುಕೊಂಡದ್ದು. ಆ ಮೂಲ ಗಳಲ್ಲಿನ ಉಪದೇಶದ ಸಾರವನ್ನು ಸರಳವಾದ ಕನ್ನಡ ಮಾತುಗಳಲ್ಲಿ ದಾಸರು ಹೇಳುತ್ತಾರೆ. ಅರ್ಥ ನೇರವಾಗಿ ತುಂಬಿಕೊಂಡು ಬರುತ್ತದೆ. ಉದಾತ್ತ ಬೋಧೆ ಮಾಡುತ್ತದೆ. ಒಡೆಯನನ್ನು ಕೇಳುವುದೆಲ್ಲಾ ಎಷ್ಟು. ಈ ಬದುಕಿ ನಿಂದ ದಾಟಿಸಿ ಉನ್ನತ ಪರಿಸ್ಥಿತಿಗೆ ಶಿಷ್ಯನನ್ನು ಕರೆದುಕೊಂಡು ಹೋಗು ವಂತಾಗಲಿ ಎಂದು. ಅವನ್ನು ಕುರಿತು ಬಾಳುವುದೊಂದಲ್ಲದೆ ಇನ್ನಾವು ದಕ್ಕೆ ತಾನೆ ಮನುಷ್ಯನ ಚೇಷ್ಟಾವ್ಯಾಪಾರಗಳು ಗುರಿಗೊಳ್ಳಬೇಕು.* ನಾನು, ನನ್ನ ಹೆಂಡತಿ ಮಕ್ಕಳು, ನಮ್ಮೆಲ್ಲರಿಗೂ ನೀನೇ ಕಡೆಯ ಗತಿ; ಆಶ್ರಯ. ಇದನ್ನು ಮಾತ್ರ ಬೇಡುತ್ತೇನೆ. ನಿನಗೆ ಸೇರಿದವರು ನಾವು. ನಮ್ಮನ್ನು ಸ್ವೀಕರಿಸು ಎಂಬುದು ನಿರಂತರ ಬೇಡಿಕೆ.

ಇನ್ನು ಕೆಲವು ಗೀತಗಳಲ್ಲಿ ದೇವರಿಗೂ ಸೇವಕನಾದ ಭಕ್ತನಿಗೂ ನಡುವೆ ಒಂದು ಬಗೆಯ ಕರ್ಮಬಂಧ ಇದೆ, ಎಂದು ದಾಸರು ನುಡಿಯುತ್ತಾರೆ. ಕರ್ಮವನ್ನು ಕುರಿತು ನುಡಿಯುವಾಗ ಅದು ಇನ್ನಾವುದಕ್ಕೂ ಅವಕಾಶ ಕೊಡದು. ಅದರ ಫಲವನ್ನು ಅನುಭವಿಸಿಯೇ ತೀರಬೇಕು. ಆದರಿಂದ ಉದ್ಧಾರವಾಗಬೇಕಾದರೆ ಪುರಂದರವಿಠಲ ಒಬ್ಬನೇ ಶಕ್ತ ಎಂದು.

ಆರೇನ ಮಾಡುವರು ತಾ ಪಾಪಿಯಾದರೆ |
ಸಾರಸೋದ್ಭವ ಬರೆದ ಬರಹ ತಪ್ಪದು | ಹರಿಯೆ || ಪಲ್ಲವಿ ||
ಊರೆಲ್ಲ ನಂಟರು, ಉಣಬಡಿಸುವವರಿಲ್ಲ |

---

* ಮಹತ್ತಿನ ದರ್ಶನವನ್ನು ವರ್ಣಿಸುವಾಗ ಅದಕ್ಕೆ ಯಾವುದೂ ಅಶಕ್ಯವಿಲ್ಲ ಎಂಬುದನ್ನೇ ಒಕ್ಕಣಿಸಲು ರೀತಿ ಇದು:

ಎನ್ನ ಕಡೆಹಾಯಿಸುವುದು ನಿನ್ನ ಭಾರ |
ನಿನ್ನ ಸ್ಮರಣ ಮಾಡುವುದು ಎನ್ನ ವ್ಯಾಪಾರ || ಪ ||
ಎನ್ನ ಸತಿ ಸುತರಿಗೆ ನೀನೇ ಗತಿ |
ನಿನ್ನವರೆಂಬುದೇ ಎನ್ನ ನೀತಿ |

ಎಂದು ಹೇಳಿಕೊಂಡು ನೀನಲ್ಲದೆ ಇನ್ನಾರಿಗೆ ಮೊರೆಯಿಡಲಿ ಎನ್ನುತ್ತಾರೆ.

ಬಾರೆಂದು ಹತ್ತಿರಕೆ ಕರೆವವರಿಲ್ಲ |
ಆರಯ್ಯ ಎನ್ನ ಸೋದರರೆಂದು ಹೋದರೆ |
ದೂರದಲೆ ನಿಂತು ನೋಡುವರು ಶ್ರೀಹರಿಯೆ ||
ರಸದಾಳೆ ಕಬ್ಬೆಂದು ಮೆಲ್ಲಲಿಕೆ ಹೋದರೆ | ವಿಷವಾಗಿ
ತೋರುತಿದೆ ಬಾಯ್ಗೆ | ಅಥವಾ, ಮನೆಯ ಮುಂದಿನ ಬಾಳೆ
ಎನಗಾಗದೆ ಹೋಯ್ತು | ಏನ ಹೇಳಲಿ........ ಎನ್ನ ವಿಧಿಯ–

ಇಂಥ ಸ್ಥಿತಿಯಲ್ಲಿ ಭಕ್ತ ಹರಿಯನ್ನು ನೆನೆಯುತ್ತಾನೆ. ಬೇರೆ ಮಿಕ್ಕೆಲ್ಲ ಅವನಿಗೆ. ನಿನ್ನ ನಾ ಮರೆ ಹೊಕ್ಕೆ–

ಕಾಯಬೇಕೆಂದರೆ | ಎನ್ನ ನಡು ನೀರೊಳಗೆ ಕೈ ಬಿಡುವೆಯಾ ಹರಿಯೆ |
ಮರದ ನೆರಳೆಂದು ನಾ ಮರದಡಿಗೆ ಹೋದರೆ
ಉರಿಯಿಂದ ಧಗೆ ಬಹಳವಾದುದು ||
ಹರಿವ ಜಲವೆಂದು ನಾ ಬಾಯಾರಿ ಹೋದರೆ
ಕೆರೆಬಾವಿ ಬತ್ತಿ ಒಣಗಿದವು ಹರಿಯೆ
ಕೊಡಲು ಧನವಿಲ್ಲವೊ, ನುಡಿವುದಕೆ ಉಸಿರಿಲ್ಲ |
ಕಡು ದೈನ್ಯದಲ್ಲಿ ಎನ್ನ ದನಿಗುಂದಿತು |
ಒಡವರಾಧಾರಿ ಸಿರಿಪುರಂದರವಿಠಲನೆ
ಬಿಡಲಾರೆ ನಿನ್ನ ಪಾದವನು ಶ್ರೀಹರಿಯೆ ||

ಇಂಥ ಸಂದರ್ಭಗಳಲ್ಲಿ ಭಕ್ತನ ಮನಸ್ಸು ಎಷ್ಟು ಆರ್ತವಾಗಿ ಬೇರೆದಿಕ್ಕು ಆಸರೆ ಕಾಣದೆ ದೇವರನ್ನು ಬೇಡಿಕೊಳ್ಳುತ್ತದೆ. ನೆಚ್ಚಿದ್ದೆಲ್ಲ ನೆರವಾಗದಾಯಿತು. ಇದು ತಾನು ಪಾಪಿಯಾಗಿರುವುದರ ಪರಿಣಾಮವಾಗಿರಬೇಕು. ಆದುದರಿಂದ ಮೊರೆ ತನ್ನ ದೈವಕ್ಕಲ್ಲದೆ ಬೇರೆ ಇನ್ನಾರಿಗಿಟ್ಟರಾದೀತು ಎಂಬ ಭಾವ ಇಲ್ಲಿನ ಹೋಲಿಕೆಗಳಲ್ಲೆಲ್ಲ ರೂಢವಾಗುತ್ತದೆ. ಇವು ಉಪಮೆಗಳಲ್ಲಿ, ಅಲಂಕಾರಗಳಲ್ಲಿ ಹೊರಗಿನಿಂದ ಯಾವುದೋ ಅರ್ಥವನ್ನು ಬೆಳಗಬೇಕೆಂದು ಹೊತ್ತು ತಂದವಲ್ಲ. ಅವೇ ನುಡಿಯುತ್ತವೆ ಸ್ಥಿತಿಯನ್ನು. ಕಂಗೆಟ್ಟ ಜೀವದ ಸ್ಥಿತಿಯನ್ನು ಈ ಮಾತುಗಳು ಅಷ್ಟು ಆಪ್ತವಾಗಿ ನುಡಿಯುತ್ತವೆ. ಆದುದರಿಂದಲೇ ನನ್ನ ಹೃದಯದಲ್ಲಾಗಲಿ, ಭಾವದಲ್ಲಾಗಲಿ, ಎಲ್ಲಿ ಅನುಮಾನ ಪಡುವೆ ಹರಿಯೆ ? ಬರಿದೆ ಸುಕೃತ ದುಷ್ಕೃತ

ಎಣಿಸುತ್ತ ನೋಡುತಿಹರೆ ಎನ್ನುತ್ತಾರೆ. ನನ್ನ ಅವಗುಣಗಳನ್ನು ಎಣಿಸುತ್ತ ಕುಳಿತರೆ ಅಡಿಯೆಲ್ಲಿ | ನಿನ್ನ ಘನತೆಯ ನೋಡಿ ಪಾಲಿಸು | ಎನಗನ್ಯಥಾ ಗತಿಯಿಲ್ಲ ಅನಾಥನಾದೆ. ನೀನು ಅನಾಥ ಬಂಧು ಎಂಬ ಮಾತುಗಳು ಸಾರ್ಥಕವಾಗುತ್ತವೆ. ಭಕ್ತನ ತೊಳಲಾಟ, ಕಳವಳ ಜೀವದ ಆಳವನ್ನು ಹೊರಹೊಮ್ಮಿ ಇಂಥ ಪದಗಳಲ್ಲಿ ಸ್ಥಿತಿಯನ್ನು ನಿವೇದನ ಮಾಡುತ್ತವೆ.

ವಿಶ್ವಾಸದಲ್ಲಿ ಹೀಗೆ ಶರಣಾಗತನಾಗುವುದು ಭಕ್ತಿತತ್ವದ ಮೇಲೆ ನಿಂತ ಎಲ್ಲ ಮತಗಳ ಒಂದು ಸಾರ ಭಾಗ. ಮನಸ್ಸು ಆ ಬಗೆಗೆ ಬಹು ಮೃದುವಾಗುತ್ತದೆ. ನಂಬುತ್ತವೆ. ನೆಚ್ಚುತ್ತದೆ. ಆದುದರಿಂದ ಅಂಥ ದಾಸರನ್ನು ದುಃಸ್ಥಿತಿಗೆ ಈಡುಮಾಡುವುದಾಗಲಿ ಅವರನ್ನು ಮರಿಯುವುದಾಗಲಿ ಅವರ ಭರವಸೆ ಹೋಗುವಂತೆ ಭ್ರಾಂತಿ ಮೆರಸುವುದಾಗಲಿ ದೇವರಲ್ಲಿ ಕ್ರೌರ್ಯವಾಗುತ್ತದೆ.

ಇದೇ ಬಗೆಯ ಅತಿಗೆ ಒಯ್ದು ಪರೀಕ್ಷೆ ಮಾಡುವುದು ಹರಿಶ್ಚಂದ್ರನ ಕಥೆಯಲ್ಲಿಯೂ ಕಾಣುತ್ತದೆ. ಅವನಿಗೆ ಬಂದ ಕಷ್ಟ ವಿಧಿಕ್ರೂರವಾಗಿ ಮಾಡಿದ ಪರೀಕ್ಷೆಯಿಂದ ಉಂಟಾದುದು. ನನ್ನ ಭಕ್ತರ ಯೋಗಕ್ಷೇಮವನ್ನು ನಾನು ವಹಿಸಿಕೊಳ್ಳುತ್ತೇನೆ. "ಯೋಗಕ್ಷೇಮಂ ವಹಾಮ್ಯಹಂ" ಎಂದು ಗೀತೆಯಲ್ಲಿ ಹೇಳಿದಾತನೆ ಬೇರೆ ಇನ್ನೊಂದು ಕಡೆ ಅವರ ಭಕ್ತಿಯ ನಿಜವನ್ನು ಪರೀಕ್ಷಿಸುವುದಕ್ಕಾಗಿ "ತಸ್ಯ ವಿತ್ತಂ ಹರಾಮ್ಯಹಂ" ಎಂಬ ಕಹಿ ಮಿತಿಗೆ ಬೇರಲ್ಲಿ ಹೋಗುತ್ತವೆ. ಕ್ರೈಸ್ತ ಪಂಥದಲ್ಲಿ ಜೋಬ್‌ಗೆ ಬಂದ ಕಷ್ಟ ಹಾಗೆ; ಅಬ್ರಹಾಂನ ಪರೀಕ್ಷೆಯೂ, ಹೀಗೆಯೆ ಆಯಿತು. ಅಲ್ಲಿನವರೆಗೂ ಕರೆದುಕೊಂಡು ಹೋಗಿ ಮನಸ್ಸಿನ ದೃಢ ನಿಶ್ಚಯಗಳನ್ನು ಕಂಡುಕೊಳ್ಳುವುದು ತಾಳ್ಮೆಯ ಮಿತಿಯನ್ನು ಮೀರಬಲ್ಲದು. ಆದರೆ ಇಷ್ಟು ನಿಚ್ಚಳವಾಗಿಲ್ಲದಿದ್ದರೆ, ಅದರ ಬೆಲೆ, ಶುದ್ಧಿ ಎಂಥದೆಂಬುದು ನಿರ್ಣಯಿಸುವುದು ಆ ಕಡೆಯಿಂದ ಕಷ್ಟವಾದೀತು. ದೇವರಕಡೆಯಿಂದ ಸತ್ಯಪರೀಕ್ಷೆ ಹೀಗಾಗುತ್ತದೆ ಎಂಬುದರ ಕಠಿಣತೆ ಹೇಗೇ ಕಾಣಲಿ, ಇತ್ತ ಭಕ್ತನಾದ ಮನುಷ್ಯನಿಗೆ ತನ್ನ ನಿಲವು ನಿಷ್ಠೆಗಳನ್ನು ರೂಪಿಸಿಕೊಳ್ಳುವುದಕ್ಕೆ ಸ್ಥಾಪಿಸಿಕೊಳ್ಳುವುದಕ್ಕೆ, ತನ್ನನ್ನು ತಾನು ಶುದ್ಧಿಮಾಡಿಕೊಳ್ಳುವುದಕ್ಕೆ ದೊಡ್ಡ

ಅವಕಾಶ ಮಾಡಿಕೊಡುತ್ತದೆ. ತಾನು ಯಾವುದನ್ನು ಶ್ರೇಷ್ಠ ಎಂದು ಕೊಂಡಿದ್ದಾನೊ ಅದಕ್ಕಾಗಿ ತನ್ನನ್ನು ತಾನು ಎಲ್ಲವನ್ನು ಬೇರೆ ಯೋಚನೆ ಯಿಲ್ಲದೆ ಅರ್ಪಿಸಿಕೊಳ್ಳಲಾಗುತ್ತದೆ. ಈ ಅರ್ಥದಲ್ಲಿ ವ್ಯಕ್ತಿಯ ಸಿದ್ಧಿ ಎಂದರೆ ಇವನನ್ನು ಉದ್ಧಾರ ಮಾಡುವ ಕೃಪೆ ದೊರಕಿತು ಎಂಬ ಅರ್ಥ ವಿಶದಗೊಳ್ಳುತ್ತದೆ.

# 3. ಪೂಜೆ - ಆರಾಧನೆ

ಹರಿಪೂಜೆ ಅಥವಾ ಹರಿಯ ಆರಾಧನೆಯನ್ನು ಅನೇಕ ಪ್ರಕಾರಗಳಲ್ಲಿ ನಡೆಸುವ ಹರಿದಾಸರು ದ್ವೈತ ವೈಷ್ಣವ ಪಂಥದ ಪರಂಪರಾಗತ ಪಂಥಕ್ಕೆ ಸೇರಿದವರು. ಆದುದರಿಂದ ಆ ಪಂಥದ ವರ್ಣರಂಜನೆ ಮಾತಿಗೆ ಆಚಾರಕ್ಕೆ, ತತ್ವಸಿದ್ಧಾಂತಗಳಿಗೆ, ಕ್ರಿಯಾವಿಧಾನಗಳಿಗೆ ಅಲ್ಲಿನ ಆಚಾರ್ಯರ ಮತ್ತು ಸಂತವೃಂದದ ಸಂಬಂಧಗಳಿಗೆ ಬೆಲೆ ಕೊಡುತ್ತದೆ. ವಿಷ್ಣುವಿನ ತರುವಾಯ ಹನುಮ, ಭೀಮ, ಮಧ್ವಾಚಾರ್ಯ ಇವರು ಗುರುಗಳಾಗುತ್ತಾರೆ. ಸೇವೆ ಅವರಿಗೆ ಸಲ್ಲಿಸುವುದು ಅವಶ್ಯಕ ಲಕ್ಷಣ. ಆದುದರಿಂದ ಒಂದು ಸಂಸ್ಥೆಯ ರೂಪವನ್ನು ತಾಳಿ ಅದನ್ನು ಘನಗೊಳಿಸುತ್ತದೆ. ಒಂದು ಕಡೆ ಭಗವಂತನ ಭಕ್ತನನ್ನು ವಿಶಿಷ್ಟವಾದ ಒಂದು ದಾರಿಗೆ ಸಂಕೋಚಗೊಳಿಸಿ ಮಿತಿಗೊಳಿಸುತ್ತದೆ. ಆದರೂ ಆ ವಿಶ್ವಾಸವನ್ನು ಅಭಿನ್ನ ಮಾಡಿ ತಾವು ಪ್ರತ್ಯೇಕವಾದ ಒಂದು ಗುಂಪಿನವರು ಎಂಬ ಏಕತ್ವವನ್ನೂ ಒಂದು ಸಂಘಟನೆಯನ್ನೂ ಉಂಟುಮಾಡುತ್ತದೆ. ಇಲ್ಲಿ ಪರಸ್ಪರ ವಿರೋಧಕವಾದ ಎರಡಂಶಗಳುಂಟು. 'ನಿಜ' ಆದರೆ ವಾಸ್ತವವಾದ ಒಂದು ಸ್ಥಿತಿ ಒಂದು ಹಾಡು ಹೀಗೆ ಆರಂಭವಾಗುತ್ತದೆ. ಶ್ರೀಮಧ್ವರಾಯರ ಸೇವೆ ದೊರಕುವುದು | ಜನುಮ ಸಫಲ ಕಾಣಿರೊ | ಎಂಬುದು ಆ ಮತ ಪಂಥದ ಮುಖ್ಯ ತತ್ವಗಳನ್ನೆಲ್ಲ ಪಟ್ಟಿ ಮಾಡಿದಂತೆ ತಿಳಿಸುತ್ತದೆ. ಅದರ ಪ್ರಕಾರವಾಗಿ ಯಾವುದೆಲ್ಲ ಸಂತವರ್ಗವೊ, ಶ್ರೀಮದಾನಂದತೀರ್ಥರ ಪಾದವನ್ನು ನೆನೆವವರು | ಸಾಮಾನ್ಯ ಸುರರು ಕಾಣಿರೊ–ಬೊಮ್ಮನ ಆಣೆ | ಇವರು ಜಗ ಸತ್ಯ ಬ್ರಹ್ಮ ಸಗುಣ ಎಂದು ಹೇಳಿದವರು. ಪದವಿಯಲ್ಲಿ, ಯಾರು ಮೊದಲು ಯಾರು ಆಮೇಲೆ ಎಂದು ಹೇಳಿದಮೇಲೆ, ತಾರತಮ್ಯ, ತಪಧ್ಯಾನಾರ್ಚನೆಯಿಂದ | ಅಪವರ್ಗದ ಸೇವೆಯ ಮಾಡಿರೊ ಎಂಬುದು, ಶ್ರೀಮಧ್ವರು ಉಪದೇಶಿಸಿದ ತತ್ವ. ಒಂದು ಪಂಥದವರು ಜಡಜೀವ ಬೇರೆಯಲ್ಲ ಪರಬ್ರಹ್ಮ ಅಗುಣ ಎಂದು ಹೇಳಿದ್ದ ಜನರನ್ನು ಆಚಾರ್ಯರು ನಿಗಮಶಾಸ್ತ್ರದಲ್ಲಿ ಗೆದ್ದರೆಂದು ಹೇಳುತ್ತಾರೆ. ಹರಿ

ಸರ್ವೋತ್ತಮನು, ನಿತ್ಯ. ಅವನ ತರುವಾಯ ರಮಾದೇವಿ, ತರುವಾಯ ವಿಧಿಪ್ರಾಣ ಎಂದು ಹೇಳಿ, ಆರು ದೇವಿಯರ ಹೆಸರನ್ನು ಹೇಗೆ ಸಮರೆಂದು ಹೇಳುತ್ತಾರೆ.*

ಜಗವು ಸತ್ಯವು ಅಲ್ಲ–ಜಡ ಜೀವ, ಭೇದದಲ್ಲಿ
ಅಗುಣನು ಪರಬೊಮ್ಮನು–

ಹೀಗೆ ನುಡಿದ ಜನರನ್ನು ನಿಗಮ ಶಾಸ್ತ್ರದಿ ಗೆದ್ದು | ಜಗ ಸತ್ಯ ಸಗುಣ ಬ್ರಹ್ಮ ಎಂದು ಪೇಳುವ | ಮಧ್ವರಾಯರ ಸೇವೆ ದೊರಕುವುದು | ಜನರು ಸಫಲ ಕಾಣಿರೊ | ಇತ್ಯಾದಿ.

ಹರಿಯ ರಾಮಾವತಾರದಲ್ಲಿ ಮಧ್ವರ ಪೂರ್ವಜರು ಮಹಾತ್ಮನಾದ ಹನುಮಾನ್. 'ಕೂಸನು ಕಂಡಿರಾ' ಎಂಬ ಹಾಡಿನಲ್ಲಿ ಆಂಜನೇಯ, ಭೀಮ, ಮಧ್ವ–ಈ ಪರಿವಿಡಿಯನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಮುಖ್ಯ ಪ್ರಾಣನಾದ ಮಧ್ವರಾಯ 'ಮುದ್ದು ಶ್ರೀ ಪುರಂದರ ವಿಠಲನ ದಯೆಯಿಂದ ಉಡುಪಿಯಲ್ಲಿ ಬಂದು ನಿಂತಿತು ಕೂಸು' ಎನ್ನುತ್ತಾರೆ. ಸಂಜೀವರಾಯ ರನ್ನು ನೆನೆಸಿಕೊಂಡರೆ ಸಜ್ಜನರಿಗೆ ಏನು ಭಯವಿದ್ದೀತು? ಪಲ್ಲವಿಯಲ್ಲಿಯೇ ಅಭಿಪ್ರಾಯವನ್ನು ಸ್ಥಾಪಿಸುತ್ತಾರೆ.

ಗೀತೆಯನ್ನು ಆರಂಭಮಾಡಲು ಅದರರ್ಥವನ್ನು ಸ್ಥಾಪಿಸುವುದು ದಾಸರ ಇನ್ನೊಂದು ಮಾರ್ಗ. ಪಲ್ಲವಿಯ ಮೊದಲ ನುಡಿಯನ್ನು ಮೊದಲ ಭಾಗದಲ್ಲಿ ಹೇಳಿ ಅದಕ್ಕೊಂದೊ ಎರಡೊ ಸೊಲ್ಲು ಸೇರಿಸಿ ಪುನಃ

---

* ದಾಸರ ಪ್ರತಿಯೊಂದು ಪದ್ಯದಲ್ಲಿಯೂ ಚರಣದ ಅರ್ಥ, ಬಹು ಚೆನ್ನಾಗಿ, ಸಹಜವಾಗಿ ಪಲ್ಲವಿಯ ಮಾತುಗಳಿಗೆ ಹೊಂದಿಕೊಳ್ಳುತ್ತವೆ. ಕೆಲವೇಳೆ ಒಂದು ಚರಣದ ಅರ್ಥ ಮುಂದಿನದಕ್ಕೂ ಹೋಗಿ ಅವೆರಡೂ ಕೂಡಿ ಒಂದು ಕೊಂಡಿಯಂತೆ ಆಗುತ್ತದೆ. ಅಂಥ ಸಂದರ್ಭದಲ್ಲಿ ಪ್ರತಿ ಚರಣದ ಕೊನೆಯಲ್ಲಿಯೂ ಹಾಡುಗಾರರು ಪಲ್ಲವಿಯನ್ನು ಸೇರಿಸುವುದರಿಂದ ಅರ್ಥಕ್ಕೆ ಅರ್ಥಪ್ರವಾಹ ಮುರಿದು ತಡೆಗೊಳ್ಳುತ್ತವೆ. ಚರಣಗಳಲ್ಲಿರುವ ಅರ್ಥಸಂಬಂಧವನ್ನು ಕೆಡಿಸಿ ವಿಚಿತ್ರ ಮಾಡುತ್ತದೆ. (ಎಷ್ಟು ಸಹಜವಾಗಿ ಈ ಪರಿ ತಾರತಮ್ಯ ಧ್ಯಾನಾರ್ಜನೆಯಿಂದ ಅಪವರ್ಗ ದಾನದ ಸೇವೆಯ ಮಾಡಿರೊ ಎಂಬ ಶ್ರೀಮಧ್ವರಾಯರ ಸೇವೆ–ಎಂಬ ಪಲ್ಲವಿ ಸರಳವಾಗಿ ಹೊಂದುತ್ತವೆ ಎಂಬುದನ್ನು ಕಾಣಬಹುದು.)

ಆ ಮೊದಲ ನುಡಿಯನ್ನು ಹೇಳಿ ಆ ತತ್ತ್ವವನ್ನೇ ಸ್ಥಾಪಿಸುತ್ತಾರೆ. 'ಅಂಜಿಕಿನ್ಯಾತಕಯ್ಯಾ—ಸಜ್ಜನರಿಗೆ—ಅಂಜಿಕಿನ್ಯಾತಕಯ್ಯಾ | ಈ ಹಾಡಿನ ಮೇಲೆ ಮುಂದಿನ ಕಾಲದಲ್ಲಿ ಹುಟ್ಟಿ ಈ ಕೀರ್ತನೆಗಳನ್ನು ಮಾಡಿದ ತ್ಯಾಗರಾಜರು ಕಲ್ಯಾಣಿಯಲ್ಲಿ ತಮ್ಮ ಒಂದು ಕೀರ್ತನೆಯನ್ನು ರೂಪಿಸಿದ್ದಾರೆ.* ಇನ್ನೂ ಈಚಿನ ಕಾಲದಲ್ಲಿ ಇತರರೂ (ಉದಾ: ಡಿ. ವಿ. ಜಿ) ಇದನ್ನು ಮಾಡಿದ್ದಾರೆ. ಪದ, ಕೀರ್ತನೆ ಸಂಪ್ರದಾಯದ ಸಾರಭೂತವಾದ ಒಂದು ಜೀವಶಕ್ತಿ ಯಾವುದೊ ಅರ್ಥವನ್ನು ಸಂಗೀತದ ಯಾವುದೊ ಪ್ರಕಾರವನ್ನು ರಚನೆ ಮಾಡಿ ಉಳಿಸುತ್ತದೆ. ಬಹು ಚೆಲುವಾದ ಜನಪ್ರೀತಿಯಲ್ಲಿಯೂ ಹೆಚ್ಚು ಪ್ರಖ್ಯಾತವಾದ ಒಂದು ಪದ್ಯ. ಮಧ್ಯಮಾವತಿಯೇ ಹೆಚ್ಚಾಗಿ ಶ್ರೀರಾಗದಲ್ಲಿ ಹಾಡುವ "ಭಾಗ್ಯದ ಲಕ್ಷ್ಮೀ ಬಾರಮ್ಮ" ಎಂಬುದು. ಅಲ್ಲಿ ಕೂಡ ಹೀಗೇ. ಹಿಂದಿನ ಹಾಡಿನಲ್ಲಿ ಸಜ್ಜನರಿಗೆ ಎಂಬುದು ಹೆಚ್ಚಿನ ಸೊಲ್ಲು ಹೇಗಾಯಿತೊ, ಇಲ್ಲಿ ನಮ್ಮಮ್ಮಾ ನೀ, ಎಂಬುದು ಅರ್ಥವನ್ನು ಹೊಸದಾಗಿ ಹೊಂದಿಸುವುದರ ಜೊತೆಗೆ 'ಸೌ' ಎಂಬ ಉಪಸರ್ಗವನ್ನು ಸೇರಿಸಿ 'ಭಾಗ್ಯದ' ಎಂಬ ಮಾತಿನ ಅರ್ಥವಂತಿಕೆಯನ್ನು ಹೆಚ್ಚಿಸುತ್ತದೆ. ಹರಿಗೆ ಎರಡನೆಯ ಪದವಿಯವಳು ಲಕ್ಷ್ಮಿ. ಆಕೆಯನ್ನೇ ಬರಮಾಡಿಕೊಳ್ಳಬಲ್ಲ ಪದ್ಯದ ಸರಸ ಸೌಂದರ್ಯ ಬಹಳ ಹಿತವಾದುದು. ಆಕೆ ವಿಷ್ಣುವಿಗೆ ಮಾತ್ರ ಅಧೀನ, ಎರಡನೆಯವಳು ಲೋಕದ ಇನ್ನೆಲ್ಲರಿಗಿಂತಲೂ ಮೇಲಿನವಳು."

ಹೆಜ್ಜೆಯ ಮೇಲೆ ಹೆಜ್ಜೆಯನಿಕ್ಕುತ<br>
ಗೆಜ್ಜೆಯ ಕಾಲಿನ ದನಿಯನು ಮಾಡುತ<br>
ಸಜ್ಜನ ಸಾಧು ಪೂಜೆಯ ವೇಳೆಗೆ<br>
ಮಜ್ಜಿಗೆಯೊಳಗಿನ ಬೆಣ್ಣೆಯಂತೆ........†

---

* ತ್ಯಾಗರಾಜರಿಗೂ ದಾಸರಿಗೂ ಇರುವ ಸಂಬಂಧವನ್ನು ಇನ್ನು ಅನೇಕ ಕೃತಿಗಳು ವಿವರ ವಿವರಗಳಲ್ಲಿ ಸಾದೃಶ್ಯವನ್ನು ತೋರಿಸುತ್ತವೆ. (Compare Vasudevacharya)

† ಮೊದಲು ಸಮುದ್ರದ ಮಂಥನ ಮಾಡಿದಾಗ ಲಕ್ಷ್ಮಿ ಹೇಗೆ ಹುಟ್ಟಿ ಎದ್ದು ಬಂದಳು ಎಂಬ ಚಿತ್ರವನ್ನು ಕೂಡ ನಮ್ಮ ನೆನಪಿಗೆ ಇದು ತಂದುಕೊಡಬಲ್ಲದು.

*

ಎಂಬುದನ್ನು ಹೇಳಿದಾಗ, ಅದನ್ನು ಕೇಳಿದಾಗ ಪ್ರತಿಯೊಂದು ಹಿಂದೂ ಮನೆಯೂ ಪ್ರೀತಿಯ ಪ್ರತಿಕ್ರಿಯೆ ತೋರಿಸುತ್ತದೆ.

ಕೃಷ್ಣ ಅಥವಾ ರಂಗನನ್ನು ಹೇಗೆ ಪ್ರಾರ್ಥಿಸಿ ಕರೆಯುತ್ತಾರೆ. ಆಗ ಭಾವ ಎಂಥದು. ಅದು ಧ್ಯಾನಮೂರ್ತಿಯಾದಾಗ ಎಂಬ ಸಂಗತಿ ನೂರು ರೂಪಗಳನ್ನು ತಾಳುತ್ತದೆ. ಹೆಚ್ಚಿನವುಗಳಲ್ಲಿ ಭಾಗವತದಲ್ಲಿ ವರ್ಣಿತವಾದ ಕಿರಿಯ ಕೃಷ್ಣನ ರೂಪವನ್ನು ತಾಳುತ್ತದೆ.

ಓಡಿಬಾರಯ್ಯ ವೈಕುಂಠಪತಿಯೆ |
ಯಾದವ ನೀ ಬಾ | ಯದುಕುಲ ನೀ ಬಾ |
ರಂಗ ಬಾರೊ, ಲಕ್ಷ್ಮೀಕಾಂತ ಬಾರೋ |
ಬಾರಯ್ಯ ವೆಂಕಟರಮಣನೆ |
ಕೃಷ್ಣಮೂರ್ತಿ ಕಣ್ಣಮುಂದೆ ಬಂದು ನಿಂತಿದ್ದಂತಿದೆ |
ಕಂಡೆನಾ ಕನಸಿನಲಿ, ಗೋವಿಂದನ |
ದೇವ ಬಂದ, ನಮ್ಮ ಸ್ವಾಮಿ ಬಂದನೊ |
ಇಂದಿರೆಯರಸ ವೆಂಕಟ ಬಂದ ಮನೆಗೆ |
ಗರುಡ ಗಮನ ಬಂದನೊ !
ಕಣ್ಣಾರ ಕಂಡೆ ನಾ ಅಚ್ಯುತನ !

ಇಂಥವು ಲೆಕ್ಕವಿಲ್ಲದಷ್ಟಿವೆ:—ಆಗಾಗ, ಆ ದೇವರ ಒಂದು ರೂಪವನ್ನು ಕುರಿತು ಆಟವಾಡುತ್ತ ಅವನನ್ನು ಕುರಿತು ದಾಸರು ತಮಾಷೆ ಮಾಡುವುದುಂಟು. 'ದಣಿಯೆ ನೋಡಿದನು ವೈಕುಂಠನ' ಎಂಬಲ್ಲಿ, ತಿರುಪತಿಯ ಆ ದೇವರನ್ನು ಬೆಂದ ಕೆಂಪಕ್ಕಿ ಅನ್ನವ ತಿನ್ನುವವನು, ಬಡ್ಡಿ ಸಲ್ಲಬೇಕಾದ ಒಂದು ಗುಡ್ಡಿ ಕಾಸು ಕಡಮೆಯಾದರೂ ಭಕ್ತರನ್ನು ಕ್ಷಮಿಸದೆ, ಅವರಿಂದ ಹಣವನ್ನು ಸಂಪಾದಿಸುತ್ತಾನೆ ಎಂದು ಹೇಳುತ್ತಾರೆ. ವಡೆ, ದೋಸೆಗಳನ್ನು ಅನ್ನವನ್ನು ಮಾರುವವನು, ಆದರೂ ತನ್ನ ಸೇವಕರ ಜೊತೆಯಲ್ಲಿ ಸಂತೋಷದಲ್ಲಿ ಕುಣಿದಾಡುವಂಥವನು ಎಂಬುದು ವರ್ಣನೆ. ಇಂಥ ಸಂಗತಿ ಪುರಂದರದಾಸರ ರಚನೆಯನ್ನು ಅತೀವ ಮಾನವವಾಗಿಯೂ, ಅಕ್ಷರವರಿಯದವರಿಗೂ ಪ್ರಿಯವಾಗಿ ಮಾಡುತ್ತದೆ. ಅವರ ಹಾಡುಗಳ ಸಹಜತೆ ಬಹು ಸಂಖ್ಯೆಯ ಅವುಗಳ ನೇರ ಹೊಮ್ಮುಗೆಯ ಲಕ್ಷಣ–ತನ್ನ

ದೇವರಿಗೆ ಕೆಲವು ವೇಳೆ ತಕ್ಕುದಕ್ಕಿಂತ ಮೀರಿ ಬೇಡಿಕೆಗಳನ್ನು ಹಾಕುವುದುಂಟು. ಅದು ಹಾಡನ್ನು, ಅದರ ನಿಲವನ್ನು ಚಿತ್ತಾಕರ್ಷಕ ಮಾಡುತ್ತದೆ. ನಾದನಾಮಕ್ರಿಯೆಯಲ್ಲಿ 'ನಾ ನಿನಗೇನು (ನಿನ್ನನ್ನೇನು) ಬೇಡುವುದಿಲ್ಲ–ಎನ್ನ | ಹೃದಯಕಮಲದೊಳು ನೆಲಸಿರು ಹರಿಯೆ' ಎಂಬ ಕೃತಿ ಬೇರೆ ಇನ್ನೇನನ್ನು ಕೇಳುವುದಿಲ್ಲ ಎಂದು ಹೇಳುತ್ತದೆ. ನಿನ್ನ ಪಾದದಲ್ಲಿ ನನ್ನ ಶಿರ ಬಾಗಲಿ, ನಿನ್ನ ಆತ್ಮೀಯತೆಯನ್ನು ನಾನು ಪ್ರೀತಿಯಿಂದ ನೋಡುವಂತಾಗಲಿ, ನೀನು ಧರಿಸಿದ ಒಣ ಹೂವುಗಳ ಪರಿಮಳವನು ನನ್ನ ನಾಸಿಕ, ಕಾಣುವುದಾಗಲಿ; ನಿನ್ನ ಗುಣಗಾನವನ್ನು ನನ್ನ ನಾಲಗೆ ನುಡಿಯಲಿ; ಕಿವಿಗಳು ಕೇಳಲಿ ನನ್ನ ತೋಳು ನಿನ್ನನ್ನು ಅಪ್ಪಿಕೊಳ್ಳಲಿ, ನನ್ನ ಅಡಿಗಳು ಪುಣ್ಯಕ್ಷೇತ್ರಗಳಿಗೆ ಪಯಣಹೋಗಲಿ ಮನಸ್ಸು ಪ್ರೀತಿಯಿಂದ ಎಂದಿಗೂ ನಿನ್ನನ್ನು ನೆನೆಯುತಿರಲಿ. ನಿನ್ನಲ್ಲಿ ನನ್ನ ಇಂದ್ರಿಯಗಳು ಮುಳುಗಿಹೋಗಲಿ ನಿನ್ನ ಭಕ್ತರ ಸಹವಾಸ ನನಗೆ ದೊರೆಯಲಿ– ಇತ್ಯಾದಿ. ತನ್ನ ದೇವರಿಗೆ ದಾಸನಾಗಿ, ತನಗೇನು ಬೇಕೆಂಬುದು ಅವನಿಗೆ ಗೊತ್ತು. ಒಡೆಯನ ಪಾದವನ್ನು ಬಿಗಿಯಾಗಿ ಹಿಡಿದಿರುವ ತನ್ನ ಪದವಿಯಿಂದ ಕದಲಿ ಬೇರೆ ಹೋಗಲು ಅವನು ಇಷ್ಟಪಡುವುದಿಲ್ಲ. 'ಸ್ವೀಕರಿಸು' ಎಂದು ನಿವೇದಿಸಿಕೊಳ್ಳುವ ವಿಶಿಷ್ಟ ಭಾರತೀಯ ಮಾರ್ಗ– 'ಬಿಡೆ ನಿನ್ನ ಪಾದವ' ಎಂಬ ಮಾತುಗಳಲ್ಲಿ ಅಡಗುತ್ತದೆ. ಗೋಪೀಜನಪ್ರಿಯ ಗೋಪಾಲ ವಿಠಲಗಲ್ಲದೆ, ಈ ಪರಿಯ ಸೊಬಗು ಇನ್ನಾವ ದೇವರಲಿ ಕಾಣೆ ಎಂದು ದಾಸರು ಗೋಪಾಲನಲ್ಲಿ ಕಾಣುವ ಚೆಲುವಿನ ಸ್ತೋತ್ರದಲ್ಲಿ ಹೊಳೆದು ಕಾಣುವ ಚಿತ್ರ ಸವಿಯದು. ಇತರ ಯಾವ ದೇವರು ಹೋಲಿಕೆಯಲ್ಲಿ ಅವನಿಗೆ ಸಮನಾದಾರು? ದೊರೆತನವೆ? 'ಧರಣಿ ದೇವಿಗೆ ರಮಣ' ಸಿರಿ ನೋಡುವುದೆ? ಲಕ್ಷ್ಮೀಕಾಂತ. ಹಿರಿಯತನವನ್ನೆಣಿಸುವುದೆ? ಸೃಷ್ಟಿಕರ್ತನಾದ ಬ್ರಹ್ಮನ ತಂದೆ. ಗುರುವತನದಲಿ ನೋಡೆ ಜಗದಾದಿ ಗುರು | ಪಾವನತ್ವದಲ್ಲಿ ಅವನಷ್ಟು ಪಾವನರು ಇನ್ನಾರು? ಗಂಗೆಯ ತಂದೆ ಅವನು. ದೇವತ್ವವೆಂದರೊ–ದಿವಿಜರೊಡೆಯ, ಚೆಲುವೇ ಲೋಕಮೋಹಕನಾದ ಮನ್ಮಥನ ಅಯ್ಯ. ಶೌರ್ಯದಲ್ಲಿ, ಧೈರ್ಯದಲ್ಲಿ ಅಸುರಾಂತಕ. ಅವನ ಯಾವ ವಾಹನಗಳನ್ನು ಕುರಿತು

ಯೋಚಿಸಿದರೆ ಭೂಮಿಯ ಮೇಲೆ–ಗಾಳಿಯಲ್ಲಿ ಸಂಚಾರ ಮಾಡುವ ಗರುಡನೇ ಅವನ ತುರಗ. ಈ ವಿಶ್ವದ ಭಾರವನ್ನು ಹೊತ್ತು ನಿಂತಿರುವ ಆದಿಶೇಷನು ಅವನ ವಿಶ್ರಾಂತಿಸ್ಥಾನ. ಇತರರಾರು ಅವನನ್ನು ಹೋಲುವವರು? ಈ ಐಶ್ವರ್ಯ ಇನ್ನಾರಿಗೂ ಇಲ್ಲ ಎಂದು ದಾಸರು ಹಿಗ್ಗಿ ವರ್ಣಿಸುತ್ತಾರೆ. ಇಂಥ ಸಂಬಂಧಕ ಸಂಗತಿಗಳು ಎಲ್ಲರಿಗೂ ಗೊತ್ತಾದವು. ಈ ನಾಡಿನಲ್ಲಿ ಎಲ್ಲ ಹಿಂದೂಗಳಿಗೂ ಪ್ರಿಯವಾದವು. ಆದುದರಿಂದ ನೇರ ಅವರ ಹೃದಯಗಳನ್ನು ಮುಟ್ಟುತ್ತವೆ. ಅವರ ನಂಬಿಕೆಯನ್ನು ದೃಢಗೊಳಿಸುತ್ತವೆ. ಜನಕ್ಕೆ ವಿಶ್ವಾಸ ತಂದುಕೊಡುತ್ತವೆ.

ಆದಾಗ್ಯೂ ಈ ಎಲ್ಲ ಹಾಡುಗಳ ಮೂಲೆಯಲ್ಲೂ ಸಂಚರಿಸುವ ಭಾವ ಒಂದು. ತನ್ನ ದೇವನ ಕರುಣೆ, ನೆರವು ದೊರೆಯದಾದರೆ ಭಕ್ತನು, ನಿರ್ಬಲನು ಎಂಬುದು ಯಾವ ರೂಪದಲ್ಲಾಗಲಿ ಅವನ ನೋಟ ಕಂಡುಬಂದರೆ ದರ್ಶನದ ಲವಲೇಶ ಸಿಕ್ಕಿದ ಅವಕಾಶ ದೊರಕಿದರೆ ಆಯಿತು. ಆತನ ಸಂತೋಷಕ್ಕೆ ಪಾರವಿಲ್ಲ. ತನ್ನ ದೇವರ ಸಹಾಯ ದೊರಕಿತೆಂಬ ಯಾವ ನಿದರ್ಶನವೂ ಅಂಥುದೇ ಆನಂದವನ್ನು ತರತಕ್ಕದ್ದು. ತನ್ನ ದೇವರು ಯಾವ ಆಕಾರವನ್ನು ಧರಿಸಿ ಕಾಣಿಸಿಕೊಳ್ಳಲಿ ಅದರ ವರ್ಣನೆಯಲ್ಲಿ ಆತನು ಪುಳಕಗೊಳ್ಳುತ್ತಾನೆ. ಭಕ್ತರು ತಮ್ಮ ಆತ್ಮಗಳನ್ನು ಸಂಪೂರ್ಣವಾಗಿ ಅವನಿಗೆ ಒಪ್ಪಿಸಿಕೊಡುತ್ತಾರೆ. ದೇವರಲ್ಲಿ ತನ್ನ ನಂಬಿಕೆ ಎಷ್ಟಿದೆ ಎಂದು ಅವನಿಗೆ ತಿಳಿಯಪಡಿಸುವುದರಲ್ಲಿ ಅವರ ಪ್ರಯತ್ನ ತುಂಬ ಶ್ರದ್ಧೆಯಿಂದ ಕೂಡಿದ್ದು. 'ನಿನ್ನ ನಂಬಿದೆ, ನೀರಜನಯನ' ಎಂಬ ಪದವನ್ನು ನೋಡಬಹುದು, ನನ್ನನ್ನು ಸ್ವೀಕರಿಸಿಕೊ। ಎಂದು ಅವನನ್ನು ಕರೆದು ಕೇಳುತ್ತಾರೆ. ತಾನು ಒಪ್ಪಿತವಾಗಲು ದಾರಿಗಳಾವುವು ಉಪಾಯಗಳಾವುವು ಎಂಬುದನ್ನು ಕಂಡುಹಿಡಿಯಲು ನಿರಂತರ ಯತ್ನ ನಡೆಯುತ್ತದೆ.

> ಏನನಿತ್ತು ಮೆಚ್ಚಿಸುವೆನು?
> ಎಂತು ನಿನ್ನ ಪೂಜೆಮಾಡಿ ಮೆಚ್ಚಿಸುವೆನು!
> ಹೇಗೆ ಅರ್ಚಿಸಲಿ, ಹೇಗೆ ಮೆಚ್ಚಿಸಲಿ!

ಮುಂತಾದುವು. ಪೂಜೆಗೆ ಅತಿ ಸಾರವತ್ತಾದ, ಅಂಶಗಳು ಸಂಗತಿಗಳು

ಯಾವುವೆಂಬುದನ್ನು ಪರಿಶೀಲಿಸುತ್ತಾರೆ. ಉದಾ: ಬೇರೆ ಇನ್ನೇನನ್ನು ಅವನ ಪೂಜೆಗಾಗಿ ಸಂಗ್ರಹಿಸಿದ್ದರೂ ತುಲಸಿ ಇಲ್ಲದಿರುವ ಪೂಜೆಯನ್ನು ಹರಿ ಒಪ್ಪುವುದಿಲ್ಲ. ತಂದ ನೀರು ಎಷ್ಟು ಪವಿತ್ರವಾದುದಾಗಿರಲಿ ಹಚ್ಚಿದ ದೀಪಗಳು, ಉರಿಸಿದ ಸಾಂಬ್ರಾಣಿ, ಸುಗಂಧದ್ರವ್ಯ, ಮುಂತಾದವು ಮಧು, ಹಾಲು, ಮೊಸರು,ಎಂಥುವೇ ಆದರೂ ತುಲಸಿ ಅಗತ್ಯ. ತಾವರೆ, ಮಲ್ಲಿಗೆ, ಚಂಪಕ, ಜಾಜಿ ಹೂಗಳು ಇರಬಹುದು; ಕೇತಕಿ ಇರಬಹುದು. ಗಂಟೆಗಳನ್ನೂ ಬಾರಿಸಬಹುದು. ಸಂಗೀತದ ಇಂಪಾದ ಧ್ವನಿ ಇರಬಹುದು. ನೈವೇದ್ಯಕ್ಕೆ ಅರ್ಪಿಸಿದ, ಬಗೆ ಬಗೆಯ ಸುಪಕ್ವವಾದ ಭಕ್ಷ್ಯಗಳು ಒಪ್ಪ ಬಹುದು. ಮಂತ್ರಗಳನ್ನು ಎಷ್ಟೇ ಉಚ್ಚವಾಗಿ ಪಠಿಸಲಿ ಆ ಮಂತ್ರ ಪುರುಷಸೂಕ್ತವೇ ಆಗಿರಬಹುದು. ತುಲಸಿ ಇಲ್ಲದೆ ಅವು ಯಾವುದಕ್ಕೂ ಪ್ರಾಧಾನ್ಯವಿಲ್ಲ.

ಬೇರೆ ಬೇರೆ ಹಾಡುಗಳಲ್ಲಿ ಒಂದೊಂದು ಬಗೆಯ ಪೂಜೆ ಅರ್ಚನೆಗಳನ್ನು ವರ್ಣಿಸುತ್ತ ಹಲವಾರು ವಿವರಗಳನ್ನು ಕಾಣಿಸುತ್ತಾರೆ. ದೇವರು ಸ್ವೀಕರಿಸ ಲೆಂದು ಒಂದು ಔತಣವನ್ನು ಬಡಿಸಿದ್ದಾರೆ. ಪುರಂದರದಾಸರ ಹಾಡು ಗಳಲ್ಲಿ ಹಣ್ಣು, ಭಕ್ಷ್ಯಭೋಜ್ಯ ಪಕ್ವಾನ್ನ ಓದುವವರ, ಕೇಳುವವರ ಹಸಿವನ್ನು ಉದ್ರೇಕಗೊಳಿಸುವ ಪದಾರ್ಥಗಳು, ರುಚಿಕಟ್ಟಾದುವು ಎಷ್ಟೆಷ್ಟೋ ಬರುತ್ತವೆ.

ಈ ಸಂಬಂಧದಲ್ಲಿ ಇನ್ನೊಂದು ಸಂಗತಿಯನ್ನು ತಿಳಿಸಬಹುದು. ತನ್ನಲ್ಲಿ ಭಕ್ತಿ ಇಲ್ಲದಿರುವವರ ಬರಿಯ ಹಾಡೊ ಹೊಗಳಿಕೆಯೊ ಅವನಿಗೆ ಎಂದಿಗೂ ಒಪ್ಪದು. ಹರಿ ಅಂಥ ಎಂಥದನ್ನೂ ತಾಳುವುದಿಲ್ಲ ಎನ್ನುತ್ತಾರೆ: ಕೇಳನೊ ಹರಿ, ತಾಳನೊ ತಾಳಮೇಳಗಳದ್ದು. ನೇಮವಿಲ್ಲದ ಗಾನ. ಅವನು ತುಂಬುರುನಾರದರ ಗಾನ ಕೇಳಿರುವವನು. ಸಾಮಾನ್ಯ ಮನುಷ್ಯನು ಎಷ್ಟು ಇಂಪಾಗಿ ಹಾಡಿದರೂ ಎಂಥಾ ವಾದ್ಯಗಳ ಜೊತೆಗೆ ಶ್ರುತಿಗೊಳಿಸಿ ಹಾಡಿದರೂ, ಎಷ್ಟೇ ಕಲೆಗಾರಿಕೆಯನ್ನು ಆ ಗಾನದಲ್ಲಿ ಪ್ರಕಾಶಪಡಿಸಿ ದರೂ ಅದನ್ನು ಸ್ವೀಕರಿಸುತ್ತಾನೆಂದು ಹೇಳಲಾಗುವುದಿಲ್ಲ. ಪೂಜೆಯಲ್ಲಿ ಉಪಚಾರಗಳೆಂಬವು ಉಂಟು. ಅವುಗಳ ಸಂಖ್ಯೆ ಹದಿನಾರು. ಅವನ್ನೆಲ್ಲ ವನ್ನೂ ಹೇಳಿ ವಿಸ್ತರಿಸಿ ಹಾಡುಹಾಡಿ ಸ್ತೋತ್ರ ಮಾಡಿ ಹರಿಯನ್ನು

ವಿಶ್ರಾಂತಿಗೆ ಕಳಿಸುತ್ತಾನೆ. ಜೋಗುಳದ ಹಾಡಿರುತ್ತವೆ. ಅವನಿಗೆ ನಿದ್ದೆ ಬರಿಸಲು ಬೆಳಗ್ಗೆ ಏಳುವ ಹೊತ್ತಿಗೆ ದಿನದ ಕಾರ್ಯಗಳಿಗಾಗಿ, ಉದಯ ರಾಗಗಳಿಂದ ಅವನನ್ನು ಎಚ್ಚರಿಸಿ ಏಳುವಂತೆ ಬೇಡುತ್ತಾರೆ. 'ಏಳಯ್ಯ ಏಳೀಗ ಬೆಳಗಾಯಿತು, ಉಪ್ಪವಡಿಸಯ್ಯ ಹರಿಯೆ' ಎಂಬುದು. ಬೆಳಗಿನ ಸ್ವಾಗತಗೀತೆಗಳು. ಲಾಲಿ ಲಾಲಿ ನಮ್ಮ ಹರಿಯೆ ಲಾಲಿ........ ಮಲಗಯ್ಯ ಜಲಜನಾಭ ಮಾಣಿಕ್ಯ ಮಂಟಪದೊಳು ಎಂಬವು. ಅವನನ್ನು ವಿಶ್ರಾಂತಿಗೆ ಕಳಿಸುತ್ತವೆ. ಬಹುಮನೋಹರವಾಗಿ, ಪ್ರಿಯವಾಗಿರುವ, ಇನ್ನೊಂದು ಕೃತಿ, ಪವಡಿಸು ಪರಮಾತ್ಮನೆ ಸ್ವಾಮಿ | ಭವರೋಗ ವೈದ್ಯನೆ, ಭಕ್ತರ ಪ್ರಿಯನೆ ಎಂದು ಆರಂಭವಾಗುವ ಗೀತೆ, ಇಲ್ಲಿ ಕವಿತೆಯನ್ನಲ್ಲ ನೋಡ ಬೇಕಾದುದು. ಕಲ್ಪನೆಯ ತಾಂಡವವನ್ನೂ ಅಲ್ಲ. ಭಾವದ ಸಮಯ ವನ್ನು ಸನ್ನಿವೇಶವನ್ನು ಅದು ಹೇಗೆ ಎತ್ತಿ ಪ್ರಭಾವ ಬೀರುತ್ತದೆ ಎಂಬುದು. ಅಲ್ಲಿನ ವರ್ಣರಂಜನೆ ಹಾಡಿನಲ್ಲಿ ಸೇರಿಕೊಳ್ಳುವ ಅಂಗಗಳು ಅಂಶಗಳು ಸಂಪರ್ಕಸೂಚಕಗಳು ಮನಸ್ಸಿನಮೇಲೆ ಬೀರುವ ಪ್ರಭಾವ ಯಾರ ಮನಸ್ಸನ್ನೂ ಕರಗಿಸುತ್ತದೆ. ರಮ್ಯವಾಗಿ ಹಾಡುವ ಸಂದರ್ಭದಲ್ಲಿ ಎಷ್ಟು ಹಾರ್ದಿಕವಾಗಬಲ್ಲುದು ಎಂಬುದನ್ನು ಕೇಳಿಯೇ ಅನುಭವಿಸಬೇಕು.

# 4. ಕೃಷ್ಣಲೀಲೆ ಪದ್ಯಗಳು

ಕೃಷ್ಣ, ಅವನ ಶೈಶವ, ಎಳೆಯ ಹುಡುಗನಾಗಿದ್ದಾಗ ಅವನು ಕಟ್ಟಿದ ಆಟಗಳು, ಮಾಡಿದ ಚೇಷ್ಟೆಗಳು ಇವು ವೈಷ್ಣವ ಸಾಹಿತ್ಯದಲ್ಲಿ ದಾಸರ ಮೆಚ್ಚಿಕೆಯನ್ನೂ ಪ್ರೀತಿಯನ್ನೂ ಬಲವಾಗಿ ಹಿಡಿದವು. ಈ ಲೀಲೆಗಳು ವಾತ್ಸಲ್ಯಭಾವ ಮಧುರಭಾವ ಎರಡನ್ನೂ ಕಾಣಿಸುತ್ತವೆ. ಪುರಂದರದಾಸರು ರಚಿಸಿದ ಅಂತಹ ಕೆಲವು ಗೀತಗಳನ್ನು ನಾವು ಪರಿಶೀಲಿಸಬಹುದು. ಬಲರಾಮ ಕೃಷ್ಣ ಇಬ್ಬರನ್ನು ಹೊಗಳಿಕೆಗೂ, ಪುರಸ್ಕಾರಕ್ಕೂ ಆಯ್ದುಕೊಳ್ಳುತ್ತಾರೆ. ಈ ಇಬ್ಬರ ಮೂರ್ತಿಗಳಲ್ಲಿ ಮೇಲ್ಪಟ್ಟು ಪ್ರಭಾವಗೊಳ್ಳುವ ಪುಟ್ಟ ಕೃಷ್ಣನ ತಾಯಿ ಗೋಪಿ ಯಶೋದೆ ಅದೃಷ್ಟವನ್ನು ಹೊಗಳುವುದೇ, ಹೊಗಳುವುದು. ತಾಯಿ ಮಗುವನ್ನು ಎಣಿಸಲಾಗದಷ್ಟು ರೀತಿಯಲ್ಲಿ ಆಡಿಸುತ್ತಾಳೆ. ಮಗುವನ್ನು ಎತ್ತಿಕೊಳ್ಳುತ್ತಾಳೆ–ಲಾಲಿಸುತ್ತಾಳೆ.

ಗೋಪಿಯ ಭಾಗ್ಯವಿದು |
ಆ ಪರಮಾತ್ಮನ ಅಪ್ಪಿಮುದ್ದಾಡುವುದು ||
ನಿತ್ಯನಿರ್ಮಲನಿಗೆ ನೀರನೆರೆದು ತಂದು ಎತ್ತಿ ತೊಡೆಯೊಳಿಟ್ಟು |
ಮುದ್ದಿಸುತ್ತ–ಪುತ್ರನೆಂದರಿತು, ತಕ್ಕೈಸುವಳು |
ಸತ್ಯಲೋಕವನಾಳುವ ವಿಧಿಜನಕನೊಡನೆ |
ಹಾಲು ಕಡಲುಮನೆಯಾಗಿ ಮೂಲೋಕವ |
ಪಾಲಿಸುತ್ತಿಪ್ಪನಾರಾಯಣನ | ಕಾಲಮೇಲೆ
ಮಲಗಿಸಿ ಬಟ್ಟಲತುಂಬ | ಹಾಲುಕುಡಿಸಿ ಸಂತೈಸುವಳು ||

ಅವನು ನಿತ್ಯತೃಪ್ತನು ಎಂದರಿಯದೆ ಹೊನ್ನಿನ ಹರಿವಾಣದೊಳಗೆ ಮೃಷ್ಟಾನ್ನವನ್ನು ನೀರೆಹಾಲು, ಘೃತ, ಸಕ್ಕರೆ* ಕೂಡಿಸಿ, ಕರೆಕರೆದು ಉಣಿಸಿ ತೃಪ್ತಿಪಡಿಸುವಳು. ಅಂಗಜ ಪಿತನು ಅವನು. ಮೋಹದಿಂದ

* ಇದರಿಂದ ಅವನ ಆರೋಗ್ಯ ಕೆಡುವುದಿಲ್ಲವೆಂದು ಆಕೆ ನಂಬಿದ್ದಾಳೆ. ಆರೋಗ್ಯ ಕೆಡದಷ್ಟು ಕೊಡುವ ವಿವೇಕ ಅವಳಿಗಿದೆ.

ಹೊಸ ಅಂಗಿ ತೊಡಿಸಿ ಟೊಪ್ಪಿಗೆ ಇರಿಸಿ ಬಂಗಾರದ ಅರಳೆಲೆ ಬಿಂದುಲಿಗಳನ್ನಿಟ್ಟು, ಸಿಂಗಾರ ಮಾಡಿನೋಡುವುದು. ದೃಷ್ಟಿ ತಾಗೀತು ಎಂದು ಅಂಗಾರವನಿಟ್ಟು ತಟ್ಟೆಯಲ್ಲಿ ಆರತಿಗಳ ಬೆಳಗಿ ತಟ್ಟನೆ ಉಪ್ಪು ಬೇವು ನಿವಾಳಿಸಿ ತೊಟ್ಟಿಲಲ್ಲಿಟ್ಟು ಮುದ್ದಾಡುವಳು. ನಮ್ಮಪ್ಪ ರಂಗಯ್ಯ ಅಳ ಬೇಡವೊ, ದೊಡ್ಡ ಗುಮ್ಮ ಬಂದಿದೆ ಸುಮ್ಮನಿರು ಎನುತ ಅಮ್ಮಿಯನೀಯುತ ಅಮರರನಾಳ್ದನ ರಮ್ಮಿಸಿ ರಮ್ಮಿಸಿ ಮುದ್ದಾಡುವಳು. ಎಷ್ಟೋ ಬ್ರಹ್ಮಾಂಡವನ್ನು ರೋಮದೊಳಿರಿಸಿದ ವಾಸುದೇವನನ್ನು ಬೇಡಿಕೊಳ್ಳುವಳು. ನಾಶರಹಿತನ ಆಯುಷ್ಯ ಹೆಚ್ಚಲೆಂದು ರಾಸಿ ದೈವವನು ಬೇಡಿಕೊಳ್ಳುವಳು. ಎಷ್ಟು ದೊಡ್ಡವನಿಗೆ ಎಷ್ಟು ಸ್ವಲ್ಪವನ್ನು ಇವಳು ಕೊಡುತ್ತಿದ್ದಾಳೆ ಎಂಬುದು ಮಾತುಗಳ ಮತ್ತು ವಸ್ತುಗಳ ಬಳಕೆಯಲ್ಲಿ ಕಾಣುತ್ತದೆಯೊ, ಹೊರಗಿನ ದೊಡ್ಡದು, ದೊಡ್ಡದಲ್ಲ, ಇವಳ ಪ್ರೀತಿ ಹಾಲುಗಡಲಿಗಿಂತ ಬಟ್ಟಲ ತುಂಬ ತಾನು ಕೊಡುವ ಹಾಲು ದೊಡ್ಡದೆಂಬಂತೆ ಕಾಣಿಸುತ್ತದೆ. ಆ ತಾಯೊಲವು ಎಷ್ಟು ಅಸೀಮವಾದ್ದು ಎಂಬುದರ ಮುದ್ದು ಇಲ್ಲಿ ಕಾಣುತ್ತದೆ. ವಿಷ್ಣುವಿನ ಹಲವು ಹೆಸರುಗಳನ್ನು ಪುನರಾವರ್ತಿಸಿದರೂ ಪುರಂದರವಿಠಲನನ್ನು ಕುರಿತವೇ. ಇನ್ನೊಂದು ಜನಪ್ರಿಯವಾದ ಹಾಡಿದೆ. ಈ ತಾಯಿ ಮೂರುಲೋಕದ ಒಡೆಯನೂ ಉದ್ಧಾರಕನೂ ಆದ ಈ ಮಗನನ್ನು ತನ್ನ ಮಗನೆಂದು ಹೇಗೆ ಆಡಿಸಿದಳು ಎಂಬುದು. ಜಗದೋದ್ಧಾರನ, ತನ್ನ ಮಗನೆಂದು ಬಗೆದು ನಿಗಮಗೋಚರನ ಆಡಿಸಿದಳು ಯಶೋದೆ. ಅವನು ಅಣೋರಣೀಯನು ಮಹತೋಮಹನೀಯನು. ನಿಗಮಕ್ಕೆ ಸಿಲುಕದ ಅಗಣಿತಗುಣನು. ಈ ಮಗುಗಳ ಮಾಣಿಕ್ಯನನ್ನು ತನ್ನ ಮಗನೆಂದು ಒಗೆದಾಡಿಸಿದಳು. ತಾಯ ಹೃದಯ ಈ ಎಲ್ಲಕ್ಕಿಂತ ಮೇಲಿದೆ. ಇತರ ತಾಯಂದಿರು ಹೆಂಗಸರು ಅವಳ ಬಳಿಗೆ ಬಂದು ಮಗುವನ್ನು ಕಂಡು ಮಗು ಎಷ್ಟು ಚೆನ್ನಾಗಿದ್ದಾನೆಂದು ಹೊಗಳುತ್ತಾರೆ—ಎಂಬುದು ಇನ್ನೊಂದು ಚಿತ್ರ.

"ಎಂಥ ಪುಣ್ಯವೆ ಗೋಪಿ ನಿನ್ನದು, ಎಂಥ ಭಾಗ್ಯವೆ |

ಇಂಥಾ ಮಗನ ಕಾಣೆವು |" ಎನ್ನುತ್ತಾರೆ. ತಾಯಿ ದಿನದಿನವೂ ಅವನಾಟವನ್ನು ನೋಡುತ್ತಾಳೆ, ಸಂತೋಷಪಡುತ್ತಾಳೆ. ತನ್ನ ಕೈಯಲ್ಲಿ

ಇರುವ ಅದು ಒಂದು ಹಿಗ್ಗಿನ ಮೂಲ. ಅದನ್ನು ಎತ್ತಿಕೊಳ್ಳುವ ಇತರ ತೋಳುಗಳ ಸಂತೋಷ. ಊರಮಕ್ಕಳಲ್ಲಿ ಎಲ್ಲರಿಗಿಂತ ಕೃಷ್ಣನು ಮುದ್ದುಗಾರ ಮಗುವಾಗಿರಬೇಕು. ಸಣ್ಣವರಾಗಲಿ ಮುದುಕರಾಗಲಿ ಎಲ್ಲ ಹೆಣ್ಣುಗಳೂ ಅವನನ್ನು ಹೊಗಳಿ ಮೈಮರೆಯುತ್ತಾರೆ. ಎಷ್ಟು ಧನ್ಯರು ಅವರು ಎನ್ನುತ್ತಾರೆ ದಾಸರು. ಕುಳಿತು ಕರೆವಾಗ ನಿಂತು ಕಳವೆಗಳ ಕುಟ್ಟುವಾಗ ತಳಲು ಸಾರಣೆಗಳ ಸಮ್ಮಾರ್ಜಿಸುವಾಗ | ಅಳುವ ಮಕ್ಕಳನ್ನು ತೊಟ್ಟಿಲೊಳಿಟ್ಟು ತೂಗುವಾಗ ಬೆಳಗಿನ ಜಾವದಲ್ಲಿ ಮೊಸರ ಕಡೆವಾಗಲೂ ಶ್ರೀಕಾಂತನನ್ನು ಅವರು ಪಾಡುತ್ತಾರಂತೆ. ನಡೆವಾಗ, ನುಡಿವಾಗ, ಭೋಜನಮಾಡುವಾಗ, ಉಡುವಾಗ, ಮಲ್ಲಿಗೆ ಮುಡಿವಾಗ ಉಯ್ಯಾಲೆಯಾಡುವಾಗ, ಅಡಿಗಡಿಗೆ, ತಾವು ತಾಂಬೂಲ ಮೆಲ್ಲುವಾಗ ನೆನಸಿಕೊಳ್ಳುವರು. ಅವನನ್ನು ಮನದಲ್ಲಿ ಸ್ಮರಿಸುತ್ತಿರುವರು. ಅವರ ಮನಸ್ಸಿನ ತುಂಬ ಪರಿಪೂರ್ಣನಾದ ಶ್ರೀಪುರಂದರವಿಠಲನೇ. ಇನ್ನೊಂದು ಪದ್ಯದಲ್ಲಿ, ಬಲರಾಮ ಕೃಷ್ಣ ಅಂಬೆಗಾಲಿಕ್ಕುತ ಬರುತ್ತಿದ್ದಾರೆ. ಸಿಡಿಲೇ, ಮಿಂಚೇ, ಗರ್ಜಿಸದಿರಿ ನೀವು. ಮೇಘರಾಜಾ ಮಳೆಯ ಕರೆಯದಿರು. ಭೂದೇವಿ ನವರತ್ನಗಳಿಂದ ನೆಲಕಟ್ಟಿಕೊಂಡು ಥಳಥಳಿಸು ಎಂದು ಅಂಕೆ ಮಾಡುತ್ತಾರೆ. ಕೃಷ್ಣನ ಬಾಯಲ್ಲಿ, ಹಲ್ಲು ಬಂದಿವೆಯಂತೆ–ಮಲ್ಲಿಗೆ ಮೊಗ್ಗೆಗಳಂತೆ ಇವೆಯಂತೆ. ಎಲ್ಲಿ ಬಾಯ್ತೆರೆಯೊ ಎಂದರೆ ಅಲ್ಲಿ ಬ್ರಹ್ಮಾಂಡವನ್ನು ಅವರು ಕಾಣುತ್ತಾರೆ. ಎಷ್ಟು ಬಗೆಯಲ್ಲಿ ಮಗುವನ್ನು ಆತನಾಟವನ್ನು ಹೊಗಳಿಯಾರು? ಇನ್ನಷ್ಟೇ ಬೆಳೆದ ಪ್ರತಿಯೊಬ್ಬರೂ ಅವನನ್ನು ತಮ್ಮ ಮನೆಗೆ ಕರೆಯುತ್ತಾರೆ. ತಮಗೆ ಮುತ್ತು ಕೊಡೆಂದು ಇತರ ತಾಯಿಯರು ಕರೆಯುತ್ತಾರೆ. ಶುದ್ಧವಾದ ಕರ್ಪೂರದ ಕರಡಿಗೆಯ ಬಾಯಲ್ಲಿ ಒಮ್ಮೆ ಎದ್ದು ಬಂದು ಮುದ್ದುತಂದರೆ ತಾವು ಕೃತಾರ್ಥರಾದೆವೆಂದುಕೊಳ್ಳುತ್ತಾರೆ.

ತಾಯಿಯ ಮತ್ತು ಇತರರ ತೊಡೆಗಳ ಮೇಲೆ ಕೂಡಿಸಿಕೊಂಡು ಶಿಶುಕೃಷ್ಣನನ್ನು ತೋಳಾಡಿಸುವ ಚಿತ್ರ ತುಂಬಾ ಮನೋಹರವಾದ್ದು. ನಮ್ಮ ಕಡೆ ಮಕ್ಕಳನ್ನು ಎರಡು ಪಕ್ಕಕ್ಕೂ ಹಿಂದು ಮುಂದಾಗುವಂತೆ ಆಡಿಸುತ್ತಾರೆ.

"ತೋಳು ತೋಳು ಕೃಷ್ಣ ತೋಳನ್ನಾಡೈ |
ನೀಲಮೇಘಶ್ಯಾಮಕೃಷ್ಣ ತೋಳನ್ನಾಡೈ" || ಪ ||
ಗಲಿಕೆಂದು ಅಂದುಗೆ ಉಲಿವ ಗೆಜ್ಜೆಯ ತೋಳು |
ಅಲುಗುವ ಅರಳೆಲೆ ಮಾಗಾಯಿ ಮಿನುಗಲು ತೋಳು |
ನೆಲುವು ನಿಲುಕದದೆಂದೊರಳ ತಂದಿಡುವನು ತೋಳು |
ಚೆಲುವ ಮಕ್ಕಳ ಮಾಣಿಕ್ಯವೇ ನೀ ತೋಳನ್ನಾಡೈ ||

ಹೀಗೆ ಕೃಷ್ಣನ ಬಾಲಲೀಲೆಗಳಲ್ಲಿ ಬಹುಪ್ರಖ್ಯಾತವಾದ ಅನೇಕವನ್ನು ಹೇಳುತ್ತ ಆಡಿಸುತ್ತಾರೆ. ಬಹು ಸಣ್ಣವಯಸ್ಸಿನ ಈ ಆಟ ಮಗುವನ್ನು ಸಂತೋಷಪಡಿಸುತ್ತದೆ. ವಾತ್ಸಲ್ಯದ ಚಿತ್ರಗಳಲ್ಲಿ ಈ ನಾಡಿನ ಹೆಣ್ಣು ಮಕ್ಕಳಿಗೆ ಹಿಂದಿನ ಕಾಲದಲ್ಲಿ ಇಂಥದು ಒಂದು ದಿನನಿತ್ಯದ ಸಂತೋಷ ವಾಗಿತ್ತು—ಎಂಬ ಚಿತ್ರ ಇಂಥ ಹಾಡುಗಳಲ್ಲಿ ಕಾಣುತ್ತದೆ. ಹಾಗೆಯೇ ದೊಡ್ಡವರೇ ತೋಳುಹಿಡಿದು ಕುಣಿಸುವರು, ಇನ್ನು ಕೆಲವು ದಿನ ಕಳೆದ ಮೇಲೆ ತಾನಾಗಿಯೇ ಸಂತೋಷದಲ್ಲಿ ಕುಣಿದಾಡುವ ಕೃಷ್ಣನ ಚಿತ್ರ ತಾಯಂದಿರಿಗೆ ಕಣ್ಣಹಬ್ಬ. 'ಹರಿ ಕುಣಿದ, ನಮ್ಮ ಹರಿ ಕುಣಿದ' ಎಂಬ ಹಾಡು ಇದನ್ನು ಉದಾಹರಿಸುತ್ತದೆ. ಮಗು ಮುಖ ಮೇಲಿಟ್ಟು ಆಡು ತ್ತಿದ್ದದ್ದು ಮೊದಲ ಬಾರಿಗೆ ಪಕ್ಕ ತಿರುವಿ ಬೋರಲುಬಿದ್ದದು ತಂದೆ ತಾಯಿಯರಿಗೆ ಅತೀವ ಸಂತೋಷ ತರುವ ಪ್ರಸಂಗ. ಮೊದಲ ಸಲ ಹಾಗೆ ಬಿದ್ದುದಕ್ಕೆ ಹಬ್ಬಮಾಡಿ ಸಿಹಿ ಹಂಚುತ್ತಾರೆ. ಇನ್ನೊಂದು ಸಂದರ್ಭ. ಏತಕ್ಕಾಗಿಯೊ ಮಗು ಅಳದೊಡಗುತ್ತದೆ. ಏನು ಬೇಕೆಂದು ಹೇಳದೆ ಯಾರು ಸುಧಾರಿಸಿದರೂ ಸುಮ್ಮನಾಗದೆ ಯಾವ ಕಾರಣದಿಂದಲೊ ಅಳ ತೊಡಗಿದೆ. ಮಗು ಸುಮ್ಮನಾಗದು. ತಾಯೇ ಒಂದು ಸಮಾಧಾನದ ಮಾತುಗಳನ್ನಾಡಬೇಕು." ಬಾರೆ ಗೋಪಮ್ಮ ನಿನ್ನ ಬಾಲಯ್ಯನಳು ತಾನೆ! ಬಾರೆ ಗೋಪಮ್ಮ, ಆರು ತೂಗಿದರೂ ಮಲಗನು ಮುರವೈರಿ | ಎಂದವರೇ ಅವನ ಪ್ರಶಂಸೆಯನ್ನು ಕುರಿತ ಏನೇನನ್ನೂ ಹೇಳುತ್ತಾರೆ. ಕೃಷ್ಣನ ಅವತಾರದ ಕಥೆಯಲ್ಲಿ ಬಹು ಸಣ್ಣತನದಿಂದ ಹಿಡಿದು ಕಡೆಗೆ ಅವತಾರ ಕಾರ್ಯಕ್ಕಾಗಿ ವಿಷ್ಣು ಏನೇನನ್ನು ಮಾಡಿದನೊ ಅದೆಲ್ಲವನ್ನೂ ವರ್ಣಿಸಿದರೂ ವರ್ಣಿಸಿದರೇ | ನೇರವಾಗಿ, ಪರೋಕ್ಷವಾಗಿ ಅವನ

ಸಾಹಸಕಾರ್ಯಗಳೆಲ್ಲ ಪುನರಾವೃತ್ತವಾಗುತ್ತದೆ. ಇಂಥ ಸಂದರ್ಭಗಳಲ್ಲಿ ನೇರವಾಗಿ ಮುಂದೆ ನಡೆಯುವ ಋಜು ರೇಖಾ ಪಥವಲ್ಲ. ಕಾಲ ಪ್ರಗತಿ ಪಥವಾದುದೂ ಅಲ್ಲ. ಕ್ರಮಕ್ರಮವಾದುದೂ ಅಲ್ಲ. ಸುತ್ತು ಬಳಸಿಕೊಂಡು ಏರುವಂಥ ಹಂತವಂತೂ ಅಲ್ಲ. ಸಂಗತಿಗಳು ಕೃಷ್ಣನಿಗೆ ಸಂಬಂಧಿಸಿದುವೇ. ಆದರೆ ಇಲ್ಲಿ ಅನಂತಕಾಲ ಒಂದೇ ನಿಮಿಷದಲ್ಲಿ ಸೇರಿಕೊಂಡಿರುತ್ತದೆ;—ಎಲ್ಲ ಸಂಗತಿಗಳು ನಡೆದುದೂ ಏಕಕಾಲದಲ್ಲಿ ಎಂಬಂತೆ. ತಾಯ ಹೊಟ್ಟೆಯಲ್ಲಿ ಮಗು ಆರು–ಏಳನೇ ತಿಂಗಳಿನಲ್ಲಿ ತನ್ನ ವಂಶದ ಅನೇಕ ಲಕ್ಷಣಗಳನ್ನು ಆಕೃತಿಗಳನ್ನು ಫೋಟೋ ಯಂತ್ರದಲ್ಲಿ ತೆಗೆದಂತೆ ಸಂಗ್ರಹಿಸುತ್ತದೆ ಎನ್ನುತ್ತಾರೆ. ಹಾಗೆ ಬಹುಕಾಲಕ್ಕೆ ಸಂಬಂಧಿಸಿದ ಕಥೆಗಳು, ಸಾಹಸಗಳು ಇಲ್ಲಿ ಬಳಕೆಯಾಗುತ್ತದೆ :

ನೀರೊಳಗಾಡಿ ಮೈ ಒರಸೆಂದಳತಾನೆ
ಮೇರುವ ಹೊತ್ತು ಮೈ ಭಾರವೆಂದಳತಾನೆ
ಧರೆಯ ನೆಗಹಿ ತನ್ನ ದಾಡೆ ನೊಂದಳತಾನೆ
ದುರುಳ ರಕ್ಕಸತನ ಕರುಳ ಕಂಡಳತಾನೆ
ನೆಲವನಳೆದು ಪುಟ್ಟ ಚರಣ ನೊಂದಳತಾನೆ
ಚಲದಿಂದ ಕೊಡಲಿಯ ಪಿಡಿವೆನೆಂದಳತಾನೆ
ಬಲು ಕಪಿಗಳ ಕಂಡು ಅಂಜಿಕೊಂಡಳತಾನೆ
ನೆಲವಿಂದ ಬೆಣ್ಣೆ ಕೈ ನಿಲುಕದು ಎಂದಳತಾನೆ
ಬಟ್ಟ ಬತ್ತಲೆ ನಿಂತು ಎತ್ತಿಕೊ ಎಂದಳತಾನೆ
ಶ್ರೇಷ್ಠ ತೇಜಿಯನ್ನು ಹತ್ತಿಸು ಎಂದಳತಾನೆ
ತೊಟ್ಟಲೊಳಗೆ ಮಲಗಲೊಲ್ಲನು ಮುರವೈರಿ
ಸೃಷ್ಟಿಯೊಳು ಪುರಂದರ ವಿಠಲ ಕರೆಯುತಾನೆ
ಬಾರೆ ಗೋಪಮ್ಮ ನಿನ್ನ ಬಾಲಯ್ಯನಳುತಾನೆ ||

ಎಂದಾಗ ಮತ್ಸ್ಯಾದಿ ಅವತಾರಗಳ ಕಥೆ ಹಾಗಿರಲಿ. ಇನ್ನೂ ಕೃಷ್ಣನ ಕಾಲಕ್ಕೆ ಒದಗದಿರುವ, ಬುದ್ಧನ ಕಥೆಯನ್ನು ಕೂಡ ಹಾಡು ನೆನಸಿಕೊಳ್ಳುತ್ತದೆ. ಬುದ್ಧನು ಬತ್ತಲಲ್ಲ. ಬತ್ತಲಾದವರು ಜಿನರು ಎಂಬುದನ್ನು ಕೂಡ ನಮ್ಮ ಜನ ಇಂಥ ಸಂದರ್ಭದಲ್ಲಿ ಮರೆಯುವುದುಂಟು. 'ಅರುಹ'

ಎಂಬ ಮಾತು ಮೊದಲು ಇಬ್ಬರಿಗೂ ಬಳಸಿ ಉಂಟಾದುದು. ಅರ್ಥದ ಗೊಂದಲ ಇದಕ್ಕೆ ಕಾರಣವಿರಬೇಕು. ಅದು ಹೋಗಲಿ, ಕಲ್ಕಿ ಅವತಾರ ದಲ್ಲಿ ಕುದುರೆ ಮೇಲೆ ಬರುವ ಅವತಾರದ ಕಥೆ ಸೇರಿಕೊಳ್ಳುವುದು, ಇನ್ನೂ ವಿಚಿತ್ರ : ಇದನ್ನು ಬರೆದಿರುವ ನಂಬಿದ ಭಕ್ತರು ಕೃಷ್ಣಚರಿತೆ ಅವತಾರ ಕಥೆಗಳ ಸಂಗತಿಗಳನ್ನು ಕೇಳಿ ಸಾವಿರ ವರ್ಷಗಳ ಕಾಲ ನಡೆದಿದೆ. ಅವತಾರ ತತ್ವ ಈ ಜನ ಒಪ್ಪಿದ್ದು. ಆದುದರಿಂದ ಈ ಮಗು ಕೃಷ್ಣನಿಗೆ ಶೋಭಿಸುವಂತೆ ಆ ಪವಾಡಗಳನ್ನೆಲ್ಲ ಇವನು ಮಾಡಿದಂತೆ ವರ್ಣಿಸುತ್ತಾರೆ. ಇವೊತ್ತು ಅದನ್ನೆ ಹಾಡಿ ಮಕ್ಕಳನ್ನು ಆಡಿಸತೊಡಗಿದರೆ ತಮ್ಮ ಮನೆ ಮಕ್ಕಳು ಆ ಮಟ್ಟಿಗೆ ಕೃಷ್ಣನೇ ಎಂಬ ಭಾವನೆ ಈ ನಾಡಿನಲ್ಲಿದೆ. ಇಲ್ಲವೊ, ಮಗುವಿಗೇನೊ ಕಷ್ಟ ಎಂದು ತಾಯಿ ಶಂಕೆಗೊಳ್ಳುತ್ತಾಳೆ. ಸುತ್ತಲ ಇತರರನ್ನು ಕರೆದು ಮಗುವಿಗೆ ಏನಾಯ್ತೊ ನೋಡಿರಮ್ಮ ಎಂದು ಕರೆಯು ತ್ತಾಳೆ. ಏನಾಯಿತು ರಂಗಗೆ ನೋಡಿರಮ್ಮ ನಿ | ಧಾನಿಸಿ ಎನಗೊಂದು ಪೇಳಿರಮ್ಮ ಹುಟ್ಟಿದಾರಾಭ್ಯ ಕಣ್ಣು ಮುಚ್ಚನಮ್ಮ–ತಾನು | ಎಷ್ಟಾದರೂ ಮೊಲೆಯುಣ್ಣನಮ್ಮ | ಸೊಟ್ಟಾದ ಮುಖ ಮೇಲಕ್ಕೆತ್ತನಮ್ಮ ಹೀಗೆ | ಎಷ್ಟೇ ಹೇಳಲಿ ಬಾಯೇ ಮುಚ್ಚನಮ್ಮ || ೧ || ಇಷ್ಟೇ ಅಲ್ಲ. ತಾಯಿ ನೋಡು ತ್ತಿರುವಂತೆ ಮಗುವಿನ ಕಾಯ ಇದ್ದಂತಿದ್ದುದು ಹೆಚ್ಚಿತಂತೆ. ಅದನ್ನು ಹಿಡಿಯಲು, ಎತ್ತಲು ತಾಯಿಗೆ ಬಲವಿಲ್ಲದಾಯ್ತಂತೆ. ಅವನ ನೋಯ ನೋಟಕ್ಕೆ ಅಬ್ಧಿ ಬತ್ತಿತಂತೆ–ಮಧುರೆ ಬೃಂದಾವನದಲ್ಲಿ ಅಬ್ಧಿ ಎಲ್ಲಿಂದ ಬರಬೇಕೊ ಕಾಣೆ–ಎಲ್ಲಕ್ಕಿಂತ ಅದ್ಭುತವೆಂದರೆ ಅವನ ಬಾಯೊಳಗೆ ವಿಶ್ವ ತೋರಿತಮ್ಮ ಎಂಬುದು. ಎಷ್ಟೆಷ್ಟು ಮಾತುಗಳಾಡಿದನು ! ಈ ಸಣ್ಣ ವಯಸ್ಸಿನಲ್ಲಿ ಕುದುರೆ ಏರಲು ಹೋಗಬೇಕಂತೆ. ಎಂಬುದೆಲ್ಲ ಮಗುವಿನ ಅದ್ಭುತಗಳು. ನಿಜವಾಗಿ ಇವನು ಬೇರೆ ಯಾರೂ ಅಲ್ಲ. ನಿತ್ಯ, ನಿರ್ದೋಷ ಪುರಂದರ ವಿಠಲ ತನ್ನ ಭಕ್ತರನ್ನು ಸಲಹುವ ದೇವನೇ ಎಂಬುದು ಹಾಡಿನ ಮುಕ್ತಾಯ.

ಇಲ್ಲವೆ ತುಂಟ ಮಗುವನ್ನು ಸುಮ್ಮನಿರಿಸುವುದಕ್ಕೆಂದು ಅವನಿಗೆ ಭಯ ಹಿಡಿಸುತ್ತಾಳೆ. ನಿದ್ರೆ ಮಾಡದೆ ಇದ್ದರೆ ಭೂತ (ಬೂಚಿ) ಬರುತ್ತದೆ. ಇವನು ಒಳ್ಳೆಯವನಾಗಿದ್ದರೆ, ಕೂಗದೆ ನಿದ್ರೆ ಮಾಡಿದರೆ ಅದು ತೊಂದರೆ

ಮಾಡುವುದಿಲ್ಲ ಎನ್ನುತ್ತಾಳೆ. ದೆವ್ವ, ಭೂತ, ಕಳ್ಳ, ಎಂಬ ಏನೇನೊ ಹೆಸರುಗಳನ್ನು ಬಳಸುತ್ತಾಳೆ. ಬಳಿಕ, ಗುಮ್ಮನ ಕರೆಯದಿರೆ ಅಮ್ಮ ನೀನು | ಸುಮ್ಮನೆ ಇರುವೆನು ಅಮ್ಮಿಯ ಬೇಡೆನು | ಮಮ್ಮು ಉಣುತೇನೆ ಅಳುವುದಿಲ್ಲ || ಅನು ಪಲ್ಲವಿ || ಯಾವ ಯಾವ ಚಾಡಿ ಕೃಷ್ಣನ ಮೇಲೆ ಬಂದಿತ್ತೋ ಅವುಗಳನ್ನೆಲ್ಲ ಇನ್ನುಮುಂದೆ ಮಾಡುವುದಿಲ್ಲ ಎನ್ನುತ್ತಾನೆ. ಹೆಣ್ಣುಗಳಿರುವಲ್ಲಿಗೆ ಹೋಗಿ ಅವರ ಕಣ್ಣ ಮುಚ್ಚುವುದಿಲ್ಲ | ಚಿಣ್ಣರ ಬಡಿಯುವುದಿಲ್ಲ; ಅಣ್ಣನನ್ನು ಬಯ್ಯುವುದಿಲ್ಲ | ಬೆಣ್ಣೆ ಬೇಡುವುದಿಲ್ಲ | ಗುಮ್ಮನ ಕರೆಯದಿರೆ ಎಂಬುದೊ, ಬಾವಿಗೆ ಹೋಗೆ; ಹಾವಿನ ಮೇಲೆ ಆಡುವುದಿಲ್ಲ. ಆವಿನ ಮೊಲೆಯೂಡೆ ಕರುಗಳನ್ನು ಬಿಡೆ ಎಂಬ ಎಷ್ಟೋ ಪ್ರೀತಿಯ ಮಾತು. ತನ್ನ ಕರುವಿಗೆ ಹಾಲು ಕೊಡುವುದಕ್ಕೆ ಬಿಡದೆ ತಾನೇ ಇನ್ನು ಹಸುವಿನ ಹಾಲು ಕುಡಿಯುವುದಿಲ್ಲ–ಇನ್ನೇನು ಮಾಡುತ್ತಾನಂತೆ! ದೇವರಂತೆ ಒಂದೇ ಕಾಲಲ್ಲಿ ಕೂಡುವೆ ಎನ್ನುತ್ತಾನೆ. ಮಗನ ಮಾತನ್ನು ಕೇಳಿ ಗೋಪಿ ದೇವಿ ಮುಗುಳುನಗೆ ನಗುತ್ತ ಮೋಹದಿಂದ ಬಿಗಿದಪ್ಪಿಕೊಳ್ಳುತ್ತಾಳೆ. ಇನ್ನೊಂದು ಸಲ ಎಲ್ಲಿ ಗುಮ್ಮನೆಲ್ಲಿಹ ತೋರಮ್ಮ ಸುಮ್ಮನೆ ಅಂಜಿಸಬೇಡಮ್ಮ ಎಂದು ತಿರುಗಿಬೀಳುತ್ತಾನೆ. ಸ್ವಲ್ಪ ಕಾಲದಲ್ಲಿ ಇಂಥ ಬೆದರಿಕೆಗಳೆಲ್ಲ ವ್ಯರ್ಥ ಎಂದು ಗೊತ್ತಾಗುತ್ತದೆ. ಒಂದು ದಿನವಂತೂ ಬೂಚಿಯಾಗಲಿ, ಜೋಗಿಯಾಗಲಿ, ಗುಮ್ಮನಾಗಲಿ ಯಾವ ಬೆದರಿಕೆಗೂ ಮಗು ಜಗ್ಗದ ಕಾಲ ಬರುತ್ತದೆ. ಆ ಧೈರ್ಯ ಬಂದಾಗಲೆಲ್ಲಾ ತಾಯಿಗೆ ಸಂತೋಷವೇ. ಎಷ್ಟು ಜಾಣ ತನ್ನ ಮಗ. ನನ್ನ ತಂತ್ರ ತಿಳಿದುಕೊಂಡ ಎನ್ನುತ್ತಾಳೆ. ಕಥೆ ಅಲ್ಲಿಗೆ ಮುಗಿಯಿತಲ್ಲ.

ಇನ್ನು ಸ್ವಲ್ಪ ಕಾಲದಲ್ಲಿಯೆ ಕೃಷ್ಣ ಇನ್ನಷ್ಟು ಬೆಳೆಯುತ್ತಾನೆ. ಮನೆಯಿಂದ ತಪ್ಪಿಸಿಕೊಂಡು ಬೀದಿಗೆ ಹೋಗುತ್ತಾನೆ. ಇತರರ ಮನೆಗಳಿಗೆ ಹೋಗಿ ಏನೇನೊ ಚೇಷ್ಟೆ ಮಾಡುತ್ತಾನೆ. ಆ ಹೆಂಗಸರ ಸೆರಗಿನ ಕೊನೆ ಹಿಡಿದು ಆಡುತ್ತಾನೆ, ಕಾಡುತ್ತಾನೆ. ಅವರ ದಿನಕೆಲಸಗಳಿಗೆ ಅಡ್ಡಿ ಮಾಡುತ್ತಾನೆ. ಇನ್ನೊಂದು ಚಿತ್ರ : ತಾಯಿ ಹಲವರ ಮನೆಗೆ ಹೋಗಿ ನಿಮ್ಮ ಮನೆಗಳಲ್ಲಿ | ನಮ್ಮ ಮುದ್ದು ಕೃಷ್ಣನ ಕಂಡಿರೇನಮ್ಮ | ಎಂದು ಕೇಳಿ ಕೇಳಿ ಬರುತ್ತಾಳೆ, ಎಲ್ಲಿ ಹೋದನೊ ಕೃಷ್ಣ ಎಂದು ಕಾಣದೆ

(ಈ ಹಾಡು ನಮ್ಮ ನೃತ್ಯಗಳಲ್ಲಿ ಅಭಿನಯಗಳಲ್ಲಿ ತುಂಬ ಪ್ರಿಯವಾದ ಹಾಡಾಗಿದೆ. ಅನೇಕ ಆಕ್ಷೇಪಣೆಗಳು ನೆರೆಯವರಿಂದ ಬರುತ್ತವೆ.) ಅಥವಾ ಕೃಷ್ಣನ ಮನೆಗೆ ಬಂದು ತನ್ನ ಮೇಲೆ ಏನೇನೊ ಮಾತಾಡುವರು. ಆಡಹೋದಲ್ಲಿ ಮಕ್ಕಳು ಎನ್ನನು | ಆಡಿಕೊಂಬರು ನೋಡಮ್ಮ | ನೋಡಿ ನೋಡಿ ಇತ್ತ ಮುಖವ | ಮಾಡಿ ಕಣ್ಣ ಮೀಟುವರಮ್ಮ || ದೇವಕಿ ಪೆತ್ತಳಂತೆ; ವಸು | ದೇವನೆಂಬವ ಪಿತನಂತೆ | ಕಾವಲಿನೊಳು ಪುಟ್ಟಿದೆನಂತೆ | ಮಾವ ಕಂಸಗಂಜಿ ಬಂದನಂತೆ ನೋಡಮ್ಮ | ನೀನೆನ್ನ ಪೆತ್ತಿಲ್ಲವಂತೆ ಅಮ್ಮಾ | ನಾನಿನ್ನ ಮಗನಲ್ಲವಂತೆ | ಧೇನು ಕಾಯುವರಿಲ್ಲವೆಂದು | ನೀನು ಸಾನುರಾಗದಿ ಸಡಹಿದೆಯಂತೆ ನೋಡಮ್ಮ ! ಎನ್ನುತ್ತಾನೆ. ಇಂಥ ಪಟ್ಟ ಕೃಷ್ಣನ ಬಾಲ್ಯದ ಅನೇಕ ಕ್ರೀಡೆಗಳನ್ನು ಚೇಷ್ಟೆಗಳನ್ನು ವರ್ಣಿಸುತ್ತದೆ.

ಅನೇಕ ಸಂದರ್ಭಗಳು ಬರುತ್ತವೆ. ಮನೆಯ ಹೊರಗಡೆ ಹೋಗಬೇಡ ಎನ್ನುತ್ತಾಳೆ ತಾಯಿ. ಮಗುವಿಗೆ ಕೇಡು ತಟ್ಟುವುದೆಂಬ ಭಯ. ಅದಿಲ್ಲವಾದರೆ ಜನ ಕೊನೆ ಇಲ್ಲದಷ್ಟು ಆಕ್ಷೇಪಣೆಗಳನ್ನು ಅವನ ಮೇಲೆ ಹೊತ್ತು ತರುತ್ತಾರೆ. ಆಡುವುದಕ್ಕೆ ನನ್ನ ಮನೆಯಲ್ಲಿ ಸ್ಥಳವಿಲ್ಲವೆ? ಆಟಕ್ಕೆ ಬೇಕಾದುದೆಲ್ಲವನ್ನು ತಾನು ಒದಗಿಸಿಕೊಡುತ್ತೇನೆ ಎನ್ನುತ್ತಾಳೆ. ತುಂಬ ಪ್ರಖ್ಯಾತವಾದ ಒಂದು ಪದ್ಯ :

ಪೋಗದಿರೆಲೊ ರಂಗ ಬಾಗಿಲಿಂದಾಚೆಗೆ |
ಭಾಗವತರು ಕಂಡರೆತ್ತಿ ಕೊಂಡೊಯ್ವರೊ
ಸುರಮುನಿಗಳು ತಮ್ಮ ಹೃದಯಗಹ್ವರದಲ್ಲಿ
ಪರಮಾತ್ಮನ, ಕಾಣದರಸುವರೊ
ದೊರಕದ ವಸ್ತುವಿಂದು ದೊರಕಿತು ತಮಗೆಂದು
ಹರುಷದಿಂದಲಿ ನಿನ್ನ ಕರೆದೆತ್ತಿಕೊಂಬರು ||
ಜಗದ ನಾರಿಯರೆಲ್ಲ ಹಗರಣ ಮಾಡುತ್ತಾರೆ
ಮಗುಗಳ ಮಾಣಿಕ್ಯ ತಗುಲಿತು ಕರಕೆ ಎಂದು
ಮಿಗಿಲ ವೇಗದಿ ಬಂದು ಬಿ॥ ನಪ್ಪಿಕೊಂಬರು |

ದಿಟ್ಟನಾರಿಯರು ತಮ್ಮಿಷ್ಟ ಸಲ್ಲಿಸಲೆಂದು
........ ತಿರುಗುವರೊ—ಎಂದು ಹೇಳಿ ಮಗುವಿನ ಮನಸ್ಸನ್ನು ಮನೆಯಲ್ಲಿರಲು ಒಲಿಸುವಂತೆ ಪ್ರೀತಿಯ ಮಾತನಾಡಿ ಅಷ್ಟಿಷ್ಟು ಬೆಣ್ಣೆ ಕೊಡುವೆನೊ ರಂಗಯ್ಯ ಬಾಗಿಲಿಂದಾಚೆಗೆ ಹೋಗದಿರು ಎನ್ನುತ್ತಾಳೆ.

ಮಗು ಬೆಳೆದು ಇನ್ನಷ್ಟು ದೊಡ್ಡ ಹುಡುಗನಾಗುತ್ತಾನೆ. ಗೋಪ ಬಾಲೆಯರು ಯಾವಾಗಲೂ ಇವನನ್ನು ಕೆಣಕುತ್ತಾರೆ. ಆಡಿಸುತ್ತಾರೆ. ತಮ್ಮೊಡನೆಯೇ ಇರೆಂದು ಪೀಡಿಸುತ್ತಾರೆ. ತಮ್ಮೆದುರಿಗೆ ಕಾಣದಿದ್ದರೆ ತಮಗೆ ಹೊತ್ತು ಹೋಗುವುದಿಲ್ಲ ಎನ್ನುತ್ತಾರೆ. ಅವನು ದೊರಕಿಸುವ ಸಂತೋಷಗಳು ಎಂಥವೆಂದರೆ ಅವರ ಅತಿ ಹೆಚ್ಚಿನ ಆಕ್ಷೇಪಗಳನ್ನು ಮೀರಿ ಅವನಿಗೆ ಧಾರಾಳಗಳನ್ನು ಕೊಡುತ್ತಾರೆ. ಯಾರಂಕೆಗೂ ಒಳಪಡದೆ ಅವರ ಮನೆಗಳಲ್ಲಿ ಬೆಣ್ಣೆ ಕದಿಯುತ್ತಾನೆ. ಅವರೊಡನೆ ಆಟವಾಡುತ್ತಾನೆ. ಅವನ ಮೇಲೆ ದೂರು ಕೊಂಡುಹೋಗಿ ಶಿಕ್ಷೆ ಮಾಡಿಸುತ್ತೇನೆ ಎನ್ನುತ್ತಾರೆ. ಅಂಥ ಆಕ್ಷೇಪಣೆಗಳೇ ಅವರ ಶಿಕ್ಷೆ ಬೆದರಿಕೆಗಳೇ ಅವರಿಗೆ ಸಂತೋಷ ಕೊಡುವಂತಿರುತ್ತವೆ. ಒಳಮನೆ ದೇವಾಗಾರದಲ್ಲಿ ಊಟ ಮಾಡುತ್ತಾನೆ. ಅವರು ದೇವರುಗಳಿಗಾಗಿ ಇಟ್ಟ ನೈವೇದ್ಯವನ್ನೆಲ್ಲ ತಾನು ತಿನ್ನುತ್ತಾನೆ. ಇದು ದೇವರ ನೈವೇದ್ಯವೆಂದು ಎಚ್ಚರಿಕೆ ಕೊಟ್ಟರೆ ತಾನು ತಿಂದು, ಅವರ ದೇವರು ತೃಪ್ತನಾದನೆನ್ನುತ್ತಾನೆ. ಹೂಗಳನ್ನು ತಂದು ಹೆಣ್ಣುಗಳಿಗೆಲ್ಲ ಮುಡಿಸಿ ಅಲಂಕಾರ ಮಾಡಲು ಹೋಗುತ್ತಾನೆ. ಅವರಿಗೆ ಅನೇಕ ಬಗೆಯ ಅಲಂಕಾರಗಳನ್ನು ಮಾಡಿ ಬೇರೆ ಹುಡುಗರಿಗೆ ಸಲ್ಲದ ಸದರಗಳನ್ನು ವಹಿಸುತ್ತಾನೆ ಎನ್ನುತ್ತಾರೆ. "ಊರೊಳಗೆ ಇರಲೀಸ, ಊರ ಬಿಟ್ಟು ಹೋಗಲೀಸ | ಈರೇಳು ಭವನಕ್ಕೆ ಒಡೆಯನೆಂದುಕೊಳ್ಳುತ್ತಾನೆ. ನಿನ್ನ ಮಗನ ಲೂಟಿ ಘನ, ಕರೆದು ಚೆಣ್ಣಗೆ ಬುದ್ಧಿಯ ಹೇಳೆ, ಗೋಪಮ್ಮ. ಕೇರಿಯ ಬಸವನ ಮಾಡಿಬಿಟ್ಟೆ ಅವನ" ಎಂದು ಅವನ ಮೇಲೆ ಕೂಗು. ಅವನು ಮರ್ಯಾದೆಯಿಂದ ನಡೆದುಕೊಳ್ಳುವಂತೆ ತಾಯಿ ಅವನಿಗೆ ಬುದ್ಧಿ ಕಲಿಸಬೇಡವೆ? ಈ ಹುಡುಗ ನಿನ್ನ ಮಗ, ಬೇರೆಯ ಮನೆಯ ನಮ್ಮಂತಹ ಹುಡುಗಿಯರೊಡನೆ ಸಲ್ಲದ ರೀತಿಯಲ್ಲಿ ನಡೆದುಕೊಳ್ಳಲು ಇವನಿಗೆ ಎಲ್ಲ ಸ್ವಾತಂತ್ರ್ಯವೂ ಬಂದುಬಿಟ್ಟಿದೆ. ನಿನಗೆ ಮಗನಾದರೆ ಅದನ್ನು ಕಟ್ಟಿ

ಕೊಂಡು ಇತರರಿಗೇನು? ಒಬ್ಬಳೆನ್ನುತ್ತಾಳೆ. ವಯಸ್ಸಿನಲ್ಲಿ ಇವನು ನನ್ನ ಓರಗೆಯೆ? ಕಣ್ಣಸನ್ನೆ ಮಾಡುತ್ತಾನೆ. ಬಗೆಬಗೆ ಹಣ್ಣು ಕೈಯಲ್ಲಿ ತೋರುತ್ತಾನೆ. ಎನ್ನ ಚೆಲುವಿಕೆ ಬಣ್ಣಿಸುತ್ತ ತಿರುಗುತ್ತಾನೆ. ಇವನೇನೆ! ಇನ್ನೂರು ವರಹ ಕೊಟ್ಟು ಎನ್ನ ಮದುವೆಯಾದನೇನೆ? ಅವರೆಲ್ಲ ಬಲಿತ ವಯಸ್ಸಿನ ಹುಡುಗಿಯರು. ಬಲಿತವರ ಆಟಗಳನ್ನು, ಚೇಷ್ಟೆಗಳನ್ನು, ಅಂಥವರಲ್ಲಿ ಮಾಡಲು ಅವನಿಗೆ ಅಧಿಕಾರವಿರುವಂತಿದೆ. ಆ ಚೇಷ್ಟೆಗಳ ವರ್ಣನೆ, ಎಲ್ಲ ಬಗೆಯ ಶೃಂಗಾರ ಚೇಷ್ಟೆಗಳನ್ನು ಮೀರುವಂಥದು. ಎಷ್ಟು ಬೇಕಾದವರೂ ಕೆಲವು ಮಿತಿಗಳನ್ನು ದಾಟಬಾರದು. ಈ ಮಗು ಅತಿ ಮಾನವನಂತೆ ಕಾಣುತ್ತಿದ್ದರೂ ಇಂಥವನಿಗೆ ಸಲ್ಲದು. ಇನ್ನು ಈ ಗೋಕುಲದಲ್ಲಿರಲಾರೆವು ಗೋಪಮ್ಮ. ಸಾಕು ಸಾಕು ನಮಗೇಕೆ ರಚ್ಚೆಗಳು ಈ ಕೃಷ್ಣನ ಪರಿ ನೀ ಕೇಳಮ್ಮ ಎಂದೂ, ನಿನ್ನ ಮಗನಿಗಾಗೆ ಕೇರಿಯ ಬಿಟ್ಟು ಪೋಪೆವೊ ಬೆಳಗಾಗ: ತಾಯಿಗೆ ಏನು ಮಾಡಬೇಕೆಂಬುದು ತಿಳಿಯದಾಗುತ್ತದೆ—ಅಂಥ ಸಂದರ್ಭಗಳಲ್ಲಿ ಆಕೆಗೆ ತೋರುವುದೊಂದೇ. ಅವರೆಲ್ಲರಿಗೂ ಅವಳು ಹೇಳುವುದೊಂದೇ. ನೀವು ಹೇಳುವ ಚಾಡಿ ಎಲ್ಲವೂ ಸುಳ್ಳು. ನನ್ನ ಮಗನು ಏನೂ ಅರಿಯದ ಮುದ್ದುಕಂದ. ತುಂಬ ಸಾಧು ಸಜ್ಜನ. ತನ್ನ ಬೆಟ್ಟ ಬಾಯೊಳಗಿಟ್ಟರೆ, ಬೆಟ್ಟನ್ನು ಕಚ್ಚಲರಿಯ. ಕಟ್ಟಿರುವೆಯನ್ನು ಕಂಡರೆ ಭಯವೆಂದು ಚಿಟ್ಟನೆ ಚೀರುತ್ತಾನೆ. ಸಿಕ್ಕಿದ ಮಾತುಗಳಾಡಿ ಅವನನ್ನು ಬೀದಿಗೆ ಎಳೆಯಬೇಡಿ ಎಂದು ಹೇಳುವಳು. ಆದರೂ ಅವಳಿಗೆ ಗೊತ್ತು, ಇವನು ತುಂಟ—ಸಾಮಾನ್ಯನಲ್ಲ ಎಂದು. 'ಸಾಕುಮಾಡಿರವ್ವ ರಂಗನ ಏಕೆ ದೂರುವಿರೆ' ಎಂದು ಹೇಳಿ ಅವರನ್ನು ಕಳಿಸಿ ಮಗುವನ್ನು ಕರೆದು, ದೂರು ಮಾಡುವರೊ ರಂಗಯ್ಯ ನಿನ್ನ—ಮಗನಿಗೆ ಹೇಳುವಳೊ ತಾನೇ ಹೇಳಿಕೊಳ್ಳುವಳೊ—ಒಂದು ಹಾಡಿದೆ.

ಏನು ಮಾಡಲಿ ಮಗನೆ ಏಕೆ ಬೆಳಗಾಯಿತು |
ಮಾನಿನಿಯರು ಬಂದು ಮಾನವ ಕಳೆಯುವರು |
ಹಾಲು ಮೊಸರು ಬೆಣ್ಣೆ—ಕದ್ದನೆಂಬುವರು | ಮೇಲಿಟ್ಟ
ಕೆನೆಯನ್ನು ಮೆದ್ದನೆಂಬುವರು |

ಬಾಲರೆಲ್ಲರ ಬಡಿದನೆಂಬುವರು ಎಂಥ |
ಕಾಡು ಹೆಂಗಸು ಇವನ ಹಡೆದಳೆಂಬುವರು ||
ಕಟ್ಟಿದ್ದ ಕರುಗಳ ಬಿಟ್ಟನೆಂಬುವರು |
ಎಂಬ ಹಾಗೆಯೆ ಗಂಗಾಜನಕ ನಿನ್ನ ಜಾರನೆಂಬುವರು |
ನಿನ್ನ ಬರಿದೆ ದೂರುವರು | ಹಿಂಗದೆ ಎಮ್ಮನು ಸಲಹೆಂದೆಂಬುವರು |

ಎಂದು ಮಗನಲ್ಲಿ ಪ್ರೀತಿಯಿಂದ ಬಿನ್ನೈಸಿಕೊಳ್ಳುವಳು. ಎಲ್ಲಕ್ಕಿಂತ ಹೆಚ್ಚಾಗಿ ಇವನ ವಿಶೇಷ ಕಾಟವನ್ನು ವರ್ಣಿಸುವ ಒಂದು ಹಾಡು ಚಂಪ್ರಗಾವಿಯನುಟ್ಟು ದುಂಡು ಮುತ್ತನೆ ಕಟ್ಟಿ ಪೆಂಡೆಯುರುಳಿಯನಿಟ್ಟು | ಕೆಂದಾವಿನ ಹಾಲ ಹರವಿಯ ಹೊತ್ತುಕೊಂಡು ಬಂದಳು ಬೀದಿಗಾಕೆ |

ಹಾಲು ಮಾರಲು ಬಂದ ಆಕೆಗೂ ಅವನಿಗೂ ನಡೆದ ಸಂವಾದ ಇದೆ. ಮೇಲಿನ ಕೇರಿಯಲ್ಲಿ ಹಾಲು ಮಾರುವವಳ ಧ್ವನಿ ಕೇಳಿ ನಾಳೆ ನಮ್ಮನೆ ಯಲ್ಲಿ ವೀಳೆಯ ಪ್ರಸ್ಥಗಳುಂಟು. ಹಾಲು ನಿಲ್ಲಿಸೆಂದನಂತೆ; ಬೇರೆ ಕಡೆಗೆ ಅವಳು ಮಾರಕೂಡದಂತೆ; ಸಹಜವಾಗಿ ಆಕೆಗೆ ಕೋಪ ಬರುತ್ತದೆ. ಕೊಂಬವನು ನೀನಲ್ಲ ಢಂಬಕದ ಮಾತೇಕೊ | ಗಂಡನುಳ್ಳವಳ ಕೂಡ | ಮಂಡಲವಾಳುವ ಅರಸನ ಕೂಡ (ಹೇಳಿ) ದಂಡವ ತೆರಸುವನು ||
ಅಡವಿ ಹಂಬುಗಳಿಗೆಲ್ಲಿ ತಡೆವವ ನೀನಾರೊ | ನಡೆ ಊರ ಮುಂದಕೆ ತಳವಾರರೈದಾರೆ | ಗಡನೆ ಪೇಳುವೆನೆಂದಳು || ಆ ಹಂಬುಸೌದೆ ಮಾರು ವವಳನ್ನು ಹಾಗೆ ನಿಲ್ಲಿಸಿದ್ದರಿಂದ ಅವಳ ಆಕ್ಷೇಪಣೆ ಇವನಿಗೆ ಅಡ್ಡಿ ಬಂದಿತು. ಇವನು ಹೆದರುವವನೇನು? ಹಾಗೆಯೇ ಮೃದುವಾದ ಮಾತುಗಳನ್ನಾಡಿ ಅವರನ್ನು ಒಲಿಸಿಕೊಳ್ಳಲಾರದವನೂ ಅಲ್ಲ. ಬಲ್ಲೆ ಬಲ್ಲೆನೆ ನಿನ್ನ ಬಗೆಯ ಮಾತುಗಳಲ್ಲಿ ಎಲ್ಲಿಹ ತಳವಾರನೆ | ಅಲ್ಲದಿದ್ದರೆ ಬಂದು ವೀಳೆಯವ ತಕ್ಕೊಂಡು| ಅಲ್ಲಲ್ಲಿ ದೂರದಿರೆ || ಕೋಲು ಕಯ್ಯಲಿ ಪಣೆಯಲಿ ಸಿರಿನಾಮವು| ಆಲದ ಮರದಡಿಯೆ | ಕಾಲ ಮೊದಲ ಹಾಲ ಮಾರಿದ ಸುಂಕಕೆ | ನಿಲ್ಲೆಂದು ಸೆರಗ ಹಿಡಿದ. ಹೀಗೆ ಮುಂದೆ ಅವರಿಬ್ಬರಿಗೂ ಸಂವಾದ ಬೆಳೆಸುತ್ತಾರೆ. ಸೆರಗು ಬಿಡೋ ಎಂದು ಅವಳು ಕೇಳುವುದು. ಅವನಿಗೆ, ಅಣ್ಣ, ಅಪ್ಪಯ್ಯ, ಮಾವ, ಭಾವ, ಅಣ್ಣ, ತಮ್ಮ, ತಂದೆ, ಮಗ ಎಂದು ಏನೇನೊ ಸಂಬಂಧ

*

ಗಳಿಂದ ಕರೆದು ಸೆರಗ ಬಿಡೊ ಎಂದು ಕೇಳಿಕೊಳ್ಳುತ್ತಾಳೆ. ಪ್ರತಿಯೊಂದು ಸಂದರ್ಭದಲ್ಲಿಯೂ ತಕ್ಕಂತೆ ಗಾಡಿಕಾರನಾದ ಅವನು ಕಾಮಿಯ ಹಾಗೆ ಉತ್ತರ ಕೊಡುತ್ತಾನೆ. ನಿಮ್ಮಪ್ಪನ ಅಳಿಯ ನಾನು; ಮಾವನಲ್ಲ. ಮಾವನ ಮಗ; ಅಣ್ಣನಲ್ಲ; ಅಣ್ಣನ ಭಾವ, ನಿನ್ನ ಕಂದನ ತಂದೆ ಎಂಬ ವರೆಗೂ ಜಾಣು, ಚಾಟು ನುಡಿಗಳನ್ನಾಡಿ ಉತ್ತರ ಕೊಡುತ್ತಾನೆ. ಇದೆಷ್ಟು ಅಲ್ಲದ–ಸಲ್ಲದ ಮಾತಾದರೂ ದಾಸರ ಕಣ್ಣಿಗೆ ಇದು ಚೆಲುವೇ. ಈ ಹುಡುಗ ನನ್ನು ಬಿಡುಗಡೆಗೊಳಿಸುವ ಶೃಂಗಾರಭಾವ. ಅವನು ಆಡಿದನೊ ಇಲ್ಲವೋ, ಆಡಿಸಿದವರು ದಾಸರು. ಅವರ ಭಾವ ಕೃಷ್ಣನಲ್ಲಿರುವ, ದೇವರ ಪರವಾದ ಮಾತು. ಇತರ ಎಲ್ಲ ಬಾಂಧವ್ಯಗಳೂ ಅಲ್ಲಿಂದ ಹಾದಿ ತೋರಿ ಹೋಗು ವ್ವವು. ಇಂತಹ ಅಸಭ್ಯತೆಯ ಮಾತು ಎಣಿಸತಕ್ಕದ್ದಲ್ಲ. ಸಮಾಜದಲ್ಲಿ ಇರುವವರು, ಇತರ ಹೆಣ್ಣುಮಕ್ಕಳನ್ನು ಕುರಿತು ಇಂಥ ಮಾತುಗಳಾಡು ವುದು ಸಾಧುವಲ್ಲ. ಮರ್ಯಾದೆಯೂ ಅಲ್ಲ. ಆದರೆ ಕೃಷ್ಣನಂಥ ಹುಡುಗನ ಎದುರಿಗೆ ಅದಕ್ಕೆ ಹೇಗೆ ಬೆಲೆ ಬರಬೇಕು? ಆ ಹಾಡಿನ ಕಡೆಯ ಚರಣ ಸ್ಪಷ್ಟವಾಗಿ ಮುಗಿಯುತ್ತದೆ. ಇಷ್ಟೆಲ್ಲ ಜಾಣ್ಣುಡಿ ಅವನು ಆಡಿದ ಮೇಲೆ ಅವಳ ಮನಸ್ಸು ಮಾರಿತು. ಇನ್ನೇನು ಮಾಡಿಯಾಳು? ನೆತ್ತಿಯ ಮೇಲಿನ ಕೊಡ ಎತ್ತಿ ಈಡಾಡುತ್ತ ಎತ್ತಿಕೊಂಡಳು ಕೃಷ್ಣನ. ಹರಯದ ಪ್ರೌಢ ಕಾಮಿಯ ಮಾತುಗಳನ್ನಾಡಿದ್ದರೂ ಇವನು.... ಇನ್ನೂ ಸಲಹುವ ಪುರಂದರ ವಿಠಲ ವತ್ಸವೆಂಕಟರಾಯನಲ್ಲವೇ.

ಇದೇ ಬಗೆಯ ಹಲವು ಹಾಡುಗಳಿವೆ. ದೇವರ ಪೂಜೆಗೆಂದು ಮಡಿ ಯೆಂದು. ಅವರು ಬೇರೆ ಒಪ್ಪವಾಗಿಟ್ಟ ಪದಾರ್ಥಗಳನ್ನು ತಾನು ಬಳಸಿ ಕೊಳ್ಳುತ್ತಾನೆ. ತನಗಾಗಿ ಇವೆಲ್ಲ ಇರುವುದೆಂದು ಹೇಳುತ್ತಾನೆ. ಪೂಜೆ ಮಾಡುವವರು ಅವರ ಅಜ್ಜಂದಿರೂ ಎಲ್ಲರೂ ಸ್ವರ್ಗಕ್ಕೆ ಹೋದರು ಎನ್ನು ತ್ತಾನೆ. ಏನು ಮಾತು! ಏನು ವಾದ! ಆದರೆ ದಾಸರು ಮೆಚ್ಚಿ ಒಪ್ಪಿ ತ್ತಿದ್ದ, ಮಾಡುತ್ತಿದ್ದ ಹೊಲಬು ಇದು. ಅಂಥ ಮಾತನ್ನು–ನಡತೆಯನ್ನು ಅವರು ಒಪ್ಪುವರು ಎಂದಲ್ಲ. ಆದರೆ ಸಾಮಾಜಿಕ ಮಟ್ಟದ ಮೇಲ್ಪಟ್ಟ ಯಾವುದೋ ಒಂದು ಆಧ್ಯಾತ್ಮಿಕ ನಿಲವಿನಿಂದ ಅಂಥ ನಡವಳಿಕೆಗೆ ಕೊಟ್ಟ ವಿವರಣೆ, ವ್ಯಾವಹಾರಿಕ ದೃಷ್ಟಿಯಲ್ಲಿ, ಇಂಥ ಸಂಗತಿಗಳು ಸಂಕೋಚ

ಕ್ರೀಡುಮಾಡುವಂಥವು. ಇನ್ನೊಂದು ಪದ್ಯ ಇದೆ. ಇಂಥದನ್ನು ಒಪ್ಪಿಕೊಳ್ಳುವುದು ಇನ್ನೂ ಕಷ್ಟ;

ಸದ್ದುಮಾಡಲು ಬೇಡವೋ–ನಿನ್ನ ಕಾಲಿಗೆ
ಬಿದ್ದು ನಾ ಬೇಡಿಕೊಂಬೆ.
ನಿದ್ದೆಗೈಯುವರೆಲ್ಲ ಎದ್ದರೆ ನೀನು ಬಂ–
ದಿದ್ದದ್ದು ಕಂಡರೆ, ಏನೆಂಬರೊ || ಅನುಪಲ್ಲವಿ ||
ಒಳೆ ಘಲುಕೆನ್ನದೇನೊ, ಕೈಯ ಪಿಡಿದು | ಎಳೆಯದಿರೊ ಸುಮ್ಮನೆ
ಮೊಲೆಗಳ ಮೇಲಿನ ಸೆರಗನೆಳೆಯೆ ಕೊ | ರಳ ಪದಕಂಗಳು
ಧ್ವನಿಗೈಯುವುದು ||
ನಿರುಗೆಯ ಪಿಡಿಯದಿರು; ಕಾಂಚೀಪುರದ |
ಕಿರುಗಂಟೆ ಧ್ವನಿಗೈಯದೆ | ಕಿರುದುಟಿಗಳ ನೀನು ಸವಿದು
ಚಪ್ಪರಿಸಲು | ತರವಲ್ಲ ಗಂಡ ಮತ್ಸರವ ತಾಳುವನು ||
ನಾಡ ಮಾತುಗಳೇತಕೊ–ಸಂಗೀತವ | ಪಾಡುವ ಸಮಯವೇನೊ |
ಗಾಡಿಕಾರ ಶ್ರೀ ಪುರಂದರ ವಿಠಲನ–ಪಾಡು ಪಂಥಗಳ
ಒಡಗೂಡುವ ಸಮಯದಿ ||

ಈ ಎಚ್ಚರಿಕೆಗಳಾವುವೂ ಇವನನ್ನು ತಡೆಯವು. ಅವನಿಗೇತರ ಭಯ? ಅವನನ್ನು ನಿವಾರಿಸಲು ಯಾರಿಗೆ ಧೈರ್ಯ? ಬಲ್ಲರಾರು?

ಕಂಸನು ಅವನಿಗೆ ಹೇಳಿ ಕಳಿಸಿ ಮಥುರಾ ಬೃಂದಾವನಗಳಿಗೆ ಅವನು ಹೋಗುವಾಗ ಹೋಗುತ್ತಾನೆಂದು ತಿಳಿದು ಅವರೆಲ್ಲರಿಗೂ ಆದ ದುಃಖ ಕೊನೆಯಿಲ್ಲದ್ದು. ಅವನಿಲ್ಲದ ಬದುಕು, ಮನದ ಹೊಯ್ದಾಟ–ಅವನು ಹೊರಟುಹೋದ ಮೇಲೆ ವ್ರಜದಲ್ಲಿ ಸಂತೋಷ ಎಂಬುದೇನುಳಿದಿದೆ. ಅಂಥವೆಂಬುದು ಯಾವುದು ತಮ್ಮಿಂದ ಅವನು ಹೊರಟುಹೋದರೆ. ಈ ಅಗಲಿಕೆ ವರ್ಣಿಸುವ ಹಾಡುಗಳು ಅವರ ಕೋಮಲ ಅಂತಃಕರಣವನ್ನೂ ದೀನತೆಯನ್ನೂ ತೋರಿಸುತ್ತದೆ. ಯಾವ ಪ್ರೀತಿಯ ಬಂಧ ಅವನನ್ನು ಅವರಿಗೆ ಕಟ್ಟಿತ್ತೆಂಬುದನ್ನು ಸೂಚಿಸುತ್ತದೆ. ಬೃಂದಾವನ, ಗೋಕುಲದಲ್ಲಿ ಬದುಕು....ಇನ್ನು ಮೇಲೆ ನೀರಸ; ಉದ್ಧವ ಬಂದಿದ್ದಾನೆ. ಅವನನ್ನು

ಕರೆದುಕೊಂಡು ಹೋಗುವುದಕ್ಕೆ. ಆ ಸಮಯದಲ್ಲಿ ಅವನನ್ನು ಬೇಡಿ ಕೊಳ್ಳುತ್ತಾರೆ. ಸಂಪೂರ್ಣ ಜ್ಞಾನ ಕೊಡು, ನಮಗೆ ಭಕ್ತಿ ಕೊಡು, ನಮಗೆ ಸದ್ಗತಿ ಕೊಡು ಎಂದು ಬೇಡಿಕೊಳ್ಳುತ್ತಾರೆ. ಇವನ ಆಟಗಾರಿಕೆ, ಚೇಷ್ಟೆ, ಪುಂಡಾಟ, ಕಪಟ, ಶೃಂಗಾರ, ಸಾಹಸ, ಎಲ್ಲವೂ ಅವರು ಬಯಸಿದ್ದು. ಅವರು ಅಕ್ಕರೆಯಿಂದ ಪೋಷಿಸಿಕೊಂಡು ಬಂದದ್ದೇ. ಬಾಲಕೃಷ್ಣ ಅವರ ಮನಸ್ಸನ್ನು ಕರಣವನ್ನು ತುಂಬಿದ್ದಾನೆ. ಅವನ ಕಾರಣದಿಂದ ಉಂಟಾಗುತ್ತಿದ್ದ ಸಣ್ಣ ಕಿರುಕುಳವನ್ನು–ಸಿಡುಕು ಮಿಡುಕು ಗಳನ್ನು ಅವರು ಮರೆತರು. ಅವರಿಗೆ ಅವನು ಒಡ್ಡಿದ ಯಾವ ಸಿಕ್ಕು ಗಳನ್ನೂ ಅವರು ನೆನೆಯದಾದರು. ಅವನಿಂದ ಅವರಿಗೆ ಉಂಟಾದ ಸಂತೋಷ, ನೆಮ್ಮದಿ ಮತ್ತು ಕಷ್ಟದಿಂದ ಬಿಡುಗಡೆ ಈ ಮೂಲಕ ಅವರ ಜೀವದ ಕೋಟಲೆಗಳೆಲ್ಲ ತುಂಬಿಕೊಳ್ಳುತ್ತಿದ್ದವು. ಆ ಊರಲ್ಲಿ ಅವನು ಇದ್ದು, ಅವರ ಬಾಳಿಗೆಲ್ಲ ವಿಲಾಸ ತಂದುಕೊಟ್ಟದ್ದಕ್ಕಾಗಿ ಅವರು ಕೃತಜ್ಞರು.

ಒಂದು ಸಂಗತಿಯನ್ನು ಕುರಿತು ಹೆಚ್ಚು ಕಡಮೆ ಎಲ್ಲ ಹರಿದಾಸರೂ ಹೊಗಳಿದ್ದಾರೆ. ಎಲ್ಲರೂ ಯಮುನೆಯ ದಡದಲ್ಲಿ ಅವನು ಊದುತಿದ್ದ ಕೊಳಲ ಧ್ವನಿಯನ್ನು ಶ್ಲಾಘಿಸಿದ್ದಾರೆ. ಶ್ರೀಪಾದರಾಯರೂ, ವ್ಯಾಸ ರಾಯರೂ ಹಾಡಿರುವ ಗೀತೆಯ ಇನ್ನೊಂದು ಮುಖವನ್ನು ಪುರಂದರ ದಾಸರ ಹಾಡು ಕಾಣಿಸುತ್ತದೆ. ಅದಕ್ಕೆ ಇನ್ನೊಂದು ವರ್ಣರಂಜನೆಯನ್ನು ತರುತ್ತದೆ. ರಂಗ ಕೊಳಲನೂದಲಾಗ–ಮಂಗಳಮಯವಾಯ್ತು ಧರೆ.

ಬಾಡಿದ ಮಾಮರಗಳು, ಗೊನೆವೊಡೆದವು | ತೀಡುವ ಮಾರುತ ಮಂದ ಗತಿಗೊಯ್ಯೆ | ಬಾಡಿದ ಬರಲು ಹೂಗೊಂಚಲು ಬಿಟ್ಟವು | ಪಾಡಲೊಲ್ಲವು ಅಳಿ ಕುಳಗಳು | ಹೇಡಿಗೊಂಡವು ಚಕ್ಕವಕ್ಕಿ, ಗಿಳಿ ಮಾ | ತಾಡದೆ, ಕಳೆ ಗೊಂದಿದವು ಕೋಗಿಲೆ | ಓಡಾಟ ವೈರಾಟ ಬಿಟ್ಟು ಖಗಮೃಗ ಗಾಢನಿದ್ರಾ ವಶವಾದವು ||

ಕೆಳಗಿನುದಕ ಉಬ್ಬೇರಿ ಬಂದವು | ತುಳುಕಿ ಚೆಲ್ಲಾಡಿ ನಿಂದಳು ಯಮುನೆ | ಮಳೆಯ ಮೋಡೊಡ್ಡಿ ಮೇಘಾಳಿ ಧಾಳಿಟ್ಟವು | ಕಲು ಕರಗಿ ಕರಗಿ ನೀರಾ ದವು || ನಳಿನ ನಾಗ ಪುನ್ನಾಗ ಪಾಟಲ ಸೇವಂತಿಗೆ ಕುಂದ ಮೊಲ್ಲೆ ಮಲ್ಲಿಗೆ

ಬ | ಕುಲ ಮಾಲತಿ ಜಾಜಿ ಪರಿಮಳಗೂಡಿ | ನೀಲಾಂಗನಂಘ್ರಿಗೆರೆದವು | ಕೆಚ್ಚಲು ಬಿಗಿದು ತೊರೆದ ಮಾಲೆಯೊಳು | ವತ್ಸದೊಡಲಾಸೆ ಜರೆದು ಎಳಹುಲ್ಲ | ಕಚ್ಚದಲ್ಲಲ್ಲಿ ನಿಂದವು ತಮ್ಮಯ | ಪುಚ್ಛವನೆಗಹಿ ನೀಂಟಿಸಿ | ಎಂದು ಮುಂತಾಗಿ ಈ ಹಾಡು ಬೆಳೆಯುತ್ತದೆ. ಇದು ಪುರಂದರದಾಸರದು ಹೌದೊ ಅಲ್ಲವೊ ಕಾಣೆ. ಇದಕ್ಕಿಂತ ಹೆಚ್ಚಾಗಿ ಜನಪ್ರಿಯವಾಗಿರುವ 'ವೃಂದಾವನದೊಳಾಡುವನಾರೆ, ಚಂದಿರವದನೆ ನೋಡುವ ಬಾರೆ |' ಎಂಬ ಪಲ್ಲವಿಯುಳ್ಳ ಹಾಡು ಧಾರಾಳ ಧ್ವನಿಯುಳ್ಳದ್ದು.

ಸಖ್ಯ ಭಾವವೂ, ಸೇವ್ಯಸೇವಕ ಭಾವವೂ ಇದೇ ತುಂಬಿನಲ್ಲಿ ವರ್ಣಿತವಾಗಿದೆ. ಈ ಮೂಲಕ ಸಫಲತೆಯ ಭಾವ ಬಂದಾಗ ಅವರ ಸಂತೋಷ ಅತೀವವಾದುದು. ತಮ್ಮ ದೇವರು, ತಮ್ಮ ಕಣ್ಣೆದುರಿಗೆ ಬಂದು ನಿಂತಂತೆ ಅವರಿಗೆ ಭಾಸವಾಗುತ್ತದೆ. ಪ್ರಪಂಚದಲ್ಲಿ ಮತ್ತು ಬದುಕಿನಲ್ಲಿ ಇರುವ ಉಳಿದೆಲ್ಲವೂ ಅವರಿಗೆ ಬೆಲೆಯಿಲ್ಲದುದು.

ಮುಂದಿನ ಭಾವಕ್ಕೆ ಬರುವ ಮುಂಚೆ ಇವರ ಸಾಧನೆ ಸಂಸ್ಕಾರಗಳು ಹೇಗೆ ಬೆಳೆದುವೆಂದು ತನ್ನ ಮನಸ್ಸಿನಲ್ಲಿ ಹುಟ್ಟಿದ ಕೋಟಲೆ ಸಂತಾಪಗಳ ಮೋಹಗಳನ್ನು ಹೇಗೆ ದಾಟಿದರೆಂಬುದನ್ನು, ಆಗಾಗ ಬಂದ ಸೋಲನ್ನು ಹೇಗೆ ದಾಟಿಕೊಂಡರೆಂಬುದನ್ನೂ ಸಾಧನೆಯ ಕೊನೆಯ ಮಜಲನ್ನೂ ಒಂದು ಸಫಲತಾ ಭಾವ ಹೇಗೆ ಉಂಟಾಯಿತೆಂಬುದನ್ನೂ ಸಂಕ್ಷೇಪವಾಗಿ ಈಗ ಸಮೀಕ್ಷಿಸಬಹುದು.

## 5. ವಿಧಾನ ಮತ್ತು ಮಾರ್ಗ

ಬೌದ್ಧಿಕವಾಗಿ ಯಾರೂ ಒಂದು ತಿಳಿವಳಿಕೆಯ ಘಟ್ಟಕ್ಕೆ ಬರಬಹುದು. ಆಗ ಅವರಿಗೆ ಗೊತ್ತಾಗುತ್ತದೆ:—ಈವರೆಗೆ ತಾನು ಬದುಕಿದ ಬದುಕು ಸರಿಯಾಗಲಿಲ್ಲ ಎಂದು. ಇದಕ್ಕಿಂತ ಮೇಲ್ಪಟ್ಟ ಬದುಕಿನ ರೀತಿ ಆತನಿಗೆ ಹೊಳೆದಿರಬಹುದು. ಅದಕ್ಕೆ ಮನಸ್ಸು ಒಲಿರಬಹುದು. ಆ ಬಗೆಗೆ ಪ್ರವೇಶ ಪಡೆದು ಮತಧರ್ಮ ನಂಬಿಕೆಗಳ ಹೆಚ್ಚು ಸತ್ಯವಾದ ಬದುಕನ್ನು ಸರ್ವಥಾ ಬದುಕಲು ತೀರ್ಮಾನಿಸಿರಬಹುದು. ಆದರೆ ದಿನಚರಿ ಜೀವನ ದಲ್ಲಿ ಆಲೋಚನೆಗೆ, ಅಭ್ಯಾಸಗಳಿಗೆ ಸಂಬಂಧಿಸಿದಂತೆ ಹೊರ ಆವರಣಕ್ಕೆ ಸಂಬಂಧಿಸಿದಂತೆ, ಸಮಾಜದಲ್ಲಿಯೂ ವಸ್ತುಪ್ರಪಂಚದಲ್ಲಿಯೂ ಅನೇಕ ಸಂಗತಿಗಳಿರುತ್ತವೆ. ಅವು, ಈ ಮಹಾಜೀವನ ಎಷ್ಟು ಕಷ್ಟ ಎಂಬುದನ್ನು ಮುಂದಟ್ಟು ಮಾಡಿಕೊಡುತ್ತಿರುತ್ತವೆ. ಇಂದ್ರಿಯಗಳು ಮೋಹಗೊಳಿಸು ತ್ತವೆ, ಮನಸ್ಸು ಚಂಚಲ; ನಿಶ್ಚಲವಾದುದಲ್ಲ. ಭ್ರಮಿಸುತ್ತದೆ. ತಿಳಿವಳಿಕೆಯ ಮೇಲೆ ಮೋಡ ಕವಿದಂತೆ ಸತ್ಯವನ್ನು ವಾದಗಳು ಮರೆಸು ತ್ತವೆ. ತನ್ನ ನ್ಯೂನತೆಗಳೇ, ಮಿತಿಗಳೇ ಮುಂದಿನ ಬೆಳವಣಿಗೆಗೆ ಅಡ್ಡಿ ಮಾಡುತ್ತವೆ. ಅವನ ಆತ್ಮದ ಯಾತನೆಗಳೂ ಕ್ರಿಯಾಭಂಗಗಳೂ ಬಹು ದೂರ ನಡೆಯಬೇಕಾಗಿರುವ ಅವನ ದಾರಿಯ ಒಂದು ಗಟ್ಟಿ ಭಾಗ. ಒಳ್ಳೆಯ ಆಹಾರ ಚೆನ್ನಾಗಿ ಬೆಂದು ಪಾಕವಾದ್ದಾಗಿರಬೇಕು. ಎಂದರೆ ಊಟಕ್ಕೆ ಬಡಿಸಲಿರುವ ಅಡಿಗೆ ಪೂರ್ತಿ ಆಗಿರಬೇಕು. ಭಕ್ತನ ಜೀವನ ವೆಂಬುದು ಮೊದಮೊದಲು ಅದನ್ನು ಊಟಕ್ಕೆ ಸಿದ್ಧಪಡಿಸುವ ಪಾಕಕ್ಕೆ ಆಗತ್ಯವಾದ ಮೂಲ (ಕಚ್ಚಾ) ಸಾಮಗ್ರಿಯಂತೆ. ಅದಕ್ಕೆ ಬೇಯಲು ಕಾಯಲು ಇಡಬೇಕು. ಅಡಿಗೆ ಮಾಡುವಾಗ ಶಬ್ದಗಳು ಕೇಳುವುವು; ವಾಸನೆ, ಶಾಖ, ಉಕ್ಕು, ಚೆಲ್ಲುವಿಕೆ ಎಲ್ಲವೂ ಇರುತ್ತದೆ. ಇವೆಲ್ಲ ದಾಸರ ಭಕ್ತಿಯ ಬೆಳವಣಿಗೆಯ ವಿಧಾನದಲ್ಲಿ ರೂಪಗೊಳ್ಳುತ್ತದೆ. ಒಳಗಿನ ಕಶ್ಮಲ, ಕಾಳಿಕೆ ಕಳೆದುಹೋಗಿ ಅವರ ಅಂತಃಕರಣಗಳು ದೇವರ ಸ್ವೀಕಾರಕ್ಕಾಗಿ

ಚೊಕ್ಕ ಬಂಗಾರವಾಗುತ್ತದೆ. ಆರಂಭದಲ್ಲಿಯೆ ಬಹುಶಃ ದಾಸರು ಹೀಗೆ ಹೇಳುತ್ತಾರೆ;

ಅನಂತ ಅಪರಾಧ ಎನ್ನಲ್ಲಿ ಇರಲಾಗಿ
ಬಿನ್ನಹಕೆ ಬಾಯಿಲ್ಲವಯ್ಯ;

ಇಲ್ಲಿನ ವ್ಯಥೆ ನಿಜವಾದ್ದು. ಆತ್ಮದ ಆಳದಲ್ಲಿ ಬೇನೆಗೊಂಡು ಹೀಗೆ ವ್ಯಥೆ ಪಟ್ಟವರೆಲ್ಲರಿಗೂ ದೇವರ ಒಲವು ತಮಗೆ ದೊರಕದೇನೊ ಎನ್ನಿಸುತ್ತದೆ. ಈವರೆಗೆ ಬದುಕಿದ ಬದುಕು ತಪ್ಪುದಾರಿ ಹಿಡಿಯಿತು ಎಂಬ ತಿಳಿವಳಿಕೆ ಮೊದಲು ಬರಬೇಕು. ಹೇಗೆ ಇರಬೇಕಾಗಿದ್ದುದು ಹೇಗೆ ಆಗದೆ ಹೋಯಿತು ಎಂಬ ವಿಷಾದದ ಭಾವ ನಿಜವಾಗಿ ಹುಟ್ಟಿ ಕಾಡಬೇಕು. ಮತದ ಬೇರಾಗಿ ಇರುವುದೂ–ಜೀವವಾಗಿ ನಡಸುವುದೂ ಈ ನಂಬಿಕೆ. ಅದಿಲ್ಲದಾದರೆ ಮತಧರ್ಮದ ಬಾಳು ತೊಡಗುವುದೇ ಇಲ್ಲ. ಈತನ ಅಪರಾಧ ಅನಂತವಾಗಿದೆಯಂತೆ. ಆದ ಕಾರಣದಿಂದ, ಬಾಯಿ ಬಾರದಂತೆ ಬಿನ್ನಹಕ್ಕೆ ಶಿಶು ಮೋಹ; ಸತಿ ಮೋಹ | ಜನನಿ ಜನಕರ ಮೋಹ | ರಸಿಕ ಭ್ರಾತರ ಮೋಹ, ರಾಜ ಮೋಹ | ಪಶು ಮೋಹ, ಭೂ ಮೋಹ, ಬಂಧು ವರ್ಗದ ಮೋಹ ಇವುಗಳಲ್ಲಿ ಮುಳುಗಿ ಅಸುರಾರಿ ನಿನ್ನ ಮರೆತೆ; ಕಾಯೋ ಹರಿಯೆ ಎನ್ನುತ್ತಾರೆ. ಮೋಹವೊಂದೇ ಅಲ್ಲ ಮದಗಳು ಬೇರೆ. ಮೋಹದಲ್ಲಿ ಅರಿವು ಮುಚ್ಚಿಹೋಗುತ್ತದೆ. ಸತ್ಯ ಕಾಣುವುದಿಲ್ಲ. ಮದದ ವಿಜೃಂಭಣೆ ಹೆಚ್ಚು ಸಕ್ರಿಯವಾದುದು. ಇವುಗಳಲ್ಲಿ ಕೂಡ ದೈವದ ಅರಿವಿಲ್ಲದಾಗುತ್ತದೆ. ಇದು ಮರೆಸುವುದು ಮಾತ್ರವಲ್ಲ ಎದುರಿಗಿದ್ದುದು ಕಾಣದಂತೆ ಮಾಡುತ್ತದೆ. ಅನ್ನ ಮದ, ಅರ್ಥ ಮದ, ಅಖಿಲ ವೈಭವದ ಮದ | ಮುನ್ನ ಪ್ರಾಯದ ಮದವು ರೂಪ ಮದವು | ತನ್ನ ಸತ್ವದ ಮದ | ಧಾತ್ರಿ ವಶವಾದ ಮದ | ಇನ್ನು ತನಗೆ ಎದುರಿಲ್ಲವೆಂಬ ಮದದಿಂದ– ಬಿನ್ನಹಕೆ ಬಾಯಿಲ್ಲವಾಯಿತು. ಮನುಷ್ಯರಿಗೆ ಹೀಗೆಲ್ಲ ಧರ್ಮದ ಕುರುಡು ಬರುತ್ತದೆ. ಮೋಹ ಮದಗಳ ಜೊತೆಗೆ ಆಸೆಗಳು ಬಲಿಯುತ್ತವೆ. ಇವಕ್ಕೆ ಇತಿ ಏನು? ಮಿತಿ ಏನು? ಇಷ್ಟು ದೊರಕಿದರೆ ಮತ್ತಷ್ಟು ಬೇಕೆಂಬಾಸೆ | ಅಷ್ಟೂ ದೊರಕಿದರೂ ಮತ್ತಷ್ಟರಾಸೆ | ಕಷ್ಟಬೇಡವೆಂಬಾಸೆ | ಕಡುಸುಖವ ಕಾಂಬಾಸ | ನಷ್ಟ ಜೀವನದಾಸೆ–ಎಂದು ಪುರಂದರ ವಿಠಲನಿಗೆ ನಿವೇದಿಸಿ

ಕೊಳ್ಳುತ್ತಾರೆ. ಸಾಮಾನ್ಯ ಮಾನವವರ್ಗದಲ್ಲಿ ಈ ಮೋಹ, ಮದ, ಆಸೆಗಳಿಂದ ಬಿಡುಗಡೆ ಹೊಂದಿದ ಪ್ರಾಣಿಯಿಲ್ಲ. ಈ ನಿಜವನ್ನು ತಿಳಿದು ದೇವರಲ್ಲಿ ಭಕ್ತಿ ಇಟ್ಟ ಹೊರತು ದೇವರು ದೊರಕುವುದಿಲ್ಲ. ಇದು ಸ್ವಂತ ತನ್ನ ಆಸೆಗಳನ್ನು ಸೋಲುಗಳನ್ನು ಮಾತ್ರ ಪಟ್ಟಿ ಮಾಡುವುದಿಲ್ಲ. ಮನುಷ್ಯ ಸಾಮಾನ್ಯರೆಲ್ಲ ಇದಕ್ಕೆ ಈಡಾದವರೇ. ಅದರಲ್ಲೂ ಅನಂತ ಅಪರಾಧ—ಎಂಬ ಕೀರ್ತನೆಯನ್ನು ಸಾಮಾನ್ಯವಾಗಿ ಹಾಡುವ ಮೋಹನ ರಾಗ ಅದರ ಕೊನೆಯಿಲ್ಲದಿರುವಿಕೆಯನ್ನು ತುಂಬ ವಿಸ್ತಾರಗೊಳಿಸುತ್ತದೆ. ಮಾತುಗಳು ತುಂಬಾ ಸರಳವಾದುದು. ಇದನ್ನು ಹಾಡುವಾಗ ಒಂದು ಪ್ರಾರ್ಥನೆಯಾಗಿಯೊ, ಬೇಡಿಕೆಯಾಗಿಯೊ, ಗೋಳಾಗಿಯೊ ಅಥವಾ ಒಂದು ಸ್ಥಿತಿಯಾಗಿಯೊ ಹೇಗೆಬೇಕಾದರೂ ಹಾಡಿಕೊಳ್ಳಬಹುದು. ಇನ್ನೊಂದು ಭಾಷೆಯಲ್ಲಿ ಈ ಪ್ರಶ್ನೆ, ಈ ಪಲ್ಲವಿ ಸುಲಭವಾಗಿ ಧಾತು ಕೆಡಬಲ್ಲದು. ಕೆಲವು ಕ್ಷಣಗಳಲ್ಲಿ ದಾಸರು ತಮಗೆ ಅಂದುಕೊಳ್ಳುತ್ತಾರೆ: ದಿನಚರಿಯ ಜೀವನದಲ್ಲಿ ಇಷ್ಟು ಹೊತ್ತಿಗಾಗಲೆ ಸುಖದ ಆಸೆಗಳನ್ನು ಬಿಟ್ಟು ಬಿಡಬೇಕಾಗಿತ್ತೆಂದು. ಈ ಕ್ಷಣದಲ್ಲಿ ಬರುತ್ತದೆ. 'ಸಾಕು ಸಾಕಿನ್ನು ಸಂಸಾರ ಸುಖವು ಶ್ರೀಕಾಂತ ನೀನು ಒಲಿದು ಕರುಣಿಸಯ್ಯ' ಎಂದು ಬೇಡಿಕೊಳ್ಳುತ್ತಾರೆ. ಸನ್ಮಾರ್ಗ ಹೊಂದಿಸಯ್ಯ ಎಂದೂ ಬೇಡಿಕೊಳ್ಳುತ್ತಾರೆ. ಎಷ್ಟೋ ಕಾಲವನ್ನು, ದೇವರನ್ನು ಸ್ಮರಿಸದೆ ಕಳೆದು ವ್ಯರ್ಥವಾಯಿತು ಜೀವ, ಸಣ್ಣಪುಟ್ಟದರಲ್ಲಿ ಗಮನವಿಟ್ಟು ಎನ್ನುತ್ತಾರೆ. ಬಣ್ಣದ ಬೀಸಣಿಗೆಯಂತೆ ಹೆಣ್ಣು ತಿರುಗುವುದನ್ನು ಕಂಡು, ಕಣ್ಣಸನ್ನೆ ಮಾಡಿ ಕೈಯ ಹೊನ್ನ ತೋರಿಸಿ | ತಣ್ಣೀರು ಹೊಯ್ದು ಹೊಸ ಸುಣ್ಣದಂದದಿ (ಕುದಿದು) | ಕಣ್ಣಿನಲ್ಲಿ ಮಣ್ಣು ಚೆಲ್ಲಿಕೊಂಬರೆ ಮನವೆ | ವಾಸುದೇವನ ಪೂಜೆ ಒಮ್ಮೆ ಮಾಡು ಎಂದರೆ | ತಲೆಯ ಬೇಸರದಲ್ಲಿ ಕುಳಿತೆ | ಆ ಸಮಯದಲ್ಲೊಬ್ಬ ಅವನ | ದಾಸಿಯ ಮಗನಂತೆ ಬೆಂಬಿಡಿದೇ ನೆರೆಮನೆಯಲ್ಲಿ ಹೊರಮನೆಯಲ್ಲಿ ಪ್ರಸ್ಥವಾದರೆ ಕರೆಯದ ಮುನ್ನವೇ ಹೊರ ಹೊರಟೆ, ಬರಿಗಂಟು ಬರಿಮಾತು ಸುಳ್ಳು ಸುದ್ದಿಯ ಕೇಳಿ | ಹಿರಿಯಮಗನಂತೆ ಒಡಲಹೊರಕೊಂಬೆ ಈ ಕುಹಕ ಬುದ್ಧಿ ಬಿಡದೆ? ಎನ್ನುತ್ತಾರೆ. ನೀರ ಬಿಂದು ಮಾತ್ರವೇ ಸುಖ, ದುಃಖ ಪರ್ವತದಷ್ಟು | ಸಂದೇಹವಿಲ್ಲಾ ಇದು ಶಾಸ್ತ್ರ

ಸಿದ್ಧ | ಎಂದೆಂದಿಗೂ ನಮ್ಮ ಪುರಂದರ ವಿಠಲನ ಹೊಂದಿದಲ್ಲಿ ನೀನು ಸುಖ ವಾಗಿ ಬಾಳುವೆ ಎಂದು ತಮ್ಮ ಮನಸ್ಸಿಗೆ ಹೇಳಿಕೊಳ್ಳುತ್ತಾರೆ. ಆದರೆ ಮನಸ್ಸು ಅದಕ್ಕೆ ಕಿವಿ ಕೊಡುವುದು ಕಷ್ಟ. ಅದರ ತಿಳಿವಳಿಕೆ ಅಪೂರ್ಣ. ದೇಹದ ಆಸೆಗಳನ್ನು ಆಮಿಷಗಳನ್ನು ಬಿಟ್ಟುಬಿಡಲು ಅದು ಸುಲಭವಾಗಿ ಒಪ್ಪಿಬಿಡುವುದಿಲ್ಲ. ಮನ ಸುಲಭವಾಗಿ ನನ್ನ ಮಾತು ಕೇಳದು. ಮಂದ ಜ್ಞಾನದಿ | ತನುವಿನಾಸೆಯ ಬಿಡಲೊಲ್ಲದು—ಎಂಬುದು ಮೇಲೆ ಮೇಲೆ ತಿಳಿಯುತ್ತದೆ. ಅನೇಕವೇಳೆ ತನ್ನ ಹಗಲು ರಾತ್ರಿಗಳನ್ನು—ಹೀಗೆ ಕಳೆಯು ವವನನ್ನು ಶ್ರೀಹರಿಮಾತ್ರವೇ ಉದ್ಧಾರ ಮಾಡಬೇಕಲ್ಲದೆ ತನ್ನನ್ನು ತಾನೆ ಉದ್ಧಾರ ಮಾಡಿಕೊಳ್ಳುವುದು ಕಷ್ಟ. ಆದರೆ ಆಗ (ಪ್ರಶ್ನೆ) ಇದು—ಹೇಗೆ ಉದ್ಧಾರ ಮಾಡುವನೊ ಶ್ರೀಹರಿ ? ಹೀಗೆ ದಿನಗಳು ಉರುಳಿದವು. ತನ್ನ ಬದುಕನ್ನು ಹಗಲು ರಾತ್ರಿ, ಈವರೆಗೆಲ್ಲ ಹೀಗೆ ಕಳೆದಿದ್ದೇನೆ ಎಂದು ಮುಂದೆ ಬರುತ್ತದೆ. ತನ್ನ ಮನಸ್ಸಿನಲ್ಲಿರುವ ಅನಿಶ್ಚಯಗಳನ್ನು ತನ್ನ ದೇವರಿಗೆ ತಿಳಿಸಿ ಆತನಿಗೆ ಮೊರೆ ಇಡುತ್ತಾರೆ. ಆತನಗಾಗಿ ನಿಸ್ಸಹಾಯನೆಂಬಂತೆ— ನಾನಿಲ್ಲಿರಲಾರೆ, ಅಲ್ಲಿಗೆ ಹೋಗಲಾರೆ | ನೀನಿರುವ ಕಡೆ ನನ್ನನ್ನು ಉಳಿಸಿಕೊ; ನೀನಿದ್ದಲ್ಲಿ ಇರಿಸು ಎನ್ನುವರು. ನನ್ನ ಮನದ ಡೊಂಕನ್ನು ತಿದ್ದಿ ಚರಣದಲ್ಲಿ ಸೇರಿಸಿಕೊ ಎನ್ನುತ್ತಾರೆ. ಈ ನಿಲವು ಅವರಿಗೆ ಬಂದುದು ತಾನು ದೇವರ ಸೇವಕನೆಂದು ಒಪ್ಪಿಕೊಂಡಾಗ. ಆದುದರಿಂದಲೇ ಚರಣ ಸೇವಕನಾಗಿ ನನ್ನನ್ನು ತೆಗೆದುಕೊಂಡು ಮನದ ಡೊಂಕನ್ನು ಕಶ್ಮಲವನ್ನು ತೊಳೆ........ ಎನ್ನುವರು. ನನ್ನ ವಿಷಯದಲ್ಲಿ ಅಪನಂಬಿಕೆ ಬೇಡ. ಸ್ವಂತ ನಾನು ಅಶಕ್ತನಾಗಿದ್ದೇನೆ. ಸಂಶಯ ಬೇಡ ಎಂದು ಬೇಡಿಕೊಳ್ಳು ತ್ತಾರೆ. ನನ್ನನ್ನು ನಿಜವಾದ ಸೇವಕನಾಗಿ ಮಾಡಿಕೊ ಎನ್ನುತ್ತಾರೆ. ಈ ಹೊಸ ಬದುಕನ್ನು ಕೈಕೊಂಡ ಕಾಲದವರೆಗೂ ಕೊನೆಯ ಸ್ಥಿತಿಯ ಮಜಲಿನವರೆಗೂ, ತಮ್ಮೊಳಗೆ ಬಹುಕಾಲ ಮನಸ್ಸು ಒಳಗುದಿಯನ್ನು ಅನುಭವಿಸಿದರು. ದೇಶದಲ್ಲೆಲ್ಲ, ಸುತ್ತಾಡುವಾಗಲು ಈ ಒಳಕೋಟಲೆ ಅವರಿಗೆ ತಾಪವುಂಟುಮಾಡಿತ್ತು. ಬುದ್ಧಿ ಏನೊ ತಿಳಿವಳಿಕೆ ತಂದು ಕೊಡುತ್ತದೆ. ನಿಜವನ್ನು ಕಾಣಿಸುತ್ತದೆ. ಕಂಡದ್ದನ್ನು ವಾಸ್ತವವಾಗಿ ಸಾಧಿಸುವುದು ಕಷ್ಟ. ಪ್ರತಿದಿನದ ಜೀವನದ ಮೌಲ್ಯವಾಗಿ ಎಣಿಸಿ

ಬದುಕಿನ ಒಂದು ಅಂಗವಾಗಿ ಮಾಡಿಕೊಳ್ಳಲು ಇನ್ನಷ್ಟು ಹೆಚ್ಚು ಕಾಲ ಬೇಕಾಗುತ್ತದೆ. ಹಳೆಯ ಅಭ್ಯಾಸಗಳು, ಆಲೋಚನಾರೀತಿ, ಭಾವ, ನಿಲವು ಸುಲಭವಾಗಿ ಸಾಯವು. ತಿಳಿವಳಿಕೆ ಬಂದಮೇಲೂ ಹೊಸ ಅಗತ್ಯಕ್ಕೆ ಎಡೆಕೊಡಬೇಕು. ಮಾತು, ನಡವಳಿಕೆ, ಸಮಾಜದಲ್ಲಿ ವ್ಯವಹಾರ ಇವುಗಳ ಪ್ರಕಾರಗಳು ಬೇರೆಯಾಗಬೇಕು. ಎಷ್ಟೇ ಯತ್ನಿಸಿದರೂ ಆ ಮಿತಿಗಳಿಂದ ತನ್ನನ್ನು ಬಿಡುಗಡೆಗೊಳಿಸಿಕೊಳ್ಳಲು ಸುಲಭವಾಗದು. ತನ್ನದೊಂದೆ ಅಲ್ಲ ನಡತೆ, ತನ್ನ ಹತ್ತಿರವಿರುವ, ಪ್ರಿಯರಾಗಿರುವವರ ನಡತೆ ಯನ್ನು ಕೂಡ ಗಮನದಲ್ಲಿಟ್ಟುಕೊಂಡಿರಬೇಕು. ಇದು ಕಷ್ಟ. ಸುತ್ತಲಿದ್ದ ಹಲವರು ಹಲ್ಲುಕಿರಿದು ಅಪಹಾಸ್ಯಮಾಡಿದರೆ ಅದನ್ನು ಎದುರಿಸಬೇಕು. ಅದು ಜೀರ್ಣವಾಗಬೇಕು. ಹಿಂದಿನ ಕಾಲದಲ್ಲಿ ಗರ್ವಿಷ್ಠನಾಗಿ, ಶ್ರೀಮಂತ ನಾಗಿ ಲಾಭಾಲಾಭಗಳ ದಡ ತಿಳಿವಳಿಕೆಯುಳ್ಳವನಾಗಿ ಬಹುಶಃ ಧಾಷ್ಟ್ರ್ಯ ದಿಂದ ಆತನು ಹಂಪೆಯಲ್ಲಿ ತಿರುಗಾಡುತಿದ್ದುದನ್ನು ಎಷ್ಟೋ ಮಂದಿ ನೋಡಿದ್ದರು. ಈಗ ಹಠಾತ್ ಬಡತನದ ಜೀವನಕ್ಕೆ ಅವರು ತಿರುಗಿದ್ದರು. ಅದು ಸ್ವಂತ ಇಚ್ಛೆಯಿಂದ ಆದುದು ಹೌದು. ಆದರೂ ಅಂಥ ಒಬ್ಬನು ಹೆಜ್ಜೆಗೆ ಗೆಜ್ಜೆ ಕಟ್ಟಿಕೊಂಡು ಕೈಯಲ್ಲಿ ಚಿಟಿಕೆ ಹಿಡಿದು, ಇನ್ನೊಂದು ಕೈಯಲ್ಲಿ ಸಣ್ಣ ತಂಬೂರಿ ಹಿಡಿದು ತಿರುಗುವ ಆತನನ್ನು ಕಂಡು ಅನೇಕರು ಹಂಗಿಸುತ್ತಲೂ ಇದ್ದರು. ಹಿಂದಿನ ಶ್ರೀನಿವಾಸ ನಾಯಕರೆಲ್ಲಿ–ತಲೆಗೆ ದಾಸನ ರುಮಾಲು ಕಟ್ಟಿ ಅದರ ಚುಂಗು ಬಾಲದ ಹಾಗೆ ಬೆನ್ನ ಹಿಂದೆ ಇಳಿದಾಡುತ್ತಿರಲು ಮೈಯ್ಯ ಮೇಲ್ಭಾಗವೆಲ್ಲ ಬೆತ್ತಲೆಯಾಗಿ, ಮೈಯಲ್ಲಿ ಮತದ ಗುರುತಾದ ಗೋಪಿಚಂದನ ಹಚ್ಚಿಕೊಂಡು ಪದಗಳನ್ನು ಹಾಡುತ್ತ ಬೀದಿಯಲ್ಲಿ ತಿರುಗುತ್ತ, ಹೆಂಡತಿ ಮಕ್ಕಳು ಇತರರೊಡನೆ ಬೀದಿಯಲ್ಲಿ ತಿರುಗುತ್ತ ಉಂಛವೃತ್ತಿ ಮಾಡುತ್ತಿದ್ದ ಆತನ ದೃಶ್ಯ ಆ ಜನಕ್ಕೆ ಸೋಜಿಗ ವುಂಟುಮಾಡುತಿತ್ತು. ಹಲವರ ಮನಸ್ಸು ಇದಕ್ಕೆ ಹೊಂದಿಕೊಳ್ಳಲಿಲ್ಲ. ತಾನಂತೂ ತೀರ್ಮಾನಿಸಿದ್ದ. ಆಯಾ ದಿನ ಬೇಡಿದ್ದನ್ನು ತಂದು ಸಾಕೆಂದು ಅಡಿಸಿ ಹೆಂಡತಿಮಕ್ಕಳು ಎಲ್ಲ ಅಷ್ಟನ್ನು ಉಂಡು ತೃಪ್ತರಾಗಬೇಕು. ನಾಳೆಗೆ ಏನೂ ಉಳಿಸತಕ್ಕದ್ದಲ್ಲ. ತನ್ನದಾಗಿ ಆಸ್ತಿ ಎಂದುಕೊಂಡು ಇನ್ನಾವುದನ್ನೂ ಸ್ವೀಕರಿಸಿ ಉಳಿಸಿಕೊಳ್ಳತಕ್ಕದ್ದಲ್ಲ–ಎಂದು ಏರ್ಪಡಿಸಿದುದು

ಎಲ್ಲರಿಗೂ ಆಶ್ಚರ್ಯ ತಂದ ಸಂಗತಿ. ಈ ಪರಿಸ್ಥಿತಿಯನ್ನು ಕಂಡು ಅನೇಕ ಜನ ಕಟುವಾಗಿ ಟೀಕೆ ಮಾಡಿರಬೇಕು. ಅಣಕಿಸಿರಬೇಕು.

ಒಂದು ಕಾಲದಲ್ಲಿ ದಾಸರು ಹೊರಗೆ ಸಂಚಾರಮಾಡಿದಹಾಗೆ ಕಾಣುತ್ತದೆ. ದೇಶ ಬಹುಶಃ ಕನ್ನಡ ದೇಶವಲ್ಲ. ಅಲ್ಲಿ ಬೇರೆ ಬಗೆಯಾದ ಅಪಮಾನಗಳಿಗೂ ಕಡೆಗಣಕೆಗೂ, ಈಡಾಗಬೇಕಾಯಿತು. ಇತ್ತ ಒಳಗೆ ತನ್ನ ಮಿತಿ–ಸೋಲು ಒಳಗೇ ಇದ್ದುಕೊಂಡು ಅವರು ನರಳುವಂತೆ ಮಾಡಿರಬೇಕು. ಅನೇಕ ವೇಳೆ ಗಾಜು ಬಹು ಶುದ್ಧವಾಗಿದ್ದಾಗಲೇ ಅದರಲ್ಲಿನ ಒಂದು ಸಣ್ಣಗುಳ್ಳೆಯೊ ಮಾಲಿನ್ಯವೊ ದೊಡ್ಡ ದೋಷದಂತೆ ಕಾಣಿಸುತ್ತದೆ. ಬಟ್ಟೆ ಎಷ್ಟು ಬೆಳ್ಳಗಿಸದಾದರೆ ಅಷ್ಟು ಅಷ್ಟು ಒಂದು ಸಣ್ಣ ಮಾಲಿನ್ಯ ಅತಿ ದೊಡ್ಡ ಕೊಳೆಯಂತೆ ತೋರುತ್ತದೆ. ಮನಸ್ಸಿನಲ್ಲಿ ಹುಟ್ಟಿದ ಯಾತನೆಗಳೆಂಬ ಹಲವು ಬಾರಿ ತನ್ನ ಗುರಿಯನ್ನು ಎಂದಿಗಾದರೂ ಮುಟ್ಟಿಯೇನೆ–ಎಂಬಂಶದಲ್ಲಿ ತನ್ನನ್ನ ಕುರಿತೇ ಸಂದೇಹ ಉಂಟಾಗಿರಬೇಕು. ಕಂಡ ಜನರಲ್ಲಿ ಕೆಲವರು ಅವರೊಡನೆ ಬಹು ಕಠಿಣವಾಗಿ ನಡೆದಿರಬೇಕು. ಸಾಧನೆಯ ಸಮಯದಲ್ಲಿ ನಿರಾಸೆಯ ಒಂದು ಅವಸ್ಥೆಯನ್ನು ಆತ್ಮದ ಕದ್ದಿಂಗಳ ಕಡೆಯರಾತ್ರಿ ಎಂದು ವರ್ಣಿಸುತ್ತಾರೆ. ಅದು ಆತನ ದಾರ್ಢ್ಯದ ಹುರಿಗಳನ್ನು ಪರೀಕ್ಷಿಸುತ್ತಿತ್ತು. ಕೆಲವು ಹಾಡುಗಳು ಈ ಸನ್ನಿವೇಶಗಳನ್ನು ಬಿಂಬಿಸುತ್ತವೆ. ಅವು ಆತನ ಜೀವಮಾನದ ಈ ಮಜಲಿನ ಗುರುತುಗಳು. ಕೆಲವು ವೇಳೆ ತಮ್ಮನ್ನು ನೋಡಿ ತಾವೇ ನಗುತ್ತಾರೆ. ತಮ್ಮ ಮನಸ್ಸಿನಲ್ಲಿಯೇ ಪರೀಕ್ಷಾ ಪ್ರಯೋಗಗಳನ್ನು ಮಾಡಿಕೊಳ್ಳುತ್ತಾರೆ. ಇನ್ನು ಕೆಲವು ಸಮಯ ಕಾಣದ ಪರಕೀಯರಲ್ಲಿ ಹೋಗಿ ಬೇಡಬೇಕಾಯಿತಲ್ಲ ಎಂದು ಅಳುಕು ಉಂಟಾಗುತ್ತದೆ. ಮಾನಕ್ಕೆ ಬದುಕಿದ್ದ ಅವರಿಗೆ ನಿಷ್ಕರುಣವಾದ ಈ ಸ್ಥಿತಿಯನ್ನು ಕಂಡು ತುಂಬ ನೋವಾಗುತ್ತದೆ. ಏನು ಬರೆದೆಯೊ, ಬ್ರಹ್ಮ ಏನು ಬರೆದೆಯೊ | ಎಷ್ಟು ನಿರ್ದಯನೊ ! | ಅಭಿಮಾನವನು ತೊರೆದು ಪರರನ್ನು ಪಂಚಬಾಣಸಮ ರೂಪ ನೀನೆಂದು ಪೊಗಳೆ | ನಿನ್ನಾಣೆಲ್ಲ, ನಾಳೆ ಬಾರೆಂದು ಎನಲು | ಗಾಣ ತಿರುಗುವ ಎತ್ತಿನಂತೆ ಬಳಲುವುದು | ಏನು ಬರೆದೆಯೊ ಬ್ರಹ್ಮ || ಒಂದು ಹಿಡಿ ಕೂಳಿಗಾಗಿ ತನ್ನ ದೇಹವನ್ನು ಪೊರೆಯಲು ಇನ್ನೊಬ್ಬರಲ್ಲಿಗೆ ಹೋಗಿ ಅವರನ್ನು

ಹೊಗಳಬೇಕಾದ ಸಂಗತಿ ಎಂದಿಗೂ ಯಾರಿಗೂ ಚಿಂತಾಜನಕ. ಹಿಂದೆ ಆತನಿಗೆ ಬೇಕಾದುದೆಲ್ಲ ಇತ್ತು. ಈ ಬಗೆಯ ಜೀವನಕ್ಕೆ ತನ್ನನ್ನು ತಾನೇ ತಂದುಕೊಂಡನಾಗುವುದೆಂದೂ ತಿಳಿದಿತ್ತು. ಆದುದರಿಂದ ಹೀಗೇಕೆ ಈ ಬಗೆಯ ಜೀವನಕ್ಕಾಗಿ ತನ್ನೊಳಗೇ ತಾಪಪಟ್ಟರು ಎಂದು ಆಶ್ಚರ್ಯ ವಾಗುತ್ತದೆ. ಈ ಬಗೆಯನ್ನು ಆರಿಸಿಕೊಂಡರು. ಇದರಿಂದ ಬರುವ ಎಲ್ಲ ರೀತಿಯನ್ನೂ ಗತಿಯನ್ನೂ ಸುಲಭವಾಗಿ ಊಹಿಸಿಕೊಳ್ಳಬಹುದಿತ್ತು. ಈ ಸ್ಥಿತಿಯನ್ನು ಯಾರೂ ಅರಿಯಬಹುದು. ಆದರೆ ವಾಸ್ತವವಾಗಿ, ಈ ಕಷ್ಟಗಳು ಹೇಗೆ ಬರುವುವು ಎಂಬುದನ್ನು ಅರಿತಿದ್ದರೂ ಇವಕ್ಕೆ ಈಡಾಗಿ ದಿನವೂ ಅನುಭವಿಸಬೇಕಾಗಿ ಬರುವವರೆಗೂ ಇವುಗಳ ಮೊನೆ ಚುಚ್ಚಿ ಕಾಣುವುದಿಲ್ಲ. ಲೋಕ ಕಠಿಣ. ಎಂಥ ಯೋಗ್ಯರನ್ನೂ ಹೀನಾಯಕ್ಕೆ ಈಡುಮಾಡುತ್ತದೆ. ಆವನು ಬೆಳವಣಿಗೆಯ ಮಜಲಲ್ಲಿರಲು ಸಂತನಾದರೂ ಇವು ವಿಜೃಂಭಿಸಿದಾಗ ವಿಶೇಷವಾಗಿ ಒಳಗೇ ನೋಯುತ್ತಾನೆ. ಇಂದಿಲ್ಲ ನಾಳೆಗೆ 'ಬಾ' ಎಂದು ಯಾರೋ ಹೇಳಿ ದಿನವೂ ಇದನ್ನೇ ಅನುಭವಿಸ ಬೇಕಾದಾಗ ಗಾಣ ತಿರುಗುವ ಎತ್ತಿನಂತೆ, ಬಳಲಬೇಕಾದ ಪರಿಸ್ಥಿತಿ ದುರ್ಭರವೇ. ನಾಳೆ ಪುನಃ ಅಲ್ಲಿಗೆ ಹೀಗೇ ಹೋಗಬೇಕು. ದೇಹವನ್ನು ಪೊರೆಯುವುದಕ್ಕೆ ಬಾಗಬೇಕು. ಪ್ರತಿಸಲ ಹೋದಾಗಲೂ, ಚೆನ್ನಾಗಿ ಮಾತಾಡಬೇಕು. ಉಪಕಾರಿ ಧನಿ ಎಂಬವನನ್ನು ಎಂದಿಗಿಂತ ಹೆಚ್ಚಾಗಿ ಹೊಗಳಬೇಕು. 'ಇಲ್ಲ ಹೋಗು' ಎಂದು ಒಂದು ಕೆಟ್ಟ ದಿನದಲ್ಲಿ ನುಡಿ ದರೆ ಆ ನೋವು ಕಷ್ಟ. ಈ ಸ್ಥಿತಿಯನ್ನು ಹಲ್ಲಿಯನ್ನು ತಿಂದ ಇಲಿಯಂತೆ ಎಂದು ಬಳಲುವಂತಾಯಿತು.

ಇನ್ನೊಂದು ಸಮಯದಲ್ಲಿ ದೇಶದ ಮತ್ತೊಂದು ಭಾಗಕ್ಕೆ ಹೋಗಿದ್ದಾರೆ. ಅಲ್ಲಿಗೆ ಹೋಗಬೇಕಾಗಿ ಬಂತಲ್ಲ ಎಂದು ತಾಪಪಟ್ಟಿದ್ದಾರೆ. ನೀನು ಕಾಪಾಡಲಾರದ ಜೀವನನ್ನು, ಓ ನನ್ನ ದೊರೆಯೆ, ನೀನೇಕೆ ಹುಟ್ಟಿಸಿದೆ, ಇಲ್ಲಿ ನನ್ನ ಕುಲದವರು ಬಂಧುವರ್ಗದವರು ಒಬ್ಬರಿಲ್ಲ. ಇದು ಯಾವ ಸ್ಥಳವೊ, ಯೋಗ್ಯತೆಯನ್ನು ಅರಿಯಬಲ್ಲ, ಅದನ್ನು ಪುರಸ್ಕರಿಸುವ ರಾಜ ನೆಂಬವನು ಇಲ್ಲ. ನನ್ನ ಮನಸ್ಸು ನೆಮ್ಮದಿಯಾಗುವುದರಲ್ಲಿಯೂ ಗೆಲವು ಕಾಣದಿದೆ. ಕರುಣೆ ತೋರಿಸಿದವರಿಗೆ ಪ್ರತಿಯಾಗಿ ಕೊಡಲು ನನ್ನಲ್ಲಿ

ಬಂಗಾರವಿಲ್ಲ; ವಜ್ರವಿಲ್ಲ. ಇನ್ನು ಹೆಚ್ಚು ಕಾಲ ಇಲ್ಲಿರುವುದು ಯುಕ್ತವಲ್ಲ. ಈ ನಾಡು ತನ್ನದಲ್ಲ. ಯಾವುದೋ ಪರಕೀಯ. ಇಷ್ಟು ಕಷ್ಟವನ್ನೆಲ್ಲ ತಡೆಯಲು ತನ್ನ ದೇಹಕ್ಕೆ ಶಕ್ಯವಿಲ್ಲ ಎನ್ನಿಸಿದೆ. ಈ ಸ್ಥಿತಿಯನ್ನು ಕಂಡರೆ ಸ್ವಲ್ಪ ವಯಸ್ಸಾದಮೇಲೆಯೇ ಈ ಸ್ಥಿತಿ ಬಂದಿರಬೇಕೆನ್ನಿಸುತ್ತದೆ. ಯಾವ ಸ್ಥಳದಲ್ಲಿ ಯಾರನ್ನು ಕುರಿತು ಹೇಳುತ್ತಿದ್ದಾರೆಂಬುದು ತಿಳಿದಿದ್ದರಾದೀತು. ಇಂಥವನ್ನು ಅವರದಲ್ಲವೆಂದು ತಿರಸ್ಕರಿಸುವುದು ಸುಲಭ. ಆದರೆ ಎಷ್ಟನ್ನು ತಿರಸ್ಕರಿಸುವುದು ? ಜೀವನದಲ್ಲಿ ಉತ್ಸಾಹವಿಲ್ಲವೆಂದು ಹೇಳುತ್ತಾರೆ. ತನ್ನ ಅಂಗ ಅವಯುವಗಳು ದೃಢವಿಲ್ಲ ಎನ್ನುತ್ತಾರೆ. ತಾನು ಇಷ್ಟು ದುಃಖಕ್ಕೆಲ್ಲ ಏಕೆ ಈಡಾದೆನೆಂಬುದು ಪುರಂದರ ವಿಠಲನಿಗೊಬ್ಬನಿಗೆ ಗೊತ್ತು. ಹೆರರ ಮನೆಯ ಕಾಯಬೇಕಾದರೆ ತುಂಬ ಕಷ್ಟ. ನಾಯಿಯಂತೆ ಕಾಯಬೇಕು. ನ್ಯಾಯವಾಗಿ ಏನು ಮಾಡಬೇಕಿತ್ತು; ಬೆಳಿಗ್ಗೆ ಎದ್ದು ನಿತ್ಯಕರ್ಮಗಳನ್ನು ಮಾಡಿ ದೇವರಿಗೆ ಪೂಜೆ ಸಲ್ಲಿಸಬೇಕು. ಈಗಲೇ ಬೇರೊಬ್ಬರ ಮನೆಗೆ ಹೋಗಿ ಅವರ ಬಾಗಿಲ ಕಾಯಬೇಕು. "ಕಲ್ಲು ಕರಗೀತು. ಹುರಿಗಡಲೆಯನ್ನರೆದು ತೈಲವನು ತೆಗೆದಾದರೂ ಉಣಲುಬಹುದು. ಬಲ್ಲಿದರ, ಶಕ್ತರ ಮನಸ್ಸು ಮೆಚ್ಚಿಸಲರಿಯೆನಯ್ಯ. ಬಾಯಲ್ಲಿನ ಎಲ್ಲ ಹಲ್ಲನ್ನೂ ಕಿರಿಯುತ್ತ ಹಂಬಲಿಸಿ ಬಾಯ್ಬಿಡುತ್ತಲಿದ್ದೇನೆ. ಅಂತ್ಯವನು ನಾನು ಕಾಣೆ, ಆದರಿಸುವವರಿಲ್ಲ. ಚಿಂತೆಯ ಬಿಡಿಸಯ್ಯ ಪುರಂದರ ವಿಠಲ, ಕಾಯಲಾರೆನೆ ಕೃಷ್ಣ ಕಂಡವರ ಬಾಗಿಲನು" ಎಂದು ಕಷ್ಟಪಡುತ್ತಾರೆ.

ಇದರಿಂದ ಧಾತುಗೆಡದೆ, ಧೈರ್ಯ ಕೆಡದೆ ಅವರು ಮುಂದುವರೆಯುತ್ತಾರೆ. ನಿರಂತರವಾಗಿ ತನ್ನನ್ನು ಯೋಗ್ಯನಾದ ಸೇವಕನನ್ನಾಗಿ ಮಾಡಿಕೊ ಎಂದು ತನ್ನ ದೇವರನ್ನು ಪ್ರಾರ್ಥಿಸುತ್ತಾರೆ. ಕೆಟ್ಟ ಯೋಚನೆಗಳಿಂದ ತಮ್ಮನ್ನು ಆ ದೇವರು ಬಿಡುಗಡೆ ಮಾಡುತ್ತಾನೆಂದುಕೊಂಡಾಗ ರಕ್ಷಣೆಯ ನೆಮ್ಮಗೆ ಸಿಕ್ಕುತ್ತದೆ. ತನ್ನ ತಲೆಯ ಮೇಲೆ ಕೈಯಿಟ್ಟು ತನ್ನನ್ನು ಭಯದಿಂದ ಅವನು ಬಿಡುಗಡೆ ಮಾಡುತ್ತಾನೆ ಎಂಬುದು ಅವರ ನಂಬಿಕೆ. ಯಾವ ದೇವರನ್ನು ನಂಬಿದ್ದಾನೊ ಆತನ ಉಪೇಕ್ಷೆಯನ್ನು, ಉದಾಸೀನವನ್ನು ಮಾತ್ರ ಭಕ್ತನು ಸಹಿಸಲಾರ. ಏಕೆಂದರೆ ಅದೇ ದೇವರಲ್ಲಿ ನಿಜ ಭಕ್ತಿಯ ವರವನ್ನು ಬೇಡಿಕೊಳ್ಳುತ್ತಿದ್ದಾನೆಯಲ್ಲವೇ ? ಈ ಮಟ್ಟದಲ್ಲಿ ತನ್ನ ಒಡೆಯ

ನಿಗೆ ತನ್ನನ್ನು ನಿವೇದಿಸಿಕೊಳ್ಳುತ್ತಿರುವ ಸಂಪೂರ್ಣ ಮನಸ್ಸಿನಲ್ಲಿ ಅಸತ್ಯದ ಕಾಲವನ್ನೂ ಹೊರತೋರಿಕೆಯ ಕಾಲವನ್ನೂ ದಾಟಿಸಿದ್ದೇನೆ ಎಂದು ಹೇಳ ಬಲ್ಲವನಾಗಿದ್ದಾನೆ. ಈಗ ಅವನಲ್ಲಿ ಡೊಂಕಿಲ್ಲ. ಅತ್ಯಂತ ಚೆಲುವಾದ ಒಂದು ಪದವಿದೆ;—ಈ ಸನ್ನಿವೇಶವನ್ನು ಚಿತ್ರಿಸುವಂಥದು. ಪ್ರಭುವಿನ ಹೆಸರನ್ನೆತ್ತಿ ಅವರು ಸ್ತೋತ್ರ ಗೀತವನ್ನು ಹಾಡುತ್ತಿದ್ದಾರೆ. ನಾನು ಬಾಗಿ ಡೊಂಕಾಗಿದ್ದರೇನು. ಓ ವಿಠಲ ನಿನ್ನ ಹೆಸರು ಡೊಂಕೆ ಎಂಬುದು ಅದು.

ನಾ ಡೊಂಕಾದರೇನು ನಿನ್ನ ನಾಮ ಡೊಂಕೆ ವಿಠಲ
ನದಿಯು ಡೊಂಕು; ಆದರೇನು ? ಉದಕ ಡೊಂಕೆ ವಿಠಲ
ಕಬ್ಬು ಡೊಂಕಾದರೇನು ? ಸಿಹಿ ಡೊಂಕೆ ವಿಠಲ
ಪುಷ್ಪ ಡೊಂಕು; ಆದರೇನು ? ಪರಿಮಳ ಡೊಂಕೆ ವಿಠಲ
ಆಕಳು ಡೊಂಕು; ಆದರೇನು ? ಹಾಲು ಡೊಂಕೆ ವಿಠಲ
ಬಿಲ್ಲು ಡೊಂಕಾದರೇನು ? ಬಾಣ ಡೊಂಕೆ ವಿಠಲ
ನಾನು ಹೊಲೆಯನಾದರೆ ನಿನ್ನ ನಾಮ ಹೊಲೆಯೆ ? ವಿಠಲ
ಅಜ್ಞನಾದರೇನು ಕಾಯೊ ಸುಜ್ಞ ಪುರಂದರ ವಿಠಲ ||

ಎಂಬ ಪದ್ಯದಲ್ಲಿನ ಭಾವ ಈ ಸ್ಥಿತಿಯನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸು ತ್ತದೆ. ಈ ಪದ್ಯವನ್ನು ನಮ್ಮ ಕಾಲದ ಕವಿ ಬೇಂದ್ರೆಯವರು ತೆಗೆದು ಕೊಂಡು ಇನ್ನೊಂದು ಪ್ರಸಂಗಕ್ಕೆ ಬಹಳ ಹೃದಯಂಗಮವಾಗಿ ಬಳಸಿ ಕೊಂಡಿದ್ದಾರೆ. ಪ್ರತಿಯೊಂದು ಸಂಗತಿಯೂ ನೇರವಾಗಿ ಹೃದಯವನ್ನು ಹೊಗುವಂಥ ಯಾವುದನ್ನು ಹೇಳಬೇಕೆಂದು ದಾಸರು ತೊಡಗಿದ್ದಾರೂ ಅದನ್ನು ತಕ್ಷಣ ಸ್ಥಾಪಿಸುವ ಲಕ್ಷಣಶಕ್ತಿ ಇಲ್ಲಿನ ಪ್ರತಿಯೊಂದು ಸಂಗತಿ ಯಲ್ಲೂ ಇದೆ.

ಅವರಿಗೆ ಗೊತ್ತು—ಗುಣದಲ್ಲಿ ನಿಲವಿನಲ್ಲಿ ತನ್ನ ಮನಸ್ಸಿನಲ್ಲಿ ತಿಳಿ, ವಿಶದತೆ ಇಲ್ಲವಾದರೆ ತನಗೆ ಮುಕ್ತಿ ದೊರಕದು ಎಂಬುದು. ಇವು ನಿಷ್ಕ್ರಿಯ ಸಕ್ರಿಯವಲ್ಲವೆಂಬುದು, ಸುಮ್ಮನೆ ಬಾಹೋದೆ ಮುಕುತಿ ನಮ್ಮ| ಚೆನ್ನಾದಿ ಕೇಶವನ ದಯವಾಗೊ ತನಕ। ಅಷ್ಟು ಸುಲಭವಲ್ಲ ಭಕ್ತಿ. ಅವನಿಗೆ ದಯೆ

ಬರಬೇಕು. ನಮಗದು ದೊರೆಯಬೇಕು. ಉಪನಿಷತ್ತಿನ ವಾಕ್ಯದಂತೆ ಕೂಡ "ಯಮೇವೈಷ ವೃಣುತೇ ತೇನ ಲಭ್ಯಃ" ಎಂಬ ಮಾತಿದೆ. ಭಕ್ತಿ ಪಂಥದಲ್ಲಿ ಇದನ್ನು ಉಭಯ ವೈಷ್ಣವ ಪಂಥಗಳವರೂ ಹೇಗೆ ಬಳಸಿದ್ದಾರೆಂಬುದೂ ಭಗವಂತನ ಕೃಪೆ ಲೋಕದ ಎಲ್ಲಕ್ಕಿಂತ ಹೆಚ್ಚಾಗಿ ಹೇಗೆ ಪರವಾಗತ್ಯ ಎಂಬುದೂ ಕಾಣಿಸುತ್ತದೆ. ವ್ಯಕ್ತಿಯ ಸರ್ವ ಪಾಪಗಳೂ ಸುಟ್ಟುಹೋದಾವು. ತಿಳಿವಳಿಕೆ ವಿವೇಕಗಳ ಬೆಳಕಿನಲ್ಲಿ ನಡೆದಾಡಬೇಕು. ಪುರಂದರ ವಿಠಲನು ತನ್ನ ಕೃಪೆಯನ್ನು ಅನುಗ್ರಹಿಸಬೇಕಾದರೆ ಚಿತ್ತವನ್ನು ವಿಕಾಸಗೊಳಿಸಿ ಯಾವ ಯಾವುದು ಕೆರಳಿಸುತ್ತದೆ, ಅಂಥವುಗಳಿಂದ ಬಿಡುಗಡೆ ಹೊಂದಬೇಕು. ಸಕ್ರಿಯವಾದ ಲಕ್ಷಣಗಳನ್ನೂ ಹೇಳುತ್ತಾರೆ. ವ್ಯಕ್ತಿಯ ಸಮಸ್ತ ಜೀವನವೂ ದೇವರಿಗೆ ಮಾಡುವ ಒಂದು ನಮಸ್ಕಾರವಾಗಿ ನಮಿಸಬೇಕು. ಶಿವನನ್ನು ದೇವರಾಗಿ ಒಪ್ಪುವ ಒಂದು ಪದ್ಯವಿದೆ. ನಮ್ಮಲ್ಲಿ ಅದಕ್ಕೆ ಪ್ರಾರ್ಥನೆ ಮಾಡುವಾಗ ಇಂಥದೇ ಒಂದು ಸ್ತೋತ್ರವಿದೆ.

ಆತ್ಮಾ ತ್ವಂ; ಗಿರಿಜಾ ಮತಿಃ ಪರಿಜನಃ ಪ್ರಾಣಾಃ; ಶರೀರಂ ಗೃಹಂ |
ಪೂಜಾ ತೇ ವಿಷಯೋಪಭೋಗರಚನಾ ; ನಿದ್ರಾ ಸಮಾಧಿಸ್ಥಿತಿಃ ||
ಸಂಚಾರಃ ಪದಯೋಃ ಪ್ರದಕ್ಷಿಣವಿಧೌ; ಸ್ತೋತ್ರಾಣಿ ಸರ್ವಾ ಗಿರಾ |
ಯದ್ಯತ್ ಕರ್ಮ ಕರೋಮಿ ತತ್ ತದಖಿಲಂ ಶಂಭೋ ತವಾರಾಧನಂ ||

ಶಿವ ಎಂಬುದಕ್ಕೆ ಪ್ರತಿಯಾಗಿ ವಿಷ್ಣು, ಹರಿ, ಎನ್ನಬಹುದು. ಗಿರಿಜೆಗೆ ಬದಲು ಲಕ್ಷ್ಮಿ ಎಂದಿಟ್ಟುಕೊಳ್ಳಬಹುದು. ಅಷ್ಟೇ ವ್ಯತ್ಯಾಸ. ಅರ್ಪಣೆ ದೇವರಿಗೆ. ಇದು ಸರ್ವವನ್ನೂ ಸಂಗ್ರಹಿಸಿ ನುಡಿದ ಅರ್ಪಣ. ಆದರೆ ಅತ್ಯುನ್ನತವಾದ ಪರಮ ಭಕ್ತ ವ್ಯಕ್ತಿಗಳಿಗೆ ಕೂಡ ಈ ಮಾತುಗಳನ್ನು ಹೇಳಿಕೊಳ್ಳಲು ಕಷ್ಟವಾಗುತ್ತದೆ. ನಾನು ಮಾಡುವ ಅಖಿಲ ಕರ್ಮವೂ ನಿನ್ನ ಆರಾಧನೆ ಎಂದು ಹೇಳಿ ಬದುಕನ್ನು ಬಾಳುವುದು ಎಂಥದಾಗಬೇಕು ಎಂಬುದನ್ನು ಕಲ್ಪಿಸಿಕೊಳ್ಳುವುದೂ ಕೂಡ ಕಷ್ಟ. ಇಂಥದನ್ನು ಹೇಳಲು ಎಷ್ಟು ಧೈರ್ಯ ಬೇಕು. ಇದನ್ನು ಮಾಡಲು ಶಕ್ಯವಾದರೆ ಹೆಚ್ಚಾಗಿ ಮನುಷ್ಯ ಇನ್ನೇನಾಗಿರಬಹುದು. ಇನ್ನೇನನ್ನು ಮಾಡಬಹುದು. ಅಂಥ ಬದುಕಿನ ಸತ್ವ ಅತ್ಯಂತ ಹೆಚ್ಚಿನ ವಿಕಾಸಗೊಂಡರೆ ಅದೇ ಸಿದ್ಧಿಗೊಂಡ ಜೀವದ ಲಕ್ಷಣ.

ದಾಸರು ಹೇಳುತ್ತಾರೆ ; ಏನೇನಿದೆಯೊ ತಮ್ಮೆಲ್ಲ ಏನೆಲ್ಲವೂ ಅದೆಲ್ಲ ಹರಿಸೇವೆ ಎಂದುಕೊಳ್ಳಿ. ಅದರ ಅಂಶವಾಗಿಲ್ಲದ್ದು ಯಾವುದೂ ಇಲ್ಲ. ಸಕಲವೆಲ್ಲವೂ ಹರಿಸೇವೆ ಎನ್ನಿ ರುಕುಮಿಣಿಯರಸ ವಿಠಲನಲ್ಲದಿಲ್ಲವೆನ್ನಿ. ನುಡಿದುದೆಲ್ಲ ನಾರಾಯಣನ ಸ್ತೋತ್ರ. ನಡೆಯಲ್ಲಿ ದೇವರೆಡೆಗೆ, ಮಾಡುವ ಯಾತ್ರೆ ಕೊಡುವುದೆಲ್ಲ ಕಾಮನಜನಕನಿಗೆ ಕೊಟ್ಟದ್ದು. ಎಡೆಯ ಅನ್ನವು ಹರಿಯ ಪ್ರಸಾದ. ಹೊಸ ವಸ್ತ್ರವುಡುವಲ್ಲಿ ಹರಿಯ ಬೆಳ್ಳುಡೆ. ಕುಸುಮ ಸುಪುಷ್ಪ ಪರಿಮಳ ಶ್ರೀಕೃಷ್ಣನಿಗೆ, ಎಸೆವ ಆಭರಣ. ಯಶೋದಾನಂದ ನಿಗೆ, ಶಶಿಮುಖಿಯರ ಕೂಟ ಸೊಬಗು ಗೋವಳನಿಗೆ ಆಟಪಾಟಗಳೆಲ್ಲ. ಅಂತರ್ಯಾಮಿಗೆ ನಮ್ಮಲ್ಲಿರುವ ನಯುವಾದ ಎಲ್ಲ........ನಿದ್ರೆ, ಜಾಗರ, ಸಮಸ್ತ ಭಾಗ್ಯ, ಭೀಕರ ದಾರಿದ್ರ್ಯ, ಅಣುರೇಣು ತೃಣ ಕಾಷ್ಠ ಅವನ ಅಭಿವ್ಯಂಜನೆ. ಅತಿ ಸಣ್ಣ ಪದಾರ್ಥ, ಅವನದೇ ರೂಪ. ಪರಿಪೂರ್ಣನು ಅವನು. ಎಣಿಸಲಾರದ ಅನಂತ ಮಹಿಮನು. ಸೆಣಸುವ ರಕ್ಕಸರ ಶಿರವ ಚೆಂಡಾಡುವವನು. ಪುರಂದರ ವಿಠಲನು! ಅವನು ಪ್ರಣವ ಗೋಚರ ಎನ್ನುತ್ತಾರೆ.

ತನ್ನ ದೇವರಿಗೆ ಇಷ್ಟಪೂರ್ತಿಯಾಗಿ ತನ್ನ ಜೀವ ಶ್ರುತಿಗೊಳ್ಳು ವಂತಾದರೆ ಆಗಮಾತ್ರ ಮನಸ್ಸು ಒಡೆಯನಾದ ದೇವರನ್ನು ಸಾಕ್ಷಾತ್ಕರಿಸಿ ಕೊಳ್ಳಬಹುದು. ನಾನು ಧನ್ಯ ಈಗ ಜಗದೊಳು ಎಂದುಕೊಳ್ಳಬಹುದು ಎನ್ನುತ್ತಾರೆ. ತನಗೆ " ಒಂದು ಯಂತ್ರ ದೊರಕಿತು. ಅದು ಯೋಗ ಯಂತ್ರ. ಯಂತ್ರವಾಹಕ ನಾರಾಯಣನ ಅಂತರಂಗದಿ ನೆನೆಸುವಂಥ ಯಂತ್ರ ದೊರಕಿತು" ಇದಕ್ಕೆ ಚ್ಯುತಿಯಿಲ್ಲ. ಇದು ಆಸೆಯಿಂದ ಮೂಡದು. ಕ್ಲೇಶಪಟ್ಟು ತಿರುಗದು. ಈ ನಾಮ ಶಾಶ್ವತವಾದುದು. ದಿವ್ಯವಾದುದು. ಇದನ್ನು ಹಾಸಬಹುದು: ಹೊದೆಯಬಹುದು. ಸೂಸಿ ಒಡಲ ತುಂಬ ಬಹುದು. ದಾಸರನ್ನು ಬಿಡದೆ ಪೊರೆಯುತ್ತದೆ. ಒಂದು ಬಾರಿ ಸ್ಮರಿಸಿದರೆ ಸಾಕು. ಒಂದು ಕೋಟಿ ಯಜ್ಞಫಲ ದೊರೆಯುತ್ತದೆ ಎನ್ನುತ್ತಾರೆ.

ಇನ್ನು ಹಲವು ಪದ್ಯಗಳು ತನಗೆ ಬಂದ ಸದ್ಗತಿಯನ್ನೂ ಸಿದ್ಧಿಯ ಭಾವ ವನ್ನೂ ವರ್ಣಿಸುತ್ತವೆ. ಹಿಂದೆ ಎಷ್ಟೋ ವೇಳೆ ಅನೇಕ ಬಗೆಯ ಭಯ ಗಳು ಉಂಟಾಗುತ್ತಿದ್ದವು. ಈಗ ಅರಿತಿದ್ದಾರೆ: ಭಯಕ್ಕೆ ಕಾರಣವಿಲ್ಲ,

ಅಗತ್ಯವಿಲ್ಲ ಎಂದು. ದೇವರ ಸಮಗ್ರ ರಕ್ಷಣೆ ತನಗಿದೆ. ತನ್ನಲ್ಲಿದ್ದುದಕ್ಕೆ ತೃಪ್ತಿಪಟ್ಟುಕೊಂಡು ತನ್ನ ಬಾಳನ್ನು ನಿಯಮಿಸಿಕೊಂಡಿದ್ದೇನೆ ಎಂದು ಅವರು ಅರಿತಿದ್ದಾರೆ. ಸಂದೇಹಗಳು ಬಂದರೂ 'ದೇವರೇ, ಬೆಳಕು ಹಾಯಿಸು' ಎಂದಿದ್ದಾರೆ. ಹೊಗಳಿಕೆಯೊ, ತೆಗಳಿಕೆಯೊ ಎಲ್ಲವನ್ನೂ ತಾಳಿಕೊಳ್ಳಲು ಕಲಿತಿದ್ದಾರೆ. ನೀನು ಗೋವಿಂದನಿಗೆ ಸೇರಿದವನು ಎಂದುಕೊ. ಎಲ್ಲ ತಾಪತ್ರಯಗಳೂ ಚೆದರಿಹೋಗುತ್ತವೆ—ಎಂದು ತಮಗೆ ತಾವೇ ಹೇಳಿಕೊಂಡಿದ್ದಾರೆ. ಅದು ಆದಮೇಲೆ ತಾನು ಚಿಂತಿಸಬೇಕಾದ್ದು ಹೆಚ್ಚಾಗಿ ಇನ್ನೇನಿದೆ? ಉಳಿದಿದ್ದೇನಿದ್ದರೇನು? ಇಲ್ಲದಿದ್ದರೇನು? ವ್ಯವಹಾರ ಪ್ರಪಂಚದ ಯಾವ ಸಂಗತಿ ತನ್ನನ್ನು ಕಾಡಿಸೀತು! "ಇಂಥಿಂಥದೆಲ್ಲಾನೂ ಬರಲಿ, ನಿ | ಶ್ಚಿಂತೆಂಬುದು ದೃಢವಾಗಿರಲಿ ||" ಎಂಬುದು ಈಗ ಪಲ್ಲವಿ. ಒಡೆಯನ ಪ್ರೀತಿಗೆ ಹೋಲಿಸಿದರೆ ಆತನ ಮನಸ್ಸನ್ನು ಹಿಂಸೆಗೊಳಿಸುವ ಅಥವಾ ಕೆರಳಿಸುವ ಯಾವುದೂ ಕ್ಷುದ್ರ. ಬಡತನ ಕಡೆತನಕ ಇರಲಿ | ಒಡವೆ ವಸ್ತ್ರ ಹಾಳಾಗಿ ಹೋಗಲಿ | ನಡೆಯುವ ಹಾದಿ ಹಿಡಿಯದೆ ಹೋಗಲಿ | ಅಡವಿಯಲಿ ಗಿಡಗಳು ಸಿಗಧಾಂಗಾಗಲಿ | ಮುಂದಿನ ಒಂದು ಮಾತು ಅಸಂಭಾವ್ಯ, ದುರ್ಭರ, ನಿಜವಾಗಿ ಇದು ಪರೀಕ್ಷೆ. ಮನುಷ್ಯರು ಸಾಮಾನ್ಯವಾಗಿ ಇದನ್ನು ತಾಳಲಾರರು. ಗಂಡಸುತನ ನನಗಿಲ್ಲಧಾಂಗಾಗಲಿ | ಹೆಂಡಿರು ಮಕ್ಕಳು ನನ್ನ ಬಿಟ್ಟುಹೋಗಲಿ | ಕುಂಡೆ ಮುಂಡೆ ಮೇಲೆ ಸಾಲಗಾರರು ಒದೆಯಲಿ | ಭಂಡು ಮಾಡಿ ಜನರೆಲ್ಲ ನಗಲಿ || ವಾಸಿ ಪಂಥ ನಡೆಯದೆಹೋಗಲಿ | ಶ್ರೀ ಪುರಂದರ ವಿಠಲರಾಯನ ದಾಸತ್ವ ಶಾಶ್ವತ ವಾಗಿರಲಿ ಎನ್ನುತ್ತಾರೆ. ಈ ಪರಿಸ್ಥಿತಿ, ಹೀಗೆ ಅವರಿಗೆ ನೆಮ್ಮದಿಯನ್ನೂ ಸಂತೃಪ್ತಿಯನ್ನೂ ತಂದಿರುತ್ತದೆ. ಕೆಲವು ಸಮಯಗಳಲ್ಲಿ ದಾಸರು ತಾವು ಲೋಕದ ಹಂಗುಗಳಿಗೆ, ಚಿಂತೆಗಳಿಗೆ ಮೇಲ್ಪಟ್ಟು ನಿಂತಿದ್ದಾರೆ. ಸಮಸ್ತ ಪ್ರಪಂಚವೂ ಅವರಿಗೆ ಸುತರಾಂ ಬೆಲೆ ಇಲ್ಲದಂತೆ ಕಾಣುತ್ತದೆ. ಬಹು ಪ್ರಖ್ಯಾತವಾದ ಈ ಇನ್ನೊಂದು ಹಾಡು :

ನಾ ನಿನ್ನ ಧ್ಯಾನದಲ್ಲಿರಲು | ಹೀನ ಮಾನವರೇನು ಮಾಡುವರು | (ಹೀನ ಮಾನವರಿಂದ ಏನಾಗಬಹುದೋ!) ಮತ್ಸರಿಸಿದರೆ ಅವರೇನು ಮಾಡ ಲಾಪರು? ಅಚ್ಯುತ ನಿನ್ನಯ ದಯೆ ಇರಲು, ಕಿಚ್ಚಿಗೆ ಇರುವೆ ಮುತ್ತುವುದೆ ||

*

ದಾಳಿಲಿ ಕುದುರೆ, ವೈಹಾಳಿಯ ತಿರುಗಲು | ಧೂಳು ರವಿಗೆ ತಾ ಮುಸುಕುವುದೆ | ತಾಳಿದವರಿಗೆ ವಿರುದ್ಧ ಲೋಕದಲುಂಟೆ ! ಗಾಳಿಗೆ ಗಿರಿ ನಡುಗುವುದೆ ರಂಗಯ್ಯ || ಕನ್ನಡಿಯೊಳಗಿನ ಗಂಟು ಕಂಡು ಕಳ್ಳ | ಕನ್ನವಿಕ್ಕಲು ಅದು ವಶವಾಗುವುದೆ | ಚೆನ್ನ ಪುರಂದರ ವಿಠಲ ನನ್ನ ನಂಬಿಕೆ ನಿನ್ನ ಮೇಲಿರಲು ಚಿನ್ನಕ್ಕೆ ಪುಟವಿಟ್ಟಂತಾಗುವುದು ||

ಮನಸ್ಸಿನಲ್ಲಿ ಶಾಂತಿ ನೆಲಸಿದರೆ ಇತರ ಎಲ್ಲ ರಾಗಾದಿಗಳೂ ಅಡಗಿದಂತೆಯೇ. ಪರಮ ಶಾಂತಿಯಲ್ಲಿ ಎಂದರೆ ಸತ್ಯದ ಅರ್ಥಗ್ರಹಣವಾದಾಗ ಎಲ್ಲ ಸಂಶಯಗಳೂ ಮಾಯವಾಗುವುದು ಎನ್ನುತ್ತಾರೆ. ಅವನ ಮನಸ್ಸಿನಲ್ಲಿ ಮತ್ತು ಸಮಸ್ತ ವ್ಯಾಪಾರಗಳಲ್ಲಿ ಕಷ್ಟ ಬಿಡುವುದು, ಕೃಷ್ಣ ಅಥವಾ ವಿಠಲನೊಬ್ಬನಿಗೆ ಅದು ತೆತ್ತುಕೊಂಡುದು. ಆತನ ಜೀವವನ್ನು ಆನಂದ ತುಂಬಿಕೊಳ್ಳುತ್ತದೆ. ತನ್ನ ದೇವರು ನಿರಂತರವಾಗಿ ತನ್ನೊಳಗೆ ನೆಲಸಿದ್ದಾನೆಂದು ಭಾವನೆ ಬರುತ್ತದೆ. ತಾನು ಕೃತಾರ್ಥನಾದೆನೆಂಬ ಭಾವವುಂಟಾಗುತ್ತದೆ. ಇಷ್ಟು ವರ್ಷಗಳೂ ಅದನ್ನೇ ಆತನು ಹುಡುಕುತ್ತಿದ್ದುದು. ಅನಿರ್ವಚನೀಯವಾದ ಒಂದು ಸೌಖ್ಯವನ್ನು ಈಗ ಪಡೆಯುತ್ತಾನೆ. ಎಚ್ಚರವಾಗಿರಲಿ ನಿದ್ರಿಸುತ್ತಿರಲಿ ಆತನ ಸ್ಥಿತಿಯಲ್ಲಿ ಈ ಭಾವ, ನಿಷ್ಠವಾಗಿರುತ್ತದೆ. 'ಕಂಡೆ ನಾ ಕನಸಿನಲಿ ಗೋವಿಂದನ | ಕನಕ ರತ್ನದ ಖಣಿಯ; ನಂದನ–ಕಂದ ಮುಕುಂದನ ಚರಣವಾ ಎಂಬುದು ಸಾಮಾನ್ಯವಾಗುತ್ತದೆ. ಮುಂದಿನ ಪದ್ಯಗಳಲ್ಲಿಯೂ ಕೃಷ್ಣನ ಚಿತ್ರ, ಅವನ ಉಡೆ, ಅವನು ಧರಿಸಿದ ಒಡವೆಗಳು, ಕಾಲಂದಿಗೆ, ಕಾಲುಗೆಜ್ಜೆ, ಉಟ್ಟ ಪೀತಾಂಬರ, ಕಾಂಚನದಾಮ, ತೊಟ್ಟ ಮುತ್ತಿನ ಹಾರ ಕೌಸ್ತುಭ, ಕಟ್ಟಿದ ವೈಜಯಂತಿ, ತುಳಸಿ ಮಾಲೆ, ಇಟ್ಟ ದ್ವಾದಶನಾಮ (ಇದು ಮಾಧ್ವರ ವಿಶೇಷ ಲಕ್ಷಣವಾದ್ದರಿಂದ ಕೃಷ್ಣ ಹಾಗೆ ಕಾಣಬೇಕು. ಶ್ರೀವೈಷ್ಣವರಾದರೆ ನಾಮಗಳನ್ನೂ, ಶೈವರಾದರೆ (ಶಿವನಿಗೆ) ವಿಭೂತಿಯನ್ನೂ ಹಾಕಿದಂತೆ ಅವರವರ ದೇವರು ಕಾಣಬೇಕು.*) ಕಿರುಬೆರಳಲ್ಲಿ ಮುದ್ರೆ ಉಂಗುರವಿದೆಯಂತೆ, ಮುಂಗೈಯಲ್ಲಿ ಕಂಕಣ; ಬಣ್ಣದ ತುಟಿ, ಸುಲಿಪಲ್ಲು, ಸಣ್ಣ

* ಜೈನ ಪುರಾಣಗಳಲ್ಲಿ ಕೃಷ್ಣ ವಾಸುದೇವ. ಅವರ ಶಲಾಕಾಪುರುಷರಲ್ಲಿ

ನಗೆಯವನು, ಸವಿಮಾತಿನ ನುಡಿ, ಹೊಳೆವ ಕಿರೀಟ; ನೋಡಿ, ಕಣ್ಣು ಮನ ದಣಿಯದು. ಎಂಥ ಚೆಲುವಾದ ಆಕೃತಿ! ಇಂಥ ಶೃಂಗಾರ ಮೂರುತಿ ಪುರಂದರ ವಿಠಲನ ಈ ಕಂಗಳಲಿ ಕಂಡೆ. ಭವ ಭಯ ಹಿಂಗಿತು ಎನ್ನುತ್ತಾರೆ. †

ಒಂದು ಕಾಲವಿತ್ತು. ಲೋಕದ ಸಮಸ್ತ ವಸ್ತುಗಳನ್ನು ಆಸೆಗಳನ್ನು ತೊರೆದಿದ್ದರೂ ಸಾಧನೆಯ ದಾರಿಗೆ ತನ್ನನ್ನು ಮುಡಿಪು ಮಾಡಿಕೊಂಡಿದ್ದರೂ ಗೂಡು ಕಾಣದ ಹಕ್ಕಿಯಂತೆ ತಾನಿದ್ದೇನೆಂದು ಹಂಬಲಿಸಿದ್ದರು ದಾಸರು. ಗೂಡು ಸೇರುವ ದಾರಿ ಕಣ್ಣಿಗೆ ಬೀಳುತ್ತಿಲ್ಲ ಎಂದು ಭಂಗ ಪಡೆದವರಂತೆ ದೇವರನ್ನು ಆಕ್ಷೇಪಣೆ ಮಾಡುತ್ತಿದ್ದರು. ಅದು ಸರಿಯೆ? ತನ್ನನ್ನು ಭೂಮಿಯ ಮೇಲೆ ಏಕೆ ಹುಟ್ಟಿಸಿದೆ! ಕರುಣಾಕರನೆಂಬ ಹೆಸರು ಹೇಗೆ ಸಂದೀತು ಇಂಥವನಿಗೆ. ಸಮಸ್ತ ಪಾಪಗಳನ್ನೂ ಕ್ಷಮಿಸುವವನು, ಪರಮ ಪಾಪಿಗಳಿಗೂ ದಿಕ್ಕಾಗಿ ನೆರವು ಕೊಡುವವನು ಎಂಬುದೆಲ್ಲಾ ಕಥೆ ಗಳೆನಿಸಿತ್ತು. ಅಂಥ ಕತೆಗಳು ನಿಜವೆ? ತನ್ನಂಥವರನ್ನು ಕೃಷ್ಣ ಕೈಬಿಟ್ಟ ಮೇಲೆ—ಕಂಡು ಕಂಡು ನೀ ಎನ್ನ ಕೈಬಿಡುವುದೇ? ಬೇರೆ ಗತಿಯಿಲ್ಲದವನು ನಾನು—ಎನ್ನುತ್ತಿದ್ದ ಕಾಲವಿತ್ತು. ಕ್ರಮ ಕ್ರಮವಾಗಿ ಕವಿದ ಮಂಜು ಚೆದರುತ್ತದೆ. ಸಂದೇಹಗಳು ಕಡಮೆಯಾಗುತ್ತವೆ. ಸಜ್ಜನರ ಮತ್ತು ಇತರ ಭಕ್ತರ ಸಹವಾಸ ದಾರಿಯನ್ನು ಸುಲಭ ಮಾಡುತ್ತದೆ. ಇತರರ ಚಾಡಿ, ಕ್ಷುದ್ರತೆ, ಹಲ್ಕಿರಿತ, ನಿರ್ಲಕ್ಷ್ಯ, ಉಪೇಕ್ಷೆ, ಬೇಕೆಂದು ಕೆಲವರು ತೋರಿಸುತ್ತಿದ್ದ ಅಮರ್ಯಾದೆ ಅಲ್ಲಿಂದ ಮುಂದೆ ಅವರಿಗೆ ತಟ್ಟುವುದಿಲ್ಲ. ಸ್ವಭಾವಕ್ಕೆ ಸೇರಿದ ಅಶುಚಿಗಳನ್ನು ತೊಳೆದುಕೊಂಡಿದ್ದಾರೆ. ತನ್ನ

---

ಒಬ್ಬ. ಪ್ರತಿಯೊಬ್ಬನೂ ಇವನನ್ನು ತಮ್ಮ ತಮ್ಮ ಮಾತುಗಳಿಗೆ, ಶಾಖೆಗಳಿಗೆ ದಾಖಲು ಮಾಡಿಕೊಂಡುಬಿಟ್ಟಿದ್ದಾರೆ.

† ಕೃಷ್ಣ ಮೂರ್ತಿ ಕಣ್ಣ ಮುಂದೆ ನಿಂತಿದ್ದಂತಿದೆ. ಎಂಬ ಇನ್ನೊಂದು ಹಾಡಿನಲ್ಲಿ ಒಂದೆರಡು ಸಣ್ಣ ವ್ಯತ್ಯಾಸಗಳು ಬಿಟ್ಟು ಉಳಿದೆಲ್ಲ ಹೀಗೆಯೇ ಇದೆ. ಇಂದು ನಾನೇನ ಸುಕೃತವ ಮಾಡಿದೆನೊ ಮಂಗಲ ಮಹಿಮ! ವೆಂಕಟ ಬಂದ ಮನೆಗೆ ಎಂಬುದರಲ್ಲಿಯೂ ಹೀಗೆಯೇ. ಇದನ್ನು ಕಾಣುವ ಪುಣ್ಯ ಮಾತಿಗೆ ಮೀರಿದುದು.

ದೇವರನ್ನು, ತನ್ನ ಪ್ರಭುವನ್ನು ಕುರಿತು ಮಾತ್ರ ಚಿಂತನೆಯಿದ್ದುದರಿಂದ ಅವನೊಡನೆ ಅಗ್ಗ ಮಾತಾಡಬಲ್ಲವರಾಗಿದ್ದರು. ವಾದಿಸಬಲ್ಲವರಾಗಿದ್ದರು. ಇತರ ಎಲ್ಲ ಚಿಂತನೆಗಳನ್ನೂ ಮನಸ್ಸಿನಿಂದ ಕಳೆಯಬಲ್ಲವರಾಗಿದ್ದರು. ಸೋಜಿಗದ (ಇನ್ನೊಂದು ಸಂಗತಿ) ಇನ್ನೊಂದು ಪ್ರಯೋಜನ ಲಭಿಸಿತು: ಅವರನ್ನು ನೋಡಿ ನಕ್ಕಿದ್ದವರು, ತೆಗಳಿದ್ದವರು, ಹಲ್ಲು ಕಿರಿದಿದ್ದವರು ಈಗ ಇವರನ್ನು ನಾಮಸ್ಮರಣೆಗೆ ಬಿಟ್ಟುಬಿಟ್ಟಂತಾಗಿತ್ತು. ಲೋಕ ಜೀವನದ ದೃಷ್ಟಿಯಿಂದ ಆತನನ್ನು ಮುರಿದಿದ್ದರು. ಉಸಿರು ಕಟ್ಟುವಂತೆ ಮಾಡಿದ್ದರು. ವ್ಯರ್ಥ ಭರವಸೆಗಳು ಸಲ್ಲವೆಂಬಂತೆ ಮಾಡಿದ್ದರು. ಅವರು ಮಾಡಿದುದೆಲ್ಲ ಅವನಿಗೆ ಪರೀಕ್ಷೆಯಾಯಿತು. ಅಂಥವರ ನಡವಳಿಕೆ ಬೇಸರ ಆಯಾಸ ತಂದಿತ್ತು. ಸ್ವಂತವಾದ ಎಲ್ಲ ಬಯಕೆಗಳನ್ನೂ ಕೋಪವನ್ನೂ ಅವರು ನಿವಾರಿಸಿದ್ದರು. ಬಹುವಾಗಿ ಕೀಟಲೆ ಪೀಡೆ ಮಾಡಿಯೇ ಆತನಿಗೆ ಸಿದ್ಧಿಯ ದಾರಿಯನ್ನು ತೋರಿಸಿದ್ದರು. ಆತನ ಬದುಕು ದೇವರಿಗೆ ಮುಡಿಪಾಗಿದ್ದುದರಿಂದ ಆತನನ್ನು ಕಟ್ಟಿಕೊಂಡು ತಮಗೇನಾಗಬೇಕಿದೆ ಎಂದುಕೊಂಡವರೇ ಆತನ ಗೋಜನ್ನು ಬಿಟ್ಟರು. ಭಕ್ತಿ ವಿಶ್ವಾಸಗಳಲ್ಲಿ ಆತನಿಗಿಂತ ದುರ್ಬಲರಾಗಿದ್ದವರಿಗೆ ಇದರಿಂದ ಏನಾಗಬಹುದಾಗಿತ್ತೋ ಅದಕ್ಕಿಂತ ವ್ಯತಿರಿಕ್ತವಾಯಿತು ಫಲ. ಬೆಂಕಿ, ಸೆರೆ, ದೇಹಕ್ಕೆ (ಬರುವ) ಕ್ಷತಿ ಭೀತಿ ಕಾರಣವಲ್ಲವೆಂದು ಅವರು ಕಂಡರು. ಹಾನಿಗಾಗಲಿ, ವಿಷಕ್ಕಾಗಲಿ, ಖಡ್ಗದ ಮೊನೆಯನ್ನು ಕಂಡಾಗಲಿ ಅವರಿಗೆ ಹೆದರಿಕೆಯಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಭಯಪಡೆಯಬೇಕಾದುದು ಪರರ ಹಣ, ಹೆರರ ಹೆಣ್ಣು; ಒಂದಕ್ಕಾಗಿ ಕೌರವನು ನಾಶವಾದ. ಇನ್ನೊಂದಕ್ಕಾಗಿ ರಾವಣನು ನಾಶವಾದ; ಅವರ ನಿದರ್ಶನಗಳು ಜನಕ್ಕೆ ಎಚ್ಚರಿಕೆ ಕೊಡಬೇಕು. ಈಗ ಅದೆಲ್ಲ ಮರೆತು ಹೋಗಿದೆ. ತಾನಾದರೂ ಪೂರ್ತಿಯಾಗಿ ಒಡೆಯನ ಪ್ರೀತಿಯನ್ನು ಸಂಪಾದಿಸಿದ್ದೇನೆ ಎಂದು ಆತನ ಮನಸ್ಸಿಗೆ ಬಂದಿದೆ. ಇನ್ನಾವುದೂ ಮನಸ್ಸಿಗೆ ತಂದುಕೊಳ್ಳತಕ್ಕದ್ದಲ್ಲ ಎಂಬ ಭಾವ ಆತನಿಗೆ ಉಂಟಾಗಿ 'ಹೊತ್ತ ಭಾರ ಇಳಿದಂತಾಗಿದೆ, ಅತಿಶಯ ಆನಂದವನ್ನುಂಟುಮಾಡಿದೆ.'

ಕೆಲವಲ್ಲಿ ಅವರು ರಹಸ್ಯ ಅನುಭಾವದ ಎತ್ತರಕ್ಕೆ ಏರುತ್ತಾರೆ. ಅತೀಂದ್ರಿಯ ದರ್ಶನಗಳ ವ್ಯಾಸಂಗ ಮಾಡಿರುವ ಆರ್. ಡಿ. ರಾನಡೆ

ಯವರು ಒಂದೆರಡು ಹಾಡುಗಳನ್ನು ಆರಿಸಿಕೊಂಡು ಯೋಗ ವರ್ಣಿಸುವ ಸಿದ್ಧಿ ಅಂಥವಲ್ಲಿ ಕಾಣುತ್ತವೆ ಎಂದಿದ್ದಾರೆ. 'ಕಣ್ಣಿನೊಳಗೆ ನೋಡೊ ಹರಿಯ-ಒಳ | ಗಣ್ಣಿನೊಳಗೆ ಮೂಜಗದೊರೆಯ |

ಯೋಗದಲ್ಲಿ ಆರು ಚಕ್ರಗಳನ್ನು ವರ್ಣಿಸಿರುತ್ತಾರೆ. ಆಧಾರ ಚಕ್ರ ದಿಂದ ಹಿಡಿದು ಎಲ್ಲವೂ, ಶುದ್ಧಿಗೊಳ್ಳಬೇಕಾದವು. ಮೂರು ಈಷಣ ಗಳನ್ನು ಸಾಧಿಸಿ ಸುಷುಮ್ನೆಗೆ ಹತ್ತಿ ಹೋಗಲು ಅದನ್ನು ಭೇದಿಸಿಕೊಂಡು ಪರಬ್ರಹ್ಮಕ್ಕೆ ಸಾರಬೇಕು. ಆರು ಚಕ್ರ ಶೋಧಿಸಿಬಿಡಬೇಕು.

"ಈಷಣ ಮೂರನು ಸಾಧಿಸಿ ಸುಷುಮ್ನೆಗೇರಲು ಅಲ್ಲಿ ಭೇಧಿಸಿ ನೀ ಪರ ಬ್ರಹ್ಮನ ಸೇರು | ಎವೆ ಹಾಕದೆ ಮೇಲೆ ನೋಡು ಮುಂದೆ ತವಕದಿಂದ ವಾಯುಬಂಧನ ಮಾಡು | ಸವಿದು ನಾಮವ ಪಾನ ಮಾಡು | ಅಲ್ಲಿ ನವ ವಿಧ ಭಕ್ತಿಯಲ್ಲಿ ನೀ ನಲಿದಾಡು || ಅಂಡದೊಳಗೆ ಆಡುತಾನೆ ಭಾನು | ಮಂಡಲ ನಾರಾಯಣನೆಂಬವನೆ | ಕುಂಡಲಿ ತುದಿಯೊಳಿದ್ದಾನೆ | ನಮ್ಮ ಪುರಂದರ ವಿಠಲನು ಪಾಲಿಸುತ್ತಾನೆ" ಎನ್ನುತ್ತಾರೆ. ಇನ್ನಷ್ಟು ಆಧ್ಯಾತ್ಮಿಕ ರಹಸ್ಯಗಳನ್ನು ಒಳಗೊಂಡಂತೆ ಇನ್ನೊಂದು ಪದ ಹೀಗೆ ಆರಂಭವಾಗುತ್ತದೆ;

"ಹಂಸ ನಿನ್ನಲಿ ನೀ ನೋಡು ಭವ! ಪಾಶಮುಕ್ತನಾಗಿ ಹರಿಯನು ಸೇರೊ" ಎಂದು. ಇಲ್ಲಿ ಆಡುವ ಮಾತುಗಳು ಸುಲಭವಾಗಿದ್ದರೂ, ನಿದರ್ಶನ ಗಳು ಹೊರ ಮನಕ್ಕೆ ಅರ್ಥವಾಗುವಂತೆ ಕಂಡರೂ ಇನ್ನಾವುದೂ ರಹಸ್ಯ ಯೋಗದ ವಿವರಗಳಿಗೆ ಸಂಬಂಧಿಸಿದ್ದು ಬಹುಶಃ (ನುಡಿದಂತೆ) ಕಾಣುತ್ತದೆ. ಇಂಥ ಹಾಡುಗಳು ಅನೇಕವುಂಟು. ಇಲ್ಲಿ ಮೇಲಿನ ಅರ್ಥಕ್ಕಿಂತ ಸಂಕೇತಾರ್ಥ ಪ್ರಧಾನ.

"ಸುಖಗಳೆರಡುಂಟು ಎನಗೆ | ನಿನಗೆ ನೀ ಹೊಕ್ಕು ಹೋಗುವೆ ಮೂರು ಪಂಜರದೊಳಗೆ | ಲೆಕ್ಕವಿಲ್ಲದ ಒಟ್ಟು ನಿನಗೆ | ಈಗ ಸಿಕ್ಕಿದೆಯೋ ಮಾಯ ಪಾಶದಲಿ | ಹಬ್ಬದ ಸವಿಗೆ ನೀ ಬಂದೆ ಬಲು ಕೊಬ್ಬಿಲಿ ಕಾಣದೆ || ವೃಕ್ಷ ದೊಳು ಬಿದ್ದೆ | ನಿಬ್ಬಣದಿ ವ್ಯೆಯರಿದೆ; ನೀನೊಬ್ಬನೆ ಹೋಗಿ ಕಾಲಕ್ಕೆ ಗುರಿಯಾದೆ. ದಾರಿಗೆದಾರು ಮತ್ತಿಲ್ಲ | ದೃಢ ಸೇರಿಸು ಮನವನು ಮನೆ ಯೊಳಗೆಲ್ಲ | ದೂರ ಹೋಯಿತು ಪ್ರಾಯಗಳು ಪುರಂದರ ವಿಠಲನಿಗಲ್ಲದೆ ಬೇರೆಯಿಲ್ಲ."

ಈವರೆಗೆ ಪುರಂದರದಾಸ ನಡೆದ ಬಾಳ ದಾರಿಯ ಒಂದು ಇಣುಕು ನೋಟವನ್ನು ಕಾಣಿಸಿದೆ. ಅಲ್ಲಿನ ಪರೀಕ್ಷೆಗಳು ಕಷ್ಟಗಳು ನೋವು ದಾಟಿಕೊಂಡು ಅವರು ಹೋಗಬೇಕಾಯಿತು. ಸಂಶಯ, ಅನಿಶ್ಚಯ ಅವರನ್ನು ಕಾಡಿದ್ದವು. ದೇವರಲಿ ನಂಬಿಕೆ ಇಟ್ಟು ಕಡೆಗೆ ಇಷ್ಟಾರ್ಥವನ್ನು ಸಾಧಿಸಿಕೊಂಡರು. ಈ ಮಾರ್ಗದಲ್ಲಿ ಅವರಿಗೆ ನೆರವಾದ ದೇವರಲ್ಲಿ ಅವರಿಗಿದ್ದುದು ಏಕಾಗ್ರ ಭಕ್ತಿ. ಮತ–ಸಮಯದ ಬದುಕು (Religious life) ಎಂಬುದು ಸುಲಭವಾದುದೇನಲ್ಲ. ಸರಳವಾಗಿ ಕಾಣುತ್ತದೆ. ಅಲ್ಲಿ ಬಳಸುವ ಮಾತುಗಳೂ ಸರಳವೇ. ಜ್ಞಾನ ಸಮಗ್ರ ಸ್ಥಿತಿ, ಯಾವುದು ಎಲ್ಲವೂ ಸೇರಿಕೊಂಡು ರೂಪಿತವಾದ ಬದುಕು ನಿಲವು ವಿವೇಕವಾಗು ತ್ತವೆಯೊ, ಕರ್ಮ, ಜ್ಞಾನ, ವೈರಾಗ್ಯ ಎಂಬ ಇತರ ಮೂರು ನಿಲವುಗಳ ಪರಿಣಾಮವಾಗಿ ಬರುತ್ತದೆಯೊ ಅದು. ಇವೆಲ್ಲವೂ ಅದರಲ್ಲಿ ಸೇರಿ ಕೊಂಡಿರುತ್ತದೆ. ಒಂದನ್ನು ಒಪ್ಪಿದರೆ, ಇನ್ನೊಂದನ್ನು ಒಪ್ಪಿದಂತೆಯೇ. ತಿಳಿವಳಿಕೆಯಲ್ಲಿ ಆ ಸ್ಥಿತಿಯನ್ನು ಮುಟ್ಟಬೇಕಾದರೆ ಯಾವುದು ನಿಜವೆಂಬು ದನ್ನು ಅರಸಬೇಕು. ಸ್ವಂತಕ್ಕೆ ಏನನ್ನೂ ಬಯಸದೆ ಮನಸ್ಸನ್ನು ಅನಾಸಕ್ತ ವಾಗಿಟ್ಟುಕೊಳ್ಳುವುದನ್ನು ಅಭ್ಯಾಸ ಮಾಡಬೇಕು. ಆಸ್ತಿಕ ಧರ್ಮ ಜೀವನದಲ್ಲಿ ಈ ಸರ್ವಾರ್ಪಣ ಬುದ್ಧಿ, ವೃತ್ತಿ ಸಾರಭೂತವಾದುದು. ಕರ್ಮವೆಲ್ಲ ಆ ಕಡೆಗೆ ನಮ್ಮನ್ನು ಅಟ್ಟಿಕೊಂಡು ಹೋಗುತ್ತದೆ. ಒರಟು ಮನಸ್ಸಿನ ಕಾರ್ಪಣ್ಯ ಹತವಾದಂತಿದ್ದ ಮನಸ್ಸುಳ್ಳ ಮನುಷ್ಯ ಸ್ವಲ್ಪ ಸ್ವಲ್ಪ ವಾಗಿ ಬುದ್ಧಿ ತಿರುಗಿ ತನ್ನ ಪ್ರೀತಿಯನ್ನೂ, ಭಕ್ತಿಯನ್ನೂ ಈ ಧರ್ಮದ ಆದರ್ಶದ ಕಡೆಗೆ ವರ್ಗಾಯಿಸಿ, ಎಷ್ಟೋ ವರ್ಷಗಳ ಕಾಲ ದಶಮಾನಗಳ ಕಾಲ, ತನ್ನ ಜೀವವನ್ನು ಶುದ್ಧಿ ಮಾಡಿಕೊಳ್ಳಬೇಕು. ನಿರಂತರವಾಗಿ ಆ ಬಗೆಗೆ ಯತ್ನಿಸಿ ಅದಕ್ಕೆ ಮುಡಿಪು ಮಾಡಿಕೊಂಡಾಗ ತನ್ನ ದೇವರ ಪಾದವನ್ನು ಮುಟ್ಟಬಲ್ಲವನಾಗುತ್ತಾನೆ. ಆ ಪ್ರಯಾಣದಲ್ಲಿ ಅವನಿಗೆ ಲೋಕದ ಅನುಭವ ತುಂಬಿಕೊಂಡು ಬರುವುದು. ಮನಸ್ಸನ್ನು ಕಲಕುವ ಸಂಗತಿಗಳು, ಮೋಹಗಳು, ಮುಚ್ಚುಮರೆ, ಕ್ಷುದ್ರತೆ, ಸಂದೇಹ, ನಿರಾಶೆ ಗಳು ಸೇರಿಕೊಂಡಿರುತ್ತವೆ.

ಈ ಅನುಭವ ಪಡೆದಾಗ ಅವೆಲ್ಲದರ ರಕ್ಷಣೆ, ಶಕ್ತಿ ಇಷ್ಟೇ ಎಂದು

ಮಂದಟ್ಟಾಗುತ್ತದೆ. ಬೀದಿಗಳಲ್ಲಿ ನಡೆದು ಹೋಗುತ್ತಾನೆ. ದಾರಿಯಲ್ಲಿ ಸಿಕ್ಕಿದ ಜನಕ್ಕೆ ಸತ್ಯ ನುಡಿಯುತ್ತಾನೆ. ದೃಢವಾಗಿ ನುಡಿಯುತ್ತಾನೆ. ಯಾವುದೊಂದು ಮಾತ್ರ ಮನುಷ್ಯನನ್ನು ಉದ್ಧಾರ ಮಾಡಬಲ್ಲುದೆ ಎಂದು ತಿಳಿಸಿ, ಎಲ್ಲ ವಿವೇಕದ, ಸಾರವತ್ತಾದ ಅಂಶ, ಸತ್ಯಾಸತ್ಯ ಇಂಥದು ಎಂದು ಆಗ ತಿಳಿಯುವುದು. ಆತನ ತಿಳಿವಳಿಕೆಯ ಬೆಳಕು, ಆತನು ಸಾಧಿಸಿದ ಸಿದ್ಧಿ, ಬಂದಿರುವ ಅನುಭವಗಳು ಇವುಗಳ ಆಧಾರದ ಮೇಲೆ ಲೋಕದ ಗಂಡಸರನ್ನೂ, ಹೆಂಗಸರನ್ನೂ ಕುರಿತು ಏನು ಹೇಳಬೇಕು, ಹೇಗೆ ಹೇಳ ಬೇಕು ಎಂದು ಬಲ್ಲವರಾಗಿರುತ್ತಾರೆ. ಅವರ ಮನಸ್ಸನ್ನು ಶುಚಿಗೊಳಿಸಿ ದೇವರ ಕಡೆಗೆ, ಅವರ ಮಾರ್ಗವನ್ನೂ, ರೀತಿಗಳನ್ನೂ, ಮನಸ್ಸನ್ನೂ, ಯತ್ನಗಳನ್ನೂ ತಿರುಗಿಸಲು ದಾರಿ ತೋರುತ್ತಾರೆ. ಬಾಳಿನ ಆ ಪ್ರಯಾಣ ತಾನು ಮಾಡಿದ್ದುದಾಗಿ. ಬಾಳಲ್ಲಿ ಸಂಕಲ್ಪಿಸಿದ್ದುದು ಅದು. ಆತನ ಮನಸ್ಸಿ ನಲ್ಲಿ ಯಾವ ಕ್ರೋಧವೂ ಇಲ್ಲ, ಕಹಿಯೂ ಇಲ್ಲ. ಯಾರೊಬ್ಬರನ್ನೂ ಕುರಿತು ದ್ವೇಷವಿಲ್ಲ. ಉಚ್ಚ, ನೀಚ ಭೇದವಿಲ್ಲ. ಬಡವರು, ಸಿರಿವಂತರು ಎಂಬ ಎಣಿಕೆ ಇಲ್ಲ. ಹೊರಗಿನ ಯಾವುದೂ ಆತನನ್ನು ನಿಲ್ಲಿಸದು. ತಡೆಯದು. ಹರುಷ ತಾರದು. ಯಾವುದು ಹೃದಯದ ಸತ್ಯವೋ, ವಿಶ್ವಾಸದ ಸತ್ಯವೋ ಇವಕ್ಕೆ ಮಾತ್ರ ಪ್ರಭಾವವುಂಟು. ಕೆಲಸಮಯ ಗಳಲ್ಲಿ ತಾನು ತನ್ನ ಒಡೆಯನಿಗಿಂತ ಹೆಚ್ಚು ಅದೃಷ್ಟವಂತ ಎನಿಸುವುದು! ಅದನ್ನು ವಿವರಿಸುತ್ತ ಆತನು ದನಿಯನ್ನು ಎತ್ತುತ್ತಾನೆ.

"ನಿನ್ನಂಥ ಸ್ವಾಮಿ ಎನಗುಂಟು ನಿನಗಿಲ್ಲ || ನಿನ್ನಂಥ ತಂದೆ ಎನಗುಂಟು ನಿನಗಿಲ್ಲ || ನಿನ್ನಂಥ ದೊರೆಯು ಎನಗುಂಟು ನಿನಗಿಲ್ಲ || ನೀನೆ ಪರದೇಶಿ ನಾನೇ ಸ್ವದೇಶಿ | ನಿನ್ನರಸಿ ಲಕುಮಿ ಎನ್ನ ತಾಯಿ. ನಿನ್ನ ತಾಯನು ತೋರೊ ಪುರಂದರ ವಿಠಲ" ಎನ್ನುತಾರೆ. ಇದು ವಿಚಿತ್ರವಾದ. ಭಕ್ತ ನಾಗಿರುವವನ ಮನಸ್ಸು, ಉಕ್ಕಿ ಆರಾಧ್ಯ ದೇವತೆಯಲ್ಲಿ ಎಂಥೆಂಥ ನಿಲವನ್ನು ತಾಳಬಲ್ಲುದೆಂಬುದಕ್ಕೆ ಇದೊಂದು ಸಾಕ್ಷಿ. ಇತರ ಕೆಲವು ಸಮಯಗಳಲ್ಲಿ ತನ್ನ ದೇವರನ್ನೇ ಹಾಸ್ಯ ಮಾಡುತ್ತಾನೆ. ಅಲ್ಲಿ ಆತನ ಆಧಿಕ್ಯ ತೋರುತ್ತದೆ.

ಇಂಥ ಮನಃಸ್ಥಿತಿಯಲ್ಲಿಯೇ ಬಹುತರ, "ಇದು ಭಾಗ್ಯ, ಇದು ಭಾಗ್ಯ

ಇದು ಭಾಗ್ಯವಯ್ಯ" ಎಂದು ಆತನು ಹಾಡಿದುದು ಈ ಮಜಲುಗಳನ್ನು ದಾಟಿ, ಈ ನೆಲೆಗೆ ಬಂದು ನಿಂತಿದ್ದಾರೆಯಾದ್ದರಿಂದ. ತಮ್ಮ ಅನುಭವದ ಮತ್ತು ಕರುಣೆಯ ಆಳದಿಂದ ಜನರಿಗೆ ತಮ್ಮ ಮನಸ್ಸಿನಲ್ಲಿರುವುದನ್ನು ನುಡಿಯುವುದು ಆತನಿಗೆ ಈಗ ಶಕ್ಯ. ಕಲ್ಲಾಗಿ ಇರಬೇಕು, ಕಠಿಣ ಭವ ತೊರೆಯೊಳಗೆ, ಬಿಲ್ಲಾಗಿ ಇರಬೇಕು ತನ್ನವರೊಳಗೆ, ಮೆಲ್ಲಗೆ ಮಾಧವಗೆ ಮನವೊಪ್ಪಿಸಿ; ಬೆಲ್ಲವಾಗಿರಬೇಕು ಬಲ್ಲವರೊಳಗೆ.

ಬುದ್ಧಿಯಲಿ ತನು ಮನವ ತಿದ್ದಿಕೊಳ್ಳಬೇಕು. ಮುಗ್ಧಾಗಿ ಇರಬೇಕು ಮುನಿ ಯೋಗಿಗಳಿಗೆ. ಮಧ್ವ ಮತಾಬ್ಧಿಯಲಿ ಮೀನಾಗಿ ಇರಬೇಕು. ಶುದ್ಧನಾಗಿ ತತ್ವ ಶೋಧಿಸಲು ಬೇಕು. ಹಾಗೆಯೆ ವಿಷಯ ಭೋಗದ ತೃಣಕ್ಕೆ ಉರಿಯಾಗಿ ಇರಬೇಕು. ನಿಶಿ ಹಗಲು, ಶ್ರೀಹರಿಯ ಭಜಿಸ ಬೇಕು. ಇದು ಭಾಗ್ಯ ಎಂಬುದು, ಅವರ ನಂಬಿಕೆ.

ಈ ವಿಧಾನದ ಮೇಲೆ ಇತರ ಪಕ್ಕಗಳಿಂದಲೂ ಬೆಳಕು ಬೀಳುತ್ತದೆ. ಬೇರೆ ಸಂದಿಗೊಂದಿಗಳನ್ನು ಬಿಡುತ್ತಾರೆ. ಹಿಂದೂಗಳ ಮನಸ್ಸಿನಲ್ಲಿ ಸಾಧಾರಣ್ಯದಿಂದ ಒಂದು ಬಗೆಯ ನಿಲವಿದೆ. ನಡೆಯುವುದೆಲ್ಲ ಹಿಂದಿನ ಜನ್ಮದ ಕರ್ಮ, ಪರಿಣಾಮ ಎಂದು. ಈ ಕರ್ಮ ಹಣೆಯಲ್ಲಿ ಬರೆದಿರು ವುದರಿಂದ ನೆಲದಮೇಲೆ ಬಾಳುತ್ತಿರುವಾಗ ಬೇರೆ ಏನನ್ನೂ ಯಾರೂ ಮಾಡಲಾರರು ಎಂಬುದು ಈ ಮತಿ. ಸಾಮಾನ್ಯವಾಗಿ ಕಾರಣ ಕೊಡಲು ಅರ್ಥಮಾಡಿಕೊಳ್ಳಲು ಶಕ್ಯವಾಗದೆ ಒಂದು ಸಂಗತಿಗಳ ಸಮೂಹವೇ ಅವರೆದುರಿಗೆ ಬಂದು ನಿಲ್ಲುತ್ತದೆ. ಯಾರೇನು ಮಾಡುವರು ಅವನಿಯೊಳಗೆ, ಪೂರ್ವ ಜನ್ಮದ ಕರ್ಮ ಹಣೆಯಲ್ಲಿ ಬರೆದು—ಎಂದು ತೊಡಗುವುದು ಒಂದು ಪದ.

ಮಾಡಿದಡಿಗೆ ಕೆಟ್ಟರೆ; ಮನೆಯ ಗಂಡನು ಬಿಟ್ಟರೆ; ಸತಿ ಸೆಣಸ್ಯಾಡಿದರೆ ಗೋಡೆಯಲ್ಲಿ ಬರೆದ ಹುಲಿ ಘುಡುಘುಡಿಸಿ ತಿನಬರಲು; ಆಡದ ಮಾತು ಗಳನ್ನು ಅಖಿಳರೂ ನಿಜ ಎನಲು || ಹೊಲ ಬೇಲಿಯನು ಮೆದ್ದರೆ; ಮೊಲ ಎದ್ದು ಇರಿದರೆ; ತಲೆಗೆ ತನ್ನ ಕೈ ಪೆಟ್ಟೇ ತಾಗಿದರೆ ಹೆಳಲು ಹಾವಾದರೆ; ಗೆಳೆಯ ರಿಪುವಾದರೆ; ಕಲಸಿಟ್ಟ ಅವಲಕ್ಕಿಯನ್ನು ಕಲಪರಟ ನುಂಗಿದರೆ

ಹೆತ್ತತಾಯಿ ಮಕ್ಕಳಿಗೆ ವಿಷ ಹಾಕಿದರೆ; ಮತ್ತೆ ತಂದೆ ತನ್ನನ್ನು ಹೊರಗೆ, ಹೆರರಿಗೆ ಮಾರಿದರೆ; ತೊತ್ತು ಅರಸಿಗೆ ಪ್ರತಿ ಉತ್ತರವಾಡಿದರೆ, ಕತ್ತಲೆಯು ಬೆನ್ನಟ್ಟಿ ಕರಡ್ಯಾಗಿ ಕಚ್ಚಿದರೆ;—ದಾಸರಿಗೆ ಇಂಥ ಉದಾಹರಣೆಗಳೆಲ್ಲ ಎಲ್ಲಿಂದ ಬಂದವೋ ಎನ್ನಿಸುತ್ತದೆ. ಪುರಂದರದಾಸರ ಮಾತಿನ ವಿಶಿಷ್ಟತೆ ಇಂಥ ನಿದರ್ಶನ ಕೊಡಬಲ್ಲದು. ಇನ್ನು ನೋಡಿ.

ಕಣ್ಣಿನೊಳಗಿರುವ ಬೊಂಬೆ ಕಚ್ಚಾಡಬಂದರೆ * ಹೆಣ್ಣಿನ ಹೋರಾಟ ಹೆಚ್ಚಾದರೆ ಅನ್ನ ಉಣ್ಣದೆಯೇ ಅಜೀರ್ಣ ಬಹಳವಾದರೆ; ಪುಣ್ಯತೀರ್ಥ ಗಳಲ್ಲಿ ಪಾಪ ಘಟಿಸಿದರೆ—ಇಷ್ಟು ನಿದರ್ಶನಗಳಲ್ಲಿ ಯಾವುದು ಮನಸ್ಸನ್ನು ಹೊಕ್ಕರೂ ಅವರು ನುಡಿಯುವ ತತ್ವ ಮನಸ್ಸನ್ನು ಮುಟ್ಟುತ್ತದೆ. ಯಾವುದು ಅಶಕ್ಯವೊ ಅದೆಲ್ಲ ನಡೆವಾಗ ವ್ಯಕ್ತಿ ಹೇಗೆ ಕಾರಣವಾದಾನು. ನಿಜವಾಗಿ ಇದ್ಯಾವುದೊ ಪೂರ್ವಜನ್ಮದ ಕರ್ಮವೇ. ಹೀಗಾಗಿರಬೇಕು ಎಂದು ತಾನಲ್ಲದೆ ಯಾರೋ ನಿರ್ಧರಿಸಿರಬೇಕು. ಏರಿ ಕುಳಿತ ಕೊಂಬೆ ಎರಡಾಗಿ ಮುರಿದರೆ; ಮೋರೆ ತಪ್ಪಿ ವಿಧಿಯು ಮೀರಿದರೆ; ಆರಿದ್ದ ಇದ್ದಿಲು ಬೆಂಕಿ ಯಾಗಿ ಉರಿದರೆ ಇವಕ್ಕೆಲ್ಲಕ್ಕ ಮುಡಿ ಸ್ಥಾಪಕ ಸತ್ಯ; ಧೀರ, ಪುರಂದರ ವಿಠಲ, ನಿನ್ನ ದಯ ತಪ್ಪಿದರೆ.

ಹಿಂದೆ ಮಾಡಿದ ಕರ್ಮದ ಪರಿಣಾಮವಾಗಿ ಒಂದು ನಿಃಸಹಾಯತೆಯ ಭಾವ ಹುಟ್ಟಿ ನಮ್ಮ ನಾಡಿನ ಎಲ್ಲ ನಡತೆಯನ್ನೂ ಬಹುಮಟ್ಟಿಗೆ ಜಡ ಗೊಳಿಸಿದೆ. ದಾಸರು ಇದನ್ನು ಬಳಸಿಕೊಂಡು 'ದೇವರನ್ನು ಪ್ರೀತಿಸಿ; ಅದೊಂದು ಮಾತ್ರ ನಮ್ಮನ್ನು ಕಾಪಾಡುತ್ತದೆ ಕಾಪಾಡೀತು. ಬದುಕನ್ನು ದಿವ್ಯಗೊಳಿಸುತ್ತದೆ' ಎನ್ನುತ್ತಾರೆ. ಎಷ್ಟೋ ಮಾಡಲರ್ಹವಾದದ್ದುಂಟು. ಈ ಕರ್ಮದ ಪರಿಣಾಮವಾಗಿ ಅದನ್ನು ಮಾಡಲಾಗಲಿಲ್ಲ. ಲೋಕದ ಮೆಚ್ಚಿಕೆಗೂ ದೇವರ ಪ್ರೀತಿಗೂ ಅವನನ್ನು ತಕ್ಕವನನ್ನಾಗಿ ಮಾಡುವ

---

* ಚೆಸ್ಟರ್‌ಟನ್ನರ Stories from the Golden Bow ಎಂಬುದರಲ್ಲಿ...... Eating my own hat ; jump down my own throat ; kicking myself......ಇತ್ಯಾದಿ ಇಂಗ್ಲಿಷ್ ವಾಕ್ಯ ಖಂಡಗಳನ್ನು ನಿರ್ದರಿಸುವಂತೆ ಕಥೆ ಗಳನ್ನು ಬರೆಯುವುದನ್ನು ಈ ಮಾತಿಗೆ ಹೋಲಿಸಿ ನೋಡಬಹುದು. ಅಲ್ಲಿ ಕೇವಲ ವಿನೋದ, ಚಿತ್ತ ಚಮತ್ಕಾರ; ಇಲ್ಲಿ ಜೀವಕ್ಕೆ ಆತ್ಮಬೋಧೆ.

ಸಾಮಾನ್ಯ ಕ್ರಿಯೆಗಳನ್ನು ಅವನಿಗೆ ಒಪ್ಪಿಸಿರುವುದನ್ನು ಮಾಡದಾದರೆ, ಅಂಥ ಮನುಷ್ಯನಿಗೆ ದೇವರು ಕೂಡ ಹೇಗೆ ಸಹಾಯ ಮಾಡನು ಎಂಬು ದನ್ನು—ಒಬ್ಬ ಅತಿಥಿಗೆ ಅನ್ನ ಇಟ್ಟುದಿಲ್ಲ; ಇತರ ಹೆಣ್ಣುಗಳ ಸಂಗದಿಂದ ಒಂದು ಕ್ಷಣ ಬಿಡಿಸಿಕೊಂಡದ್ದಿಲ್ಲ, ಸಿಕ್ಕಿದ್ದನ್ನು ಸಿಕ್ಕಿದಷ್ಟು ತಿಂದು—ಕುಡಿದು ಸುಖಪಟ್ಟಿದ್ದಾನೆ. ಸ್ನಾನವೇ—ಪೂಜೆಯೇ ಅಂಥವನ್ನು ಮನಸ್ಸಿಗೆ ತಂದು ಕೊಂಡಿಲ್ಲ; ನಾಯಿಯ ಹಾಗೆ ಬದುಕಿದ್ದಾನೆ. ಅಂಥ ಸಹವಾಸ ದುಷ್ಟ ಸಹವಾಸ, ದೈವಕ್ಕೆ ದಾಸರಾಗಿರುವವರ ಸಹವಾಸ ಮಾತ್ರ ನೆರವಾಗಿ ಕಾಪಾಡಬಲ್ಲದು. ಇನ್ನಾರೂ ಸಹಾಯಕ್ಕೆ ಬರುವುದಿಲ್ಲ. ಆದುದ ರಿಂದಲೇ ಪುರಂದರ ವಿಠಲನಿಗೆ ಮೊರೆ ಇಡುತ್ತಿರುವುದು.

ಮನುಷ್ಯನನ್ನು ಸಂತತವಾಗಿ ನಿತ್ಯವಾಗಿ ಚಿಂತೆ ಕಾಡುತ್ತದೆ. ಭರವಸೆ ಒಂದೇ. ದೈವದ ಸಹವಾಸವನ್ನು ಮನಸ್ಸು ಹುಡುಕುವವರೆಗೆ ಎಂಬುದು. ಅನುಗಾಲವೂ ಚಿಂತೆ ಜೀವಕ್ಕೆ ತನ್ನ ಮನವು, ಶ್ರೀರಂಗನಲ್ಲಿ ನಿಲ್ಲುವ ತನಕ| ಸತಿ ಇದ್ದರು ಚಿಂತೆ, ಇಲ್ಲದಿದ್ದರು ಚಿಂತೆ; ಆ ಸತಿ ಮತಿ ಹೀನೆಯಾದರೂ ಚಿಂತೆ| ಪೃಥ್ವಿಯಲಿ ಸತಿ ಅತಿ ಚೆಲುವೆಯಾದರೆ ಮಿತಿ ಮೀರೆ ಇಲ್ಲದ ಮೋಹದ ಚಿಂತೆ| ಸುತರು ಇದ್ದರೂ ಚಿಂತೆ ಸುತರಿಲ್ಲದ ಚಿಂತೆ, ಅತ್ತು ಅನ್ನಕೆ ಕಾಡುವ ಚಿಂತೆ| ತುತ್ತಿನ ಆಸೆಗೆ ತುರುಗಳನ್ನು ಕಾಯ್ದರೆ, ಸುತ್ತೇಳು ಕಡೆಯಿಲ್ಲದ ಚಿಂತೆ. ಬಡವನಾದರೂ ಚಿಂತೆ; ಬಲ್ಲಿದನಾದರೂ ಚಿಂತೆ| ಹಿಡಿ ಹೊನ್ನು ಕೈಯೊಳಿದ್ದರು ಚಿಂತೆ, ಪೊಡವಿಯೊಳಗೆ ಬಿಡದೆ ಸಿರಿಪುರಂದರ ವಿಠಲನ ಚಿಂತಿಸಿದರೆ ಚಿಂತೆ ನಿಶ್ಚಿಂತೆ|| ಕೆಲವೇಳೆ ಮನುಷ್ಯನು ತನ್ನ ದೇಹವನ್ನು ಕುರಿತ ಮೋಹಗಳನ್ನು ಕುರಿತು ತನ್ನಲ್ಲಿ ತಾನೇ ಕನಿಕರಿಸಿ ಕೊಳ್ಳುವುದುಂಟು. ದಾಸರು ಒಬ್ಬ ವಯಸ್ಸಾದ ಮುದುಕನನ್ನು ಕುರಿತು ವಾಸುದೇವನನ್ನು ಚಿಂತಿಸಿ ಸುಖವಾಗಿರು ಎನ್ನುತ್ತಾರೆ.

"ವಾಸುದೇವನ ನೆನೆದು ಸುಖಿಯಾಗು ಮನವೆ. ಈ ಶರೀರದ ಭ್ರಾಂತಿ ಇನ್ನೇಕೆ ನಿನಗೆ; ದಂತಗಳು ಸಡಿಲಿದವು, ಧಾತುಗಳು ಕುಂದಿದವು, ಕಾಂತೆ ಯರು ಜರಿದು ಓಕರಿಸುತಿಹರು. ಚಪಲ ಚಿಂತೆ ಇನ್ನೇತಕ್ಕೆ ಬಯಲಾದ ದೇಹಕ್ಕೆ ಶ್ರೀಕಾಂತನ ನೆನೆ. ಕಾಲು ಜವಗುಂದಿತು, ಕಣ್ಣುಗಳ ದೃಷ್ಟಿ ಹಿಂಗಿತು. ಯೌವನ ಹೋಗಿ ಜರೆ ಬಂದಿತು. ಕಾಲ ಕರ್ಮ ಸಂಧಿಸಿದ

ಸಂದರ್ಭದಲ್ಲಿ—ಬಾಲತನುವಿನಾಸೆ ಎಲ್ಲಿಹುದಯ್ಯ ! ನೀರ ಬೊಬ್ಬುಳಿಯಂತೆ ನಿತ್ಯವಲ್ಲ. ಧಾರುಣಿ, ಧನ, ಸ್ತ್ರೀಗೆ ಮರುಳಾಗಬೇಡ. ಪುರಂದರ ವಿಠಲನ ಬಾರಿ ಬಾರಿಗು ನೆನೆದು ಸುಖಿಯಾಗು ಮನುಜ" ಎನ್ನುತ್ತಾರೆ. ನಿರಂತರ ವಾಗಿ ಅವರ ಮನಸ್ಸು ಈ ಯೋಚನೆಯ ಕಡೆ ಹೋಗುತ್ತದೆ. ಪ್ರಯೋಜನ ವಿಲ್ಲದ ವಸ್ತುಗಳನ್ನು ಬಯಸಿ ವ್ಯರ್ಥವಾಯಿತು. "ತಪ್ಪು ಮೌಲ್ಯಗಳನ್ನು" ಕಟ್ಟಿಕೊಂಡು ದೇವರ ಕರುಣೆ ಹರಿದು ಬರುವವರೆಗೂ, ಶಾಂತಿಯಿಲ್ಲ. ವಿಶ್ರಾಂತಿಯಿಲ್ಲ. ಸಂತೋಷವಿಲ್ಲ. ಹುಟ್ಟು ಸಾವುಗಳ ಚಕ್ರ ರೂಪದಲ್ಲಿ ತಿರುಗುವ ಸಂಸಾರದಲ್ಲಿ ಬಿಡುಗಡೆಯಾಗುವ ಸಂಭವವಿಲ್ಲ. ಉಳಿದುದೆಲ್ಲ ಅಲ್ಪಕಾಲ ಮಾತ್ರ ಇರತಕ್ಕದ್ದು. ಅದು ಕೊಡಬಹುದಾದ ಅಲ್ಪ ಪೋಷಣೆ ನಮ್ಮನ್ನು ಭಂಗಪಡಿಸುತ್ತದೆ. ದೇಹವನ್ನು ಅವಯವಗಳನ್ನು ನಂಬಬೇಡ. ಎಲ್ಲ ಯತ್ನಗಳನ್ನೂ ದೈವ ಚಿಂತೆ, ದೈವ ಭಕ್ತಿ ನಡಸಿದರೆ ಮಾತ್ರ ಮಾನವನ ಬಾಳಿಗೆ ಮುಕ್ತಿ. ಅರಿವ ಮುಂಚೆಯೇ, ಸಿದ್ಧವಾಗುವ ಮುಂಚೆಯೇ ಸಾವು ಬರುತ್ತದೆ. 'ಅಂತಕನ ದೂತರಿಗೆ ಕಿಂಚಿತ್ತು ದಯ ವಿಲ್ಲ' ಎಂಬುದು ಪ್ರಖ್ಯಾತವಾದ ಒಂದು ಹಾಡು.

ದಿನ, ರಾತ್ರಿ ಎನ್ನದೆ ವಿಷಯ ಲಂಪಟವಾಗಿ ಸವಿಯೂಟಗಳನ್ನುಂಡು ಭ್ರಮಿಸಬೇಡ. ಅವನ ಕೊಂದು, ಇವನ ಕೊಂದು ಅರ್ಥವನು ಗಳಿಸು ವೊಡೆ ಜವನ ದೂತರು ಬರುವ ಹೊತ್ತ ನೀನರಿಯೆ. ನೀ ಹೇಳಬಹುದು, ಮೊನ್ನೆ ತಾನೆ ಮದುವೆಯಾದೆ, ಒಂದೆರಡೆಮ್ಮೆ ಕರೆಯಬಂದಿದೆ, ನಿನ್ನೆ ಕ್ಷೇತ್ರಕೊಂಡಿ, ಇನ್ನೇನು ಫಲ ಬರುತ್ತದೆ. ಹೊನ್ನು ಹಣ ಬರುತ್ತಲಿದೆ. ಸಾಯಲಾರೆ ಎಂದರೆ ಬೆನ್ನ ಬಿಡುವಳೇ ಮೃತ್ಯು? ಹೊಸ ಮನೆ ಕಟ್ಟಿದ್ದೇನೆ; ಗೃಹಶಾಂತಿ—ಮನೆಯೊಳಗೆ ಹೆಂಡತಿ ಬಸುರಿ, ನಾಳೆ ಮಗನ ಮದುವೆ, ಲಗ್ನ ಗೊತ್ತುಮಾಡಿದೆ; ಬದುಕು ಹಸನಾಗಿದೆ—ಎಂದರೆ ಯಮನವರು ಕುಸುರಿರಿಯದೆ ಬಿಡರು. ಇಂದು ಮಗ ಹುಟ್ಟಿದ ದಿವಸ, ಹತ್ತು ಮಂದಿಗೆ ಹಾಲೂಟದ ಹಬ್ಬ ಏರ್ಪಡಿಸಿದ್ದೇವೆ; ಮತ್ತೊಬ್ಬ ಮಗನ ಉಪನಯನ ಮಾಡಬೇಕು, ಬದುಕು ಈಗತಾನೆ ನಗುವಂತಾಗಿದೆ. ಸಾಯಲಾರೆನು ಎಂದರೆ ಮೃತ್ಯು ಹೆಡತಲೆಯಲ್ಲಿ ನಗುತಿರ್ಪುದು ನೀನರಿಯೆ. ಅಟ್ಟ ಅಡುಗೆ ಉಂಡಿಲ್ಲ. ಇಷ್ಟರ ದರ್ಶನವಿಲ್ಲ; ಕೊಟ್ಟ ಸಾಲ ಇನ್ನೇನು ಹಿಂದಕ್ಕೆ ಬರುವ

ಹೊತ್ತು ಎಂದರೇನೂ ಕಟಿ ತುಂಬಿದ ಮೇಲೆ ಕ್ಷಣಮಾತ್ರ ಇರಲಿಲ್ಲ. ಅಷ್ಟರಲ್ಲಿ ಪುರಂದರ ವಿಠಲನನ್ನು ನೆನೆ.

ಇನ್ನೊಂದರ ಧ್ವನಿಯೂ ಹೀಗೆಯೇ ನುಡಿಯುವುದು. ತಾಸು ಬಾರಿಸುತಿದೆ ಕೇಳಿ ಹರಿದಾಸರೆಲ್ಲ. ಶ್ರೀಶನ ಭಜನೆಯನ್ನು ಮಾಡದೆ ಮನುಜನಾಯುಷ್ಯ ವ್ಯರ್ಥ ಹೋಯಿತು ಎಂದು. ಗಾನ, ರಾಗ, ತಾಳ, ಕೇವಲ ತಾವೇ ಪದ್ಯದ ಸಂದೇಶವನ್ನು ನುಡಿದು ಮನಸ್ಸಿನ ಮೇಲೆ ಎಂಥ ಪರಿಣಾಮವನ್ನುಂಟುಮಾಡುವುದೆಂಬುದು ನಂಬಲಾಗುವುದಿಲ್ಲ.

ಹಾಸುಮಂಚ ಸುಪ್ಪತ್ತಿಗೆಯಲ್ಲಿ; ಹಗಲು ಇರುಳು ಹೇಸರಕತ್ತೆಯಂತೆ ಹೊರಳಿ | ಬೇಸರದೆ ಸ್ತ್ರೀಯರ ಕೂಡಿ ನಿತ್ಯವು ಉರುಳಿ | ಮಾನವನ ಆಯುಸ್ಸು ವೃಥಾ ವೃಥಾ ಹೋಯಿತು ಹೋಯಿತು ಎಂದು ತಾಸು ಬಾರಿಸುತಿದೆ ಕೇಳಿ || ಅಷ್ಟೇ ಅಲ್ಲ, ವಾರ್ಧಕ್ಯ, ಬಾಲ್ಯ ಕೆಲವು. ಕಾಲ ವಿವೇಕವಿಲ್ಲದ ಮಾಂದ್ಯಬುದ್ಧಿ ಕೆಲವು ಕಾಲ ಅಜ್ಞಾನದಿಂದ ನಿದ್ರೆಯಿಂದ ಅತಿಲೋಲರಾಗಿ ಕೆಲವು ಕಾಲ ಹೀಗಾಗಿ ಕಾಲನ ಮನೆಗೆ ಸಮೀಪ ಆಯಿತು, ಆಯಿತು ಎನ್ನುತ್ತದೆ ಈ ಹಾಡು.

ಇಲ್ಲಿ ಮಾತು, ಅದರ ನುಡಿತ ತುಂಬ ಸಹಜವಾಗಿದೆ. ವೃಥಾ ಮತ್ತು ಹೋಯಿತು ಎಂಬುದರ ಪುನರಾವೃತ್ತಿ ಹೊಟ್ಟೆ ತುಂಬ ಇರುವ ಶ್ರದ್ಧೆಯನ್ನು ಇವರು ಹೇಳಬೇಕೆಂದಿರುವುದನ್ನು ಸ್ಥಾಪಿಸುತ್ತವೆ. ಪಲ್ಲವಿಗೆ ಸಾವಯವವಾಗಿ ಹೊಂದಿಕೊಳ್ಳುತ್ತದೆ; ಅರ್ಥಪೋಷಣೆ ಮಾಡುತ್ತದೆ. ಪುನಃ ಪುನಃ ಪಶ್ಚಾತ್ತಾಪ ಬರುತ್ತದೆ. ಮನುಷ್ಯರು ದೀನರಾಗಿದ್ದಾರೆ. ದೊರೆತಾಗ ಇದ್ದುದನ್ನು ಭೋಗಿಸಿ ಸಂತೋಷಪಡಲಿಲ್ಲ. ದೇವರು ಕೊಟ್ಟದ್ದ ಆಗ. ಇಲ್ಲದಾಗ ಸುಮ್ಮನೆ ತೊಳಲಾಡುತ್ತಾರೆ. 'ಹರಿ ಕೊಟ್ಟ ಕಾಲಕ್ಕೆ ಉಣಲಿಲ್ಲ. ಕೊಡದ ಕಾಲಕ್ಕೆ ಬಾಯ ಬಿಡುವೆಯಲ್ಲೊ ಪ್ರಾಣಿ' ಎಂಬುದು ಒಂದು ಪದದ ಪಲ್ಲವಿ. ಉಳಿದುದು ಇದಕ್ಕೆ ನಿದರ್ಶನ ಅಥವಾ ಸ್ಥಾಪಕ ಸಂದರ್ಭಗಳು.

ಹತ್ತು ಸಾವಿರ ಹೊನ್ನಿತ್ತು; ಮತ್ತೆ ಉಪ್ಪಿಲ್ಲದ ಉಂಡೆ. ಅದು ತಿಪ್ಪೇಲಿ ಹೋದಾಗ ಬಾಯಲ್ಲಿ ಮಣ್ಣು ಮುಕ್ಕಿದೆಯಲ್ಲೊ ಪ್ರಾಣಿ. ಹುಗ್ಗಿ, ತುಪ್ಪ ಅಗ್ಗವಾಗಿರುವಾಗ ಗುಗ್ಗುರಿ ಅನ್ನವನುಂಡೆ. ಹೆಗ್ಗಳದ ಭಾಗ್ಯಗಳಿಗೆ

ಯಲ್ಲಿ ಹೊಹಾಗ ಬುಗ್ಗೆಯ ಹೊಯ್ಕೊಂಡು ಹೋದೆಲ್ಲೊ. ನಂಟರು, ಇಷ್ಟರು ಬಂದು ಮನೆ ಮುಂದೆ ಕುಳಿತಿರಲು ಕುಂಟ ಸುದ್ದಿಯನ್ನಾಡಿದೆ. ಕಂಟಕ ಯಮುನವರು ಕುಂಟೆಸುತ ಎಳೆವಾಗ ಶ್ರೀಪುರಂದರ ವಿಠಲನು ಮಾತ್ರ ನಂಟು. ಇದ್ದಾಗ ಉಣಲಿಲ್ಲ, ಹರಿಕೊಡದ ಕಾಲಕ್ಕೆ ಬಾಯಿ ಬಿಟ್ಟರೆ ಪ್ರಯೋಜನವೇನು ಎಂಬ ವಿವೇಕದ ಮಾತು ಎಲ್ಲ ಕಾಲದ ಸತ್ಯ. ಯಾವ ಪಾಪವನ್ನೂ ಎಣಿಸಬೇಡ ಎಂದು ದೇವರನ್ನು ಮನಸ್ಸಿನಲ್ಲಿಟ್ಟು ಕೊಂಡರೆ, ಅದೊಂದು ದಾರಿ ಮಾತ್ರ ಈಗ ಉದ್ಧಾರ ಮಾಡಬಲ್ಲುದು. ಈಗ ಅವರಿಗೆ ತಮ್ಮಲ್ಲಿಯ ಲೋಪದೋಷ, ಕೊರತೆ, ಮಾಡಿದ್ದು ಬಿಟ್ಟದ್ದು ಎಲ್ಲವೂ ಅರಿವಿಗೆ ಬಂದಿದೆ. ಬೇರೆ ಯೋಚಿಸಿದರೆ ಮನಸ್ಸು ನೂರು ದಾರಿಯಲ್ಲಿ ಚಲಿಸುತ್ತದೆ. ಆಸೆ, ಆಕಾಂಕ್ಷೆ ದುಷ್ಟವಾದವು. ತಕ್ಕುದಲ್ಲದ ಕಾರ್ಯಗಳು ನಡೆಯುತ್ತವೆ. ಅವನಿಗೆ ಭಕ್ತಿದಾನವಾಗಬೇಕಿದ್ದರೂ ದೇವ ರೊಬ್ಬ ಮಾತ್ರ ಕೊಡಬೇಕು. ಕೆಟ್ಟ ಜನವನ್ನು ತನ್ನಂತೆಯೇ ಅಥವಾ ಇನ್ನೂ ಹೆಚ್ಚು ಕೆಟ್ಟವರನ್ನೂ ದೇವರು ಕಾಪಾಡಿದ್ದಾನೆ—ಅದು ಗೊತ್ತು. ಅವನಿಗೆ ಆ ಆಸೆ ಮಿನುಗು. ದೇವರಿಗೆ ಮಾಡುವ ಪ್ರಾರ್ಥನೆ ಅವನ ಮನಸ್ಸಿಗೆ ಬರುತ್ತದೆ. ಆತ ಕರುಣಾಕರ. ಆ ಬಿರುದು ಸುಖ್ಯಾತ ವಾದ್ದು, ಸ್ಥಾಪಿತವಾದ್ದು. ಇನ್ನಾವುದೂ ತನ್ನ ಪರವಾಗಿ ನುಡಿದು ವಾದಿಸಲಾರದು. ಅವನ ಕರುಣೆಗೆ ತನ್ನನ್ನು ಒಪ್ಪಿಸಿಕೊಳ್ಳಲಾರದವನು ನಷ್ಟವಾಗಿಹೋಗುತ್ತಾನೆ. ಎಂಬುದು ಒಂದು ಮಜಲಿನ ನುಡಿ.

ಈವರೆಗೆ ಹರಿದಾಸನಿಗೆ ತಿಳಿವಳಿಕೆ ಬಂದಿದೆ: ತನ್ನ ದೇವರು ಒಳ್ಳೆಯವ ನೆಂಬ ವಿಷಯದಲ್ಲಿ ಸುತರಾಂ ಸಂದೇಹವಿಲ್ಲವೆಂಬ ಸಂಗತಿ, ತನ್ನ ಭಕ್ತರ, ಬೆಂಬಲಕ್ಕೆ ಅವನಿದ್ದಾನೆ. ಅವರ ಬೇಡಿಕೆಗಳಿಗೆ ಓಗೊಡುತ್ತಾನೆ. ಇಷ್ಟು ಮುಂದುವರಿದಿದೆ ಅವನ ಮನಸ್ಸಿನ ಪಕ್ವತೆ.

"ನಾನೇಕೆ ಪರದೇಸಿ ನಾನೇಕೆ ಬಡವನು, ನೀನಿರುವತನಕ ಹರಿಯೆ" ಎನ್ನುತ್ತಾನೆ. ಹುಟ್ಟಿಸಿದ ತಾಯಿ ತಂದೆ ನೀನು; ಇಷ್ಟಮಿತ್ರನು ನೀನೆ; ಅಷ್ಟು ಬಂಧು ಬಳಗ ಸರ್ವವೂ ನೀನೆ; ಪೆಟ್ಟಿಗೆಯೊಳಗಿನ ಅಷ್ಟಾಭರಣ ನೀನೆ; ಶ್ರೀಷ್ಟ ಮೂರುತಿ ಕೃಷ್ಣ ನೀನಿರುವ ತನಕ, ನಾನೇಕೆ ಬಡವ? ಒಡಹುಟ್ಟಿದವ ನೀನು; ಒಡಲಿಗೆ ಹಾಕುವವ ನೀನು; ಉಡಲು ಹೊದೆಯಲು

ವಸ್ತ್ರ ಕೊಡುವ ನೀನೆ; ಮಡದಿ ಮಕ್ಕಳನ್ನೆಲ್ಲ ಕಡೆಹಾಯಿಸುವವ ನೀನೆ; ಬಿಡದೆ ಸಲಹುವ ಒಡೆಯ ನೀನಿರುವ ತನಕ ನಾನೇಕೆ ಪರದೇಶಿ ? ಹೀಗೆಯೇ ವಿದ್ಯೆ ಹೇಳುವ ನೀನೆ; ಬುದ್ಧಿ ಕಲಿಸುವ ನೀನೆ, ಉದ್ಧಾರಕರ್ತ ನೀನೆ;– ಇಂಥ ಮನುಷ್ಯ ಹೇಗೆ ಪರದೇಶಿ ? ಮೂರು ಲೋಕಗಳ ಒಡೆಯ ತಂದೆ ಯಾಗಿ, ಲಕ್ಷ್ಮಿ ತಾಯಾಗಿ ಇರುವ ಮೂರು ಅವತಾರಗಳಲ್ಲಿಯೂ, ಅವನೇ ಗುರು ಆಗಿರಲು ಇಂಥ ಭಾವನೆ ಬಂದಾಗಲೆಲ್ಲ ತನಗೇನು ದೊರಕಿದರೆ ಅಷ್ಟರಲ್ಲಿ ತೃಪ್ತಿಪಟ್ಟುಕೊಳ್ಳಲು ಒಪ್ಪಿಕೊಳ್ಳುತ್ತಾನೆ. ಕಲಿಯುತ್ತಾನೆ. ಅವನಿಗೆ ಇನ್ನಾವ ಅಧಿಕಾರಸ್ಥಾನದ ಬಯಕೆ ಇಲ್ಲ. ಒಂದು ಚಿಂತೆ ಯನ್ನೂ ಇಟ್ಟುಕೊಳ್ಳುವುದಿಲ್ಲ. ಏಕೆಂದರೆ, ಕೊಡುವ ಕರ್ತೃ ಬೇರೆ ಇರಲು ಬಿಡು ಬಿಡು ಚಿಂತೆಯನು ಎಂಬುದು ಆಗ ಹಾಡು. ಈ ನಂಬಿಕೆ ನಿಸ್ಸಂದೇಹವಾಗಿ ಬರುತ್ತದೆ. ರಕ್ಷಕವಾಗಿ ಸಮಾಧಾನ ತರುವದಾಗಿರು ತ್ತದೆ. ಅವನು ಮಾಡಬೇಕಾದುದೆಲ್ಲ ಏನು ? ಆ ದೇವರಿಗೆ ಒಪ್ಪಿತವಾಗಿರು ವಂತೆ ತನ್ನನ್ನು ತಾನು ರೂಪಿಸಿಕೊಳ್ಳುವುದು, ತಿದ್ದಿಕೊಳ್ಳುವುದು; ಎಂದರೆ, ತನ್ನನ್ನು ಶುಚಿಗೊಳಿಸಿಕೊಳ್ಳುತ್ತಾನೆ. ಇರುವುದು ಭರವಸೆಯಲ್ಲಿ, ನೆಚ್ಚಿಕೆ ಯಲ್ಲಿ, ಶಾಂತಿಯಲ್ಲಿ. ಆ ಕರುಣೆಗೆ ಕಾದಿರುವುದು. ಇದಕ್ಕೆ ದಾರಿ ಯಾವುದು, ಸಾಧನ ಯಾವುದು ಎಂಬುದನ್ನು ಕುರಿತು ಯೋಚಿಸತೊಡಗು ತ್ತಾನೆ. ಕ್ರಮಕ್ರಮವಾಗಿ ಹೊರಗಿನ ವೇಷ ಆಕಾರ ಎಂದು ಮನಸ್ಸಿಗೆ ಬರುವುದನ್ನೆಲ್ಲ ಕಳಚಿಕೊಳ್ಳುತ್ತಾನೆ. ಯಾವುದೂ ತೋರಿಕೆ ಮಾತ್ರ ಎಂಬ ಚಿತ್ರಗಳು ಅನೇಕ. ಎಷ್ಟು ಸುಳ್ಳು ಸುಳ್ಳಾಗಿ ನಡೆಯಲು, ಮಾತಾಡಲು, ತೋರಿಸಿಕೊಳ್ಳಲು ತಾನು ಯತ್ನಿಸುತ್ತಾನೆಯೊ, ವೇಷ ಮರಸಿಕೊಳ್ಳುತ್ತಾನೆಯೊ, ಏನು ಮಾಡಿದರೂ ಆ ಮಹಾಪುರುಷನು ಅದನ್ನು ಭೇದಿಸಬಲ್ಲ. ದನಿ ಎತ್ತಿ ನುಡಿಯುವುದು, ಅಬ್ಬರ, ಮುರಿದು ಬೀಳುತ್ತಗೆ. ದೇವರ ಕೃಪೆಯೊಂದು ಮಾತ್ರ ಶುಚಿಗೊಳಿಸಬಲ್ಲದು. ಕೊನೆಯಿಲ್ಲದೆ ಅವನಿಗೆ ಮೊರೆಯಿಟ್ಟು ಅಳುವುದು. ತಾನು ನಾಶವಾದ ನೆಂದು ಸುಮ್ಮನೆ ಹೇಳಿಕೊಳ್ಳುತ್ತಿರುವುದು. ಬಗೆ ಬಗೆಯಾದ ಹಿಂಸೆ ನಳಿಗೆ ನಿಷ್ಠುರಗಳಿಗೆ ತನ್ನನ್ನು ಈಡುಮಾಡಿಕೊಳ್ಳುವುದು, ಕೋಟಲೆ ಯಿಂದ ಹಿಂದಿರುಗುವುದು. ಅವನ್ನು ಬಿಡುವುದೂ ಉದಾಸೀನತೆ,

ಅನಾಸಕ್ತಿ ಯಾವುವೂ ಕೇವಲವಾಗಿ ನೆರವಾಗುವುದಿಲ್ಲ. ನಿಶ್ಚಯವಾಗಿ ಅಷ್ಟರಿಂದ ಮಾತ್ರ ಸದ್ಗತಿ ಬರುವುದಿಲ್ಲ. ಪ್ರತಿ ಮನೆಯ ಮುಂದೆಯೂ ಹೋಗಿ ನಾಯಿಯಂತೆ ಬೊಗುಳುತ್ತ, ವಿಠಲನನ್ನು ಆಕ್ಷೇಪಿಸುತ್ತ, ವಿಧಿಯನ್ನು ಶಪಿಸುತ್ತಿದ್ದರೆ ಯಾವ ಪ್ರಯೋಜನವೂ ಇಲ್ಲ. ಲೋಕದ ಜನ ಅಂಥ ವೇಷಗಳನ್ನು ಏಕೆ ಹಾಕಿಕೊಳ್ಳಬೇಕು ಎನ್ನುತ್ತಾರೆ.

ಸತ್ಯವಲ್ಲದ ಭಕ್ತಿಯನ್ನು ಕೃಷ್ಣನೆಂದಿಗೂ ಒಪ್ಪಿಲ್ಲ. ಎಷ್ಟೋ ಬಗೆಯಲ್ಲಿ ಲಾಗ ಹಾಕಿದರೂ ನೆಲದಮೇಲೆ ಹೊರಳಾಡಿದರೂ ಕಪಿಯಂತೆ, ಅರ್ಥವಿಲ್ಲದ ಶಬ್ದಗಳನ್ನು ನುಡಿಯುತ್ತಿದ್ದರೂ ಆವನಿಗೆ ಮೆಚ್ಚಿಕೆ ತರುವುದಿಲ್ಲ. ಹೊರ ಆಚಾರ, ಸಂಪ್ರದಾಯ, ನಿಷ್ಠೆ ಇವುಗಳನ್ನು ನಡಸಿಕೊಂಡರೆ ನಿಜವಾದ ದೇವರ ಪ್ರೀತಿಯನ್ನು ಪಡೆವ ಮಾರ್ಗವಾಗುತ್ತದೆ ಎಂದು ಜನರು ಎಷ್ಟೋ ಬಾರಿ ಎಣಿಸುತ್ತಾರೆ.

ಒಪ್ಪನಯ್ಯಾ ಹರಿ ಮೆಚ್ಚನಯ್ಯ | ಉತ್ತಮ ತಾನೆಂದುಕೊಂಡು ಉದಯ ಕಾಲದಿ ಎದ್ದು | ನಿತ್ಯ ನಿತ್ಯ ಕೊರೆಯುವ ನೀರಿನೊಳಗೆ ಮುಳುಗುವವನು ಕಾಗೆ ಹಾಗೆ ಮುಳುಗುತ್ತದೆ. ಚರ್ಮದ ದೇಹಕ್ಕೆ ಗೋಪಿ ಚಂದನ ತೊಡೆದುಕೊಂಡು | ಎಮ್ಮೆಯ ರೋಗದ ಬರೆಯ ಹಾಗೆ | ಅಡ್ಡಾತಿಡ್ಡಾ ಬರೆವವನಿಗೆ. ಮಾತಿನಲ್ಲಿ ಮತ್ಸರ; ಮನಸ್ಸಿನಲ್ಲಿ ವಿಷದ ಗುಳಿಗೆ | ಓತಿಯಂತೆ ಮರದ ಮೇಲೆ ನಮಸ್ಕಾರ ಮಾಡುವವರ ಒಪ್ಪನಯ್ಯ || ನಿಷ್ಠೆಯುಳ್ಳವ ತಾನೆಂದು ಪೆಟ್ಟಿಗೆ ಮುಂದಿಟ್ಟುಕೊಂಡು, ಕೊಟ್ಟಿಗೆಯೊಳಗಿನ ಎತ್ತಿನಂತೆ ನುಡಿಸುವ ಗಂಟೆಯ ಶಬ್ದಕೆ ಏಕೋಭಾವ, ಏಕೋಭಕ್ತಿ, ಏಕನಿಷ್ಠೆಯಿಂದಲೇ ಬೇಕಾದಂತೆ ಮುಕುತಿಯನೀವ ಪುರಂದರ ವಿಠಲನನ್ನು ಸ್ಮರಿಸದ ಮನುಜನನ್ನು ಒಪ್ಪನು, ನಂಬನು; ಕಾಯನು. ನಿಜವಾದ ಸ್ಥಿತಿಯನ್ನು ಅರ್ಥಮಾಡಿಕೊಳ್ಳುವನು. ಬಾಯಿ ಮುಚ್ಚಿಕೊಂಡು ಸುಮ್ಮನಿಹನು ನಿಜವಾದ ಭಕ್ತಿ ನಿನ್ನ ಕಡೆಗೆ ಹರಿದು ಬರುವವರೆಗೆ. ಆಗ ದಾಸರೆನ್ನುವುದೇನು? "ಹರಿ ನಿನ್ನೊಲುಮೆ ಆಗುವ ತನಕ ಅರಿತು ಸುಮ್ಮನಿರುವುದು ಲೇಸು" ಎಂದು. ನಿಜವಾಗಿ ನಂಬಿದ ಭಕ್ತನನ್ನು ದೇವರು ನಿರಾಕರಿಸಿದ ಸಂದರ್ಭವಿಲ್ಲ ಎಂಬುದಕ್ಕೆ ಸಾಧಕವಾಗಿ ಇನ್ನೊಂದು ಪದ್ಯವಿದೆ; "ನಂಬಿಕೆಟ್ಟವರಿಲ್ಲವೊ, ನಂಬದೆ ಕೆಟ್ಟನೆ ಕೆಡಲಿ" ಎಂದು ಹಾಡುತ್ತಾರೆ.

ನಿಜವಾದ ಭಕ್ತನು ತನ್ನ ದೇವರೊಡನೆ ವಾದವಾಡಿ ಕೂಡಬಲ್ಲ. ಅವನ ಮೇಲೆಯೇ ನಿರ್ಬಂಧಗಳನ್ನು ಹೊರಿಸಬಲ್ಲ. ಆದರೆ ಒಡೆಯನು ಹಾಕಿದ ನಿಯಮಗಳನ್ನು ನಡಸಿಕೊಡುವೆನೆಂದು ಸೇವಕನು ಮಾತು ಕೊಡುತ್ತಾನೆ. ಇಬ್ಬರ ನಡುವೆಯೂ ಏರ್ಪಟ್ಟ ನಿಜವಾದ ಒಡಂಬಡಿಕೆ ಇದು. ಇಬ್ಬರ ರುಜುವೂ ಇದೆ ಆ ಕರಾರು ಪತ್ರದಲ್ಲಿ; ಮುದ್ರೆ ಒತ್ತಿದೆ ಲೋಕದ ಭಕ್ತರ ಮುಂದೆ. ಇಬ್ಬರಲ್ಲಿ ಒಬ್ಬರೂ, ನಿಬಂಧನೆಗಳನ್ನು ಮುರಿಯತಕ್ಕದ್ದಲ್ಲ. ಎನಗೂ ಆಣೆ (ರಂಗ) ಕೃಷ್ಣ ನಿನಗೂ ಆಣೆ | ಎನಗೂ ನಿನಗೂ ಇಬ್ಬರಿಗೂ ಭಕ್ತರಾಣೆ | ಒಡಂಬಡಿಕೆಯ ಸಮಯಗಳನ್ನು ನೋಡಿ—ನಿನ್ನ ಬಿಟ್ಟು ಅನ್ಯರ ಭಜಿಸಿದರೆ ಎನಗೆ ಆಣೆ ರಂಗ. ಎನ್ನ ನೀ ಕೈ ಬಿಟ್ಟು ಪೋದರೆ ನಿನಗೆ ಆಣೆ. ತನು ಮನ ಧನದಲಿ ವಂಚಕನಾದರೆ ಎನಗೆ ಆಣೆ. ಮನಸು ನಿನ್ನಲಿ ನಿಲ್ಲಿಸದಿದ್ದರೆ ನಿನಗೆ ಆಣೆ. ಕಾಕು ಮನುಜರ ಸಂಗವ ಮಾಡಿದರೆ ಎನಗೆ ಆಣೆ. ದುಷ್ಟರ ಸಂಗವ ಬಿಡಿಸದಿದ್ದರೆ ನಿನಗೆ ಆಣೆ. ಹರಿ ನಿನ್ನಾಶ್ರಯ ಮಾಡದಿದ್ದರೆ ಎನಗೆ ಆಣೆ. ಪುರಂದರ ವಿಠಲ, ನೀನೊಲಿಯದಿದ್ದರೆ ನಿನಗೆ ಆಣೆ. ಎಂಬುದು ಪಟ್ಟ ಹಾಕಿದಂತೆ ತೋರಿಸುತ್ತದೆ.

ಕೆಲವೇಳೆ ಭಕ್ತನು ತನ್ನ ದೇವರು ತನಗೆ ಸಾಲ ತೆರಬೇಕೆಂದು ಭಾವಿಸುತ್ತಾನೆ. ತಾನು ಕೇಳಿದುದನ್ನು ಸಲ್ಲಿಸಬೇಕೆಂದು ಒತ್ತುತ್ತಾನೆ. ಅದನ್ನು ಕೊಟ್ಟ ಹೊರತು ಹೋಗುವುದಿಲ್ಲ ಎನ್ನುತ್ತಾನೆ. ಅಥವಾ ಹಟ ಮಾಡುತ್ತಾನೆ. 'ನೀ ಕೊಡೆ—ನಾ ಬಿಡೆ ಕೇಳಯ್ಯ' ನಾನು ನಿನ್ನನು ನೋಡುತ್ತೇನೆ. ನಿನ್ನ ಗುಣಗಳನ್ನು ಹಾಡುತ್ತೇನೆ. ಕಾಡುತ್ತೇನೆ. ಬೇಡುತ್ತೇನೆ. ನಾಡೊಳಗೆ ಮೋಡಿಯು ಬಿಡು, ಮೊದಲಿನ ಬಡ್ಡಿಯ ಕೊಡು. ಎಂಟಕ್ಷರವಿದೆ; ದ್ವಯ ಸಾಕ್ಷಿಗಳಿವೆ. ಗಂಟಿಗೆ ಮೋಸವೆ ದಾಸನಿಗೆ ಉಂಟು ಉಂಟೆನಿಸು ಬಂಟರ ಬಾಯಲಿ. ತಮ್ಮ ನಂಬಿಕೆಯನೆಲ್ಲ, ಹರಿಯಲ್ಲಿ ಕೇಂದ್ರೀಕರಿಸಿದವರನ್ನು ಅವನೇ ಕಡೆಯ ಆಸರೆಯಾಗಿ ನಂಬಿದವರನ್ನು ಮರೆತುಬಿಟ್ಟರೆ ಅದು ಹೇಗೆ ನ್ಯಾಯವಾದೀತು? ಎಂಬುದು ಭಾವ. ಇದೇ ದಾಸರು ಹಿಂದೆ ಒಂದು ಕಾಲದಲ್ಲಿ ತಮ್ಮ ದಾಸ ಜೀವನವನ್ನು ಹೊಸದಾಗಿ ಆರಂಭಿಸಿದಾಗ ಬಿನ್ನಹಕೆ ಬಾಯಿಲ್ಲವಯ್ಯ, ಅನಂತ ಅಪರಾಧವೆನ್ನಲ್ಲಿ ಇರಲಾಗಿ ಎಂದು ಹೇಳಿಕೊಂಡಿದ್ದವರು—ಈಗ ಪೂರ್ತಿ ಈ ಕೊನೆಗೆ

ಬಂದಿದ್ದಾರೆ: ಅಪರಾಧಿ ನಾನಲ್ಲ, ಅಪರಾಧ ಎನಗಿಲ್ಲ. ಆತನಿಗೆ ಅಷ್ಟು ನಿಶ್ಚಯ ಅಪರಾಧ ತನ್ನದಲ್ಲವೆಂದು. ನೀನು ಆಡಿಸಲು ಜಡ ಒನಕೆ ಅಭಿನಯ ಬೊಂಬೆ | ಏನು ಬಲ್ಲದು ಬೇರೆ ಕೃತಿಯನೊಂದ || ನೀನಿಟ್ಟ ಸೂತ್ರದಿಂದ ಅಲುಗೆ ಕೈಕಾಲುಗಳು ನೀನೆ ಮಗ್ಗಿಸಲು ಮಗ್ಗುವ ದೇಹ ತಾನಾಗಿ, ಯಂತ್ರವಾಹಕ ನೀನೆ ಒಳಗೆ ಇದ್ದು ಎನ್ನ ಸ್ವತಂತ್ರನೆಂದೆನಿಸಿ ಕೊಲಿಸುವರೆ, ಎನ್ನುತ್ತಾರೆ. ತನ್ನ ದೇವರೊಡನೆ ಮಾತನಾಡುತ್ತ ಅವನ ಮೇಲೇ ದೋಷವನ್ನು ಹೊರಿಸುತ್ತಾರೆ. ಅವನಲ್ಲಿ ಪೂರ್ತಿ ನಂಬಿಕೆಯಿಟ್ಟು ಒಗ್ಗಿದವರು ಕೂಡ ಒದುಕಿದವರಿಲ್ಲ. ಆರು ಬದುಕಿದರಯ್ಯ ಹರಿ ನಿನ್ನ ನಂಬಿ.* ಎಷ್ಟು ಜನ ಪ್ರಖ್ಯಾತರ ಹೆಸರುಗಳಿವೆ ಇದರಲ್ಲಿ–ನಾಶವಾದವರು, ಕಲಹ ಬಾರದ ಹಾಗೆ ಕರ್ಣನನ್ನು ನೀ ಕೊಂದೆ. ಸುಲಭದಲ್ಲಿ ಕೌರವರ ಮನೆಯ ನೀ ಮುರಿದೆ. ನೆಲವ ಬೇಡಲು ಪೋಗಿ ಬಲಿಯ ತಲೆಯನು ತುಳಿದೆ. ಮೊಲೆಯ ಉಣಿಸಲು ಬಂದ ಪೂತನಿಯ ಕೊಂದೆ, ಎಂದವರೇ ತಾಮ್ರಧ್ವಜನ ತಂದೆ, ಭೃಗು ಮುನಿ, ನರಕನನ್ನು ನಾಶ ಮಾಡಿದೆ, ಅವನ ಹೆಣ್ಣುಗಳು ನಿನ್ನವರಾದರು. ಮುಂತಾದುವನ್ನು ಉದಾಹರಿಸುತ್ತಾರೆ. "ತಿರಿದುಂಬ ದಾಸರ ಕೈಯಲ್ಲಿ ಕಪ್ಪವ ಕೊಂಬೆ" ಎಂಬ ಮಾತು ನೇರ ಚುಚ್ಚುವಂತೆ ಇದೆ. ಅಷ್ಟೇ ಅಲ್ಲ: ಹಲವೇಳೆ ನಿನ್ನನ್ನು ನಂಬಿದರೆ ತಿರಿಪೆಯೂ ಹುಟ್ಟಲೊಲ್ಲದು ಎನ್ನುತ್ತಾರೆ.

ದಾಸರಲ್ಲೆಲ್ಲ ಇನ್ನೊಂದು ಸಾಮಾನ್ಯ ಭಾವವಿರುತ್ತದೆ. ಅದೂ ಈ ಬಗೆಯದೇ. ಆದರೆ ಇದಕ್ಕಿಂತ ಹೆಚ್ಚು ಅಡಕವಾದದ್ದು. ಇವರಿಗಿಂತ ಮುಂಚೆ ವ್ಯಾಸರಾಯರು ಬರೆದಿದ್ದು. ಅವರಿಗೆ ನಿಚ್ಚಳವಾಗಿ ತೋರಿತ್ತು. ಹರಿಯನ್ನು ಅಂತರಂಗದಲ್ಲಿ ಕಾಣದವನು ಹುಟ್ಟು ಕುರುಡನಂತೆ; ಶ್ರೀಕೃಷ್ಣ ಚರಿತೆ ಕೇಳದವನು ಜಡಮತಿಯಂತೆ; ಇಂಥುದಕ್ಕೆ ನಿದರ್ಶನಗಳನ್ನು ಎಷ್ಟೊ ಹಿಂದಿನ ಪ್ರಸಂಗಗಳಿಂದ ದಾಸರು ಎತ್ತಿ ಕೊಡುತ್ತಾರೆ. ಯಾವನು

* ಈ ಪದ್ಯ 'ನಂಬಿ ಕೆಟ್ಟವರಿಲ್ಲವೊ' ಎಂಬುದನ್ನು ಅಲ್ಲಗಳೆದಂತಿರುತ್ತದೆ. ಆದರೆ ಅದು ಒಂದು ಮನಸ್ಸಿನ ಸ್ಥಿತಿ. ಇದು ಬೇರೊಂದು ಸಮಯದ್ದು. ಎರಡೂ ಶಕ್ಯ. ಭಕ್ತಿಯಲ್ಲಿ, ಬೆಳವಣಿಗೆಯ ಮಜಲುಗಳಲ್ಲಿ, ಮನಃಸ್ಥಿತಿಗಳಲ್ಲಿ.

*

ದೇವರ ಪರವಾದ ಚಿಂತನ ಸ್ತೋತ್ರ, ನೈವೇದ್ಯ ಒಪ್ಪಿಸುವುದಿಲ್ಲವೊ ಅವನು ಗುಣಹೀನನು. ಹರಿಗೆ ಅರ್ಪಿಸಿ ಪ್ರಸಾದವಾಗಿ ಕೊಳ್ಳದ, ಉಂಡ ಆಹಾರ ಸೂಕರ ಭೋಜನ; ಕೃಷ್ಣಾರ್ಪಿತವಲ್ಲದ ಕ್ರಿಯೆ, ಅಸತಿಯ ವ್ರತನೇಮವೋ ಅಮರೇಶ–ಕೃಷ್ಣನಿಗರ್ಪಿತವಲ್ಲ ಅದು. ಕಮಲನಾಭನ ಪೊಗಳದ ದಾಸರ ಸಂಗೀತ, ಗಾರ್ದಭ ರೋದನ.

ಇಂಥ ತಿಳಿವಳಿಕೆ ಬಂದೊಬ್ಬ ಮನುಷ್ಯನು ಆಳವಾಗಿ ಉದಾರವಾಗಿ ಬದುಕಿನ ಸಂಗತಿಗಳನ್ನೂ ವ್ಯವಹಾರಗಳನ್ನೂ ಅರಿತವನಾಗುತ್ತಾನೆ. ಲೋಕದ ಮೇಲಿನ ಮಹಾತ್ಮರೆನ್ನಿಸಿಕೊಂಡವರು ಅತ್ಯಂತ ಸಜ್ಜನರೆನ್ನಿಸಿಕೊಂಡವರು ಹೇಗೆ ಕಷ್ಟಕ್ಕೀಡಾದರು, ವಿಧಿಯ ಕಾಟಕ್ಕೆ ಈಡಾದರು ಎಂದು ಅರಿಯುತ್ತಾನೆ. ಹಾಗೆಯೇ ಅಜ್ಞಾನಿಗಳೂ, ಬುದ್ಧಿ ಇಲ್ಲದವರೂ ಹರಿಯೇ ತಮ್ಮ ಬಲ, ತಮ್ಮ ನೆರವು ಎಂದು ಭಾವಿಸಿಕೊಳ್ಳುತ್ತಾರೆ. ವಿಧಿಯ ಕೈಗೆ ಸಿಕ್ಕಿ ಎಷ್ಟು ಜನ ಕಷ್ಟಪಟ್ಟಿಲ್ಲ! ಹಿಂದೆ ಹರಿಶ್ಚಂದ್ರನ ಅರಣ್ಯಾವ ಸೇರಿಸಿತು. ಮೊಸಳೆಯಾಗಿ ಕಾಡು ಕುಳಿತಿತ್ತು ಕರಿರಾಜನಿಗೆ; ಚಂದದಲಿ ಪಾಂಡವರನ್ನು ಅರಣ್ಯಕ್ಕೆ ದೂಡಿತು. ಸೀತೆ ಲಂಕೆಯಲ್ಲಿ ಬಂದಿಯಾದಳು. ಎಂದು ಇನ್ನೂ ಕೆಲವು ಉದಾಹರಣೆಗಳನ್ನು ಚಂದ್ರ, ಇಂದ್ರ, ಚಂದ್ರ ಶೇಖರ ಇವರಿಗೆ ಕೊಟ್ಟ ಕಾಟಗಳನ್ನು ವಿವರಿಸುತ್ತಾರೆ. ಇದನ್ನು ತಿಳಿದರೆ ನರರ ಪಾಡೇನು? ಎನ್ನುತ್ತಾರೆ. ಶಿವನನ್ನೇ ಸುಡುಗಾಡಿಗೆ ಸೇರಿಸಿದಾಗ ಉಳಿದವರು, ಉಳಿದಾರೇ ? ಕೆಲವರಿಗೆ ಕಳ್ಳತನ, ಸುಳ್ಳುಗಾರಿಕೆ, ಲಂಪಟತೆ ಕಲಿಸಿಕೊಟ್ಟಿತು. ವಿಧಿ ಕಾಡುವಾಗ ಆಗಬಾರದ್ದೆಲ್ಲ ಆಗುತ್ತದೆ. ಬೇನೆ, ಚಳಿ, ಉರಿ ರೋಗಗಳನ್ನು ತಂದಿತು. ವಿಧಿಯ ಗೆದ್ದವನು ನಮ್ಮ ಪುರಂದರ ವಿಠಲ. ಈ ವಿಧಾನವನ್ನು, ವಿಧಿಯನ್ನು ಅರಿತವರು ದಾಸರು. ತಮ್ಮನ್ನು ಶುದ್ಧಿ ಮಾಡಿಕೊಂಡು ಪಾವನ ಮಾಡಿಕೊಂಡ ವಿಧಾನ ತಿಳಿವಳಿಕೆಯ ಮಾರ್ಗ, ಮಿತಿಗಳಾವುವು ಎಂಬುದನ್ನು ಅರಿಯುವುದು ಮುಖ್ಯ ಗುರಿ, ಗಮ್ಯ, ನ್ಯಾಯವಾಗಬೇಕು. ದೇವರ ಕೃಪೆಗಾಗಿ ನಿರಂತರವಾಗಿ, ಅವಿಶ್ರಾಂತವಾಗಿ ಪ್ರಯತ್ನಪಡಬೇಕು. ಎಲ್ಲ ಧರ್ಮ ಸಮಯಗಳಲ್ಲಿಯೂ ಮನಸ್ಸಿಗೂ ಆತ್ಮಕ್ಕೂ ದೇಹ ಕೀಳಾದ್ದು ಎಂದು ನಿಸ್ಸಂದೇಹವಾದ ನಂಬಿಕೆ. ದೇಹ ಎಷ್ಟು ಕೊಳೆ, ಎಷ್ಟು ಕೆಡಕು ಉಳ್ಳದ್ದು. ಎಷ್ಟೋ

ಆಕರ್ಷಣೆಗಳನ್ನು ತರತಕ್ಕದ್ದು ಅದು ಎಂಬ ಸಂಗತಿಗಳು ಮನಸ್ಸಿಗೆ ಬರುತ್ತವೆ. ಯಾವ ಅಂಗಾಂಗಗಳನ್ನು ಕೊಳೆ, ಹೀನ ಎನ್ನುತ್ತಾರೆಯೊ ಅದರಿಂದಲೆ ಜೀವಂತವಾದ ಒಂದು ಪ್ರಾಣಿ ಹೇಗೆ ಉತ್ಪನ್ನವಾಗುತ್ತದೆ ಎಂಬ ಸಂಗತಿಯನ್ನು ಸಂದರ್ಭ ಒದಗಿದಾಗಲೆಲ್ಲ ಒತ್ತಿ ಹೇಳುತ್ತಾರೆ. ಇದನ್ನು ಬಳಸಿಕೊಂಡು ಅತಿಯಾಗಿ ವಿಷಯ ಲೋಲುಪತೆಯಲ್ಲಿ ಮಗ್ನವಾಗುವುದರಿಂದ ಜನರ ಗಮನವನ್ನು ಅದರಿಂದ, ತಿರುಗಿಸಲು ಬಯಸುತ್ತಾರೆ. ದೇಹದ ಸುಖವನ್ನು ಹೇಸಿಗೆ ಬರುವಂತೆ ಬಣ್ಣಿಸಿದರೆ ವಿಷಯಾಸಕ್ತಿಗಳಿಂದ ಅವರ ಮನಸ್ಸು ಹೊರಬೀಳುತ್ತದೆ ಎಂದು ಅವರೆಲ್ಲರ ನಂಬಿಕೆ. ದಾಸರಿಗೆ ಈ ಸಂಗತಿಗಳು ಗೊತ್ತು. ದೇಹ ಇರುವುದರಿಂದಲೇ, ಭೂಮಿಯ ಮೇಲೆ ಬದುಕಬೇಕಾಗಿರುವುದರಿಂದಲೇ ಉತ್ತಮ ಬದುಕಿನ ಅಗತ್ಯ, ಅರ್ಥ. ಇಲ್ಲವಾದರೆ ತಮ್ಮನ್ನು ತಾವೇ ಮೇಲ್ಪಡಿಸಿಕೊಳ್ಳುವುದಕ್ಕಾಗಲಿ, ಉದ್ಧರಿಸಿಕೊಳ್ಳುವುದಕ್ಕಾಗಲಿ ಯಾವ ಬಯಕೆ ಹುಟ್ಟೀತು? ಆದುದರಿಂದಲೇ ಈ ದೇಹವನ್ನಾಗಲಿ ಲೋಕದ ಜೀವವನ್ನಾಗಲಿ ನಂಬಬೇಡ ಎಂಬುದರ ಜೊತೆಗೆ ಅವನ್ನು ಸರಿಯಾಗಿ ಅರ್ಥಮಾಡಿಕೊಂಡು ಅವಕ್ಕೆ ಕೊಡಬೇಕಾದ ಬೆಲೆಯನ್ನು ಕೊಡುವುದು ಜೀವನ, ವಿವೇಕವನ್ನು ಹೆಚ್ಚಿಸುತ್ತದೆ. ಲೋಕಯಾತ್ರೆಯನ್ನು ಸರಿಯಾಗಿ ನಡಸಲು ಸಹಾಯ ಮಾಡುತ್ತದೆ ಎನ್ನುತ್ತಾರೆ. ಬಹು ಪ್ರಖ್ಯಾತವಾದ ಒಂದು ಹಾಡು

"ಮಾನವ ಜನ್ಮ ದೊಡ್ಡದು, ಇದ ಹಾನಿಮಾಡಲುಬೇಡಿ ಹುಚ್ಚಪ್ಪಗಳಿರ" ಎಂದು ತೊಡಗುತ್ತದೆ. ಕಣ್ಣು ಕೈ ಕಾಲು ಕಿವಿ ನಾಲಗೆ ಇರಲಿಕ್ಕೆ | ಮಣ್ಣುಮುಕ್ಕಿ ಮರುಳಾಗುವರೆ? ಹೆಣ್ಣು ಮಣ್ಣಿಗಾಗಿ ಹರಿನಾಮಾಮೃತ | ಉಣ್ಣದೆ ಉಪವಾಸ ಇರುವರೆ ಖೋಡಿ || ಕಾಲನ ದೂತರು ಕಾಲ್ಪಿಡಿದೆಳೆವಾಗ | ತಾಳು ತಾಳು ಎಂದರೆ ತಾಳುವರೆ? ದಾಳಿಬಾರದ ಮುನ್ನ ಧರ್ಮವ ಗಳಿಸಿರೋ | ಸುಳ್ಳಿನ ಸಂಸಾರ ಸುಳಿಗೆ ಸಿಕ್ಕು ಧನಧಾನ್ಯ ಪುತ್ರರು ಕಾಯುವರೆ? ಇನ್ನಾದರೂ ಏಕೋಭಾವದಿ ಪುರಂದರವಿಠಲನ ಭಜಿಸಿ— ಎನ್ನುತ್ತಾರೆ. ಸ್ವಂತ ಜೀವನದಲ್ಲಿಯೇ, ಮನುಷ್ಯರ ಮನಃಪ್ರವೃತ್ತಿಗಳೂ ಓಟವೂ ಸುಖದ ಕಡೆ, ಲಾಭದ ಕಡೆ ಇರುತ್ತವೆ ಎಂಬುದನ್ನು ಅರಿತಿದ್ದಾರೆ. ಇಂಥ ಮೋಹನಗಳಿಂದ ತಿರುಗುವಂತೆ ಮಾಡುವುದು ಎಷ್ಟು ಕಷ್ಟ ಎಂಬು

ದನ್ನೂ ಅರಿತಿದ್ದಾರೆ. ಇಂಥ ಮಾಯಕವಾದ ಆಕರ್ಷಣೆಗಳು ನಮ್ಮನ್ನು ಗುಲಾಮರಾಗಿ ಮಾಡಿಕೊಳ್ಳುವುದು ನೂರು ಬಗೆಗಳಲ್ಲಿ. ಶುಚಿಶೀಲರಾದ, ಸಜ್ಜನರಾದ ದೈವಭಕ್ತರಾದ ಜನರ ಸಹವಾಸ ಮಾತ್ರವೇ ನಮ್ಮನ್ನು ಬದುಕಿನ ಇಂಥ ಹವ್ಯಾಸಗಳಿಂದ ಪಾರುಮಾಡಬಲ್ಲದು. ಕರ್ಮ, ಕಲಾಪ, ಆಚಾರಶೀಲತೆ, ನಿಯಮನಿಷ್ಠೆ ಇವು ನಮ್ಮನ್ನು ತೋಳಲುಗಳಿಗೆ ಸಿಕ್ಕಿ ಹಾಕುತ್ತವೆ. ಅವುಗಳ ಬಂಧನದಿಂದ ಬಿಡಿಸಲಾಗುವುದಿಲ್ಲ. ಅವು ಬುದ್ಧಿಯಮೇಲೆ ಕತ್ತಲು ಕವಿಸುತ್ತದೆ. ನಿಮಗಿಂತ ನಾವು ಪವಿತ್ರ ಎಂಬ ಭ್ರಾಂತಿಯ ಭಾವನೆಯನ್ನು ಮಾತ್ರ ನಮಗೆ ಕೊಡುತ್ತದೆ. ಇದು ಅವಿವೇಕ. ಜನವನ್ನೂ ಅನಾವಶ್ಯಕವಾಗಿ, ಗರ್ವಿಷ್ಠರನ್ನಾಗಿ ಮಾಡುತ್ತದೆ. ನಮ್ಮಲ್ಲಿ ಒಂದು ನಾಣ್ಣುಡಿ ಇದೆ "ಹುತ್ತವನು ಬಡಿದರೆ ಹಾವು ಸಾಯಬಲ್ಲದೆ" ಎಂದು. ಹಾವನ್ನು ನಾಶಮಾಡಬೇಕಾದರೆ ಹಾವನ್ನೇ ಹಿಡಿದು ಬಡಿಯಬೇಕು. ಹಾಗೆಯೇ ತೀಕ್ಷ್ಣವಾದ ನಿಷ್ಠುರನಿಯಮ, ಸ್ನಾನ, ಉಪವಾಸ ಜಾಗರಣೆ, ಮಂತ್ರ ಗೊಣಗುಟ್ಟುವುದು, ಹಾಡು ಹಾಡುವುದು, ಪೂಜಾಪ್ರಕಾರ, ಕರ್ಮಾಚರಣೆ ಇವು ನಮ್ಮ ಬದುಕು ಶುಚಿಯಾಗಿ, ದೇವರ ಕಡೆ ಆಲೋಚನೆ ತಿರುಗುವವರೆಗೂ ಒಳಿತನ್ನು ಮಾಡುವುದಿಲ್ಲ. ಹಾಗೇ ಭೂಮಿಯ ಮೇಲಿನ ವಸ್ತುಸಂಪತ್ತಿಯನ್ನು ಸ್ವಾಮ್ಯವಾಗಿ ನಂಬಿರುವ ಜನರಿಗೆ ತುಂಬ ಎಚ್ಚರಿಕೆ ಕೊಡುತ್ತಾರೆ. "ನೆಚ್ಚದಿರೀಭಾಗ್ಯ ಆರಿಗೂ ಸ್ಥಿರವಲ್ಲ| ನೆಚ್ಚದಿರೆಚ್ಚರಿಕೆ. ಪೊಡವಿಪನೊಲುಮೆಯ ಕಡುಮೆಚ್ಚಿ ಗರ್ವದಿ, ನಡೆಯದಿರು | ಕೊಡನ, ಅಂಧಕ ಹೊತ್ತು ನಡೆವಂತೆ ಅಧಿಕಾರ ಕಡೆಯಲಿ; ಕಡುಚಳಕನು ತಾನು ಎನುತ ಪರರ ಅವಘಡಿಸದಿರು. ಒಡಬಗ್ಗರ ಬಾಯಿ ಬಡಿದು ಪಾಪದಿ ಹೆಜ್ಜೆ ಇಡಬೇಡ ಎಚ್ಚರಿಕೆ, ಕಡೆಗೆ ಅದು ಒಳ್ಳಿಯದನ್ನು ಮಾಡದು. ದೊರೆಯುನ್ನ ಬಲವು, ಸುಸ್ಥಿರವು ಎಂದು ಎಲ್ಲರ ಹಗೆ ತರವಲ್ಲ. ಉರಗನ ಮುತ್ತಿ ಕಟ್ಟಿರುವೆಯು ಕೊರೆದಂಥ ತೆರದಿನಪ್ಪುದು. ಸಿರಿಸೊಡರಿಗೆ ಗುರುಹಿರಿಯರ ಅವಮಾನ ಬಿರುಗಾಳಿ, ಎಚ್ಚರಿಕೆ. ಹಾಗೆಯೇ ಲೋಕಾಪವಾದಕಂಜಿ ನಡೆವುದು ವಿವೇಕ. ಕಾಕುಜನರ ಚಾಡಿಕೇಳಿ ಕೋಪೋದ್ರೇಕ ಬೇಡ, ಎಚ್ಚರಿಕೆ, ಭೂಕಾಂತೆ ನಡನಡಗುವಳು. ನಿಷ್ಠುರದ ವಾಕು ಬೇಡ. ಎಚ್ಚರಿಕೆ.

ನಳಮಾಂಧಾತರು ಏನಾದರೆಂಬುದ ನೀ ತಿಳಿದುನೋಡು. ಅಳಿವುದು ಕಾಯ, ಉಳಿವುದೊಂದೇ ಕೀರ್ತಿ ಇಳೆಯೊಳಗೆ. ಅಳಲಿಸಿ ಪರರನು ಗಳಿಸಿತಂದ ಅರ್ಥವು ಉಳಿಯದು. ಉಳಿದ ಅಲ್ಪಕಾಲದಿ ಧರ್ಮದ ಹಾದಿಯ ಹಳಿಯಬೇಡ, ಎಚ್ಚರಿಕೆ. ಪರಸತಿ ಧನ ಅಪಹರಿಸಲು ಸಿರಿ ಮೊಗದಿರುಹುವಳು; ನೆರೆ ಛಿದ್ರಕುಂಭದ ನೀರಿನಂತೆ. ಆಯುಷ್ಯ ಸರಿಯುತಿದೆ. ಬರುವ ಹಾನಿ ವೃದ್ಧಿ ತನ್ನ ಕಾಲವ ಮೀರಲರಿಯದು. ವರದ ಪುರಂದರ ವಿಠಲನ ಚರಣಕಮಲವ ಮರೆಯದಿರೆಚ್ಚರಿಕೆ.

ಈ ಅಂಶಗಳನ್ನು ಉದಾಹರಿಸುವ ದಾಸರ ನಿದರ್ಶನಗಳಿಗೆ ಕೊನೆಯಿಲ್ಲ. ಮಿತಿಯಿಲ್ಲ. ಅವರ ಶ್ರದ್ಧೆ ನಮ್ಮ ಮನಸ್ಸನ್ನು ಒಲಿಸುತ್ತಿದೆ. ಎರಡು ಮೂರು ಹಾಡುಗಳಂತೂ ಜನ ಹೆಣ್ಣು, ಧನ ಇವುಗಳ ಪರವಾಗಿರುವ ಅತೀವ ಪ್ರೀತಿಯನ್ನು ಕುರಿತವು. ಅವುಗಳ ಗೀಳು, ಮಾನವ ವರ್ಗದಲ್ಲಿ ಬಹುಭಾಗಕ್ಕೆ—ಬಹು ಏನು ಸಾಧಾರಣವಾಗಿ ಎಲ್ಲರಿಗೂ—ಸಾಮಾನ್ಯ. ಆದರೆ ದಾಸರಿಗೆ ಗೊತ್ತು. ರೊಕ್ಕ ಏನನ್ನು ಮಾಡುತ್ತದೆ, ಮಾಡಬಲ್ಲದು ಎಷ್ಟು ಒಳ್ಳೆಯದನ್ನೂ ಮಾಡಬಲ್ಲದು ಎಂಬುದನ್ನು ಅರಿತವರಾದ್ದರಿಂದ ರೊಕ್ಕದಿಂದಿರುವ, ಒಳ್ಳೆಯ ಪ್ರಯೋಜನಗಳಿಗೆ ಪೂರ್ತಿ ವಿರುದ್ಧವಾಗದೆ ನಿಲ್ಲುತ್ತಾರೆ. ಹೆಂಡತಿ ಒಳ್ಳೆಯ ಹೆಂಗಸಾಗಿದ್ದರೆ ತನ್ನ ಗಂಡನ ಬಾಳಿಗೆ ಎಷ್ಟು ಒಳ್ಳೆಯ ಪ್ರಭಾವವುಳ್ಳವಳಾಗಿ ಇರಬಹುದು ಎಂಬುದನ್ನು ಅರಿತಿದ್ದರು. ತಮ್ಮ ಬದುಕಿನಲ್ಲಿಯೇ ತಮ್ಮ ಹೆಂಡತಿ ಎಷ್ಟೋ ಉದಾತ್ತ ಉಪಕಾರ ಮಾಡಿದ್ದಳು, ತಮ್ಮ ಬದುಕನ್ನು ರೂಪಾಂತರಗೊಳಿಸಿದರು, ಎಂಬುದನ್ನು ಅರಿತವರಲ್ಲವೆ. ಆದರೂ ಕಡೆಯ ತೀರ್ಮಾನಮಾಡಿ ಬೆಲೆಗಳನ್ನು ಕಟ್ಟಬೇಕಾದಾಗ ಯಾವ ಯಾವುದನ್ನು ಜನ ತಮ್ಮದನ್ನಾಗಿ ಮಾಡಿಕೊಳ್ಳ ಬಯಸುತ್ತಾರೆಯೊ, ತೃಪ್ತಿಯ ಕಾರಣಗಳನ್ನು, ಸಂತೋಷಗಳನ್ನು ಬಯಸುತ್ತಾರೆಯೊ ಅವೆಲ್ಲ ಸಾಧಾರಣವಾಗಿ ಒಂದು ಕ್ಷಣದಲ್ಲಿ ಒಡೆದು ಹೋಗತಕ್ಕವು. ನೀರಗುಳ್ಳೆಯಂತೆ, ಟೊಳ್ಳು ಎಂದು ಅವರಿಗನಿಸಿದೆ.

ಲೊಳಲೊಟ್ಟೆ ಬದುಕು ಲೊಳಲೊಟ್ಟೆ || ಆನೆ ಕುದುರೆ ಒಂಟೆ, ಬಹುಸೇನೆ ಭಂಡಾರವು ಲೊಳಲೊಟ್ಟೆ; ಮಾನಿನಿಯರ ಸಂಗ ಲೊಳಲೊಟ್ಟೆ | ದೊಡ್ಡ ಕ್ಷೋಣೀಶನೆಂಬುದು ಲೊಳಲೊಟ್ಟೆ; ಮುತ್ತು ಮಾಣಿಕ್ಯ ಲೊಳಲೊಟ್ಟೆ |

ಚಿನ್ನ, ಛತ್ರ, ಚಾಮರ, ಧ್ವಜ ಲೊಳಲೊಟ್ಟೆ; ಸುತ್ತಗಲಕೋಟೆ ಉತ್ತಮ ಪ್ರಭುತ್ವ, ಕಂಟಕರೆಂಬರು ನಿನ್ನ ನಂಟರು ಇಷ್ಟರು ಲೊಳಲೊಟ್ಟೆ ಉಂಟಾದ ಪುರಂದರ ವಿಠಲರಾಯನ ಭಂಟನಾಗದವ ಲೊಳಲೊಟ್ಟೆ" ||

ಆದರೂ ಪುರಂದರದಾಸರು ಇದೆಲ್ಲ ಸುತರಾಂ ವ್ಯರ್ಥವೆಂದು, ನಮ್ಮನ್ನು ಬಿಡಿರೆನ್ನುವುದಿಲ್ಲ. ಅವನ್ನು ಸ್ವೀಕರಿಸಬಹುದು. ನೆಲದಮೇಲೆ ಹುಟ್ಟಿದಾಗ ಮಾನವನಾಗಿರುವಾಗ ಬಾಳನ್ನು ಚೆನ್ನಾಗಿ ಬಾಳಬೇಕು. ಒಂದು ವಿಚಿತ್ರವಾದ, ಆದರೆ ತುಂಬ ಅರ್ಥವತ್ತಾದ ಪದವಿದೆ. ಯಾರೋ ಮಣ್ಣನ್ನು, ನೆಲವನ್ನು ಹೀನಾಯಪಡಿಸುವಂತೆ ಮಾತಾಡಿರಬೇಕು. ಆ ಸಂಬಂಧದಲ್ಲಿ ಅವರು ನುಡಿದಿರಬಹುದಾದ ಹಾಡು;

ಮಣ್ಣಿಂದ ಕಾಯ ಮಣ್ಣಿಂದ || ಪ ||
ಮಣ್ಣಿಂದ ಸಕಲ ವಸ್ತುಗಳು ||
ಮಣ್ಣು ಬಿಟ್ಟವರಿಗೆ ಆಧಾರವಿಲ್ಲ |
ಅಣ್ಣಗಳೆಲ್ಲರು ಕೇಳಿರಯ್ಯ ||

ಅನ್ನ ಉದಕ ಊಟವೀಯೋದು ಮಣ್ಣು |
ಬಣ್ಣ ಬಂಗಾರ ಬೊಕ್ಕಸವೆಲ್ಲ ಮಣ್ಣು |
ಉನ್ನತವಾದ ಪರ್ವತವೆಲ್ಲ ಮಣ್ಣು |
ಕಣ್ಣು ಮೂರುಳ್ಳದ ಕೈಲಾಸ ಮಣ್ಣು ||

ದೇವರ ಗುಡಿ ಮನೆ ಮಠವೆಲ್ಲ ಮಣ್ಣು |
ಆವುಗೆ ಸುಡುವ ಮಡಕೆ ತಾ ಮಣ್ಣು |
ಕೋವಿದರರಸರ ಕೋಟೆ ಕೊತ್ತಲ ಮಣ್ಣು |
ಪಾವನ ಗಂಗೆಯ ತಡಿಯೆಲ್ಲ ಮಣ್ಣು ||

ಬತ್ತ ಭರಣ ಧಾನ್ಯ ಬೆಳೆವುದು ಮಣ್ಣು |
ಸತ್ತವರನು ಹೂಳಿ ಸುಡುವುದು ಮಣ್ಣು |
ಉತ್ತಮವಾದ ವೈಕುಂಠವೇ ಮಣ್ಣು |
ಪುರಂದರ ವಿಠಲನ ಪುರವೆಲ್ಲ ಮಣ್ಣು ||

ಕೃಪಣತೆಯಿಂದಲೂ ಕಟ್ಟುನಿಟ್ಟು ನಿರ್ಬಂಧಗಳಿಂದಲೂ ತನ್ನನ್ನು ಬಿಡಿಸಿ ಕೊಳ್ಳಲು ಮನಸ್ಸಿನಲ್ಲಿ ಶಕ್ತಿಯಿರುವವನಿಗೆ ಲೋಕದ ಯಾವ ಸಂಗತಿಯೂ ಚಿಂತೆಯನ್ನಾಗಲಿ ಕಳವಳವನ್ನಾಗಲಿ ತರುವುದಿಲ್ಲ. ಯಾವೊಂದು ಸಮಯ ದಲ್ಲಿಯೂ ಮನಸ್ಸು ವ್ಯಗ್ರವಾದರೆ ಅದು ಒಂದು ಕ್ಷಣದ ಕೆದರು. ವ್ಯಕ್ತಿಯ ಬದುಕಿನ ಧಾತು–ಪ್ರವೃತ್ತಿಯಲ್ಲಿ ನೆಲಸಿದ್ದಲ್ಲ. ಆದುದರಿಂದಲೇ ಅವರು ನುಡಿದುದು. "ಈಸಬೇಕು–ಇದ್ದು ಜೈಸಬೇಕು" ಎಂದು. ಅಷ್ಟಾದರೂ ಅವರಿಗೆ ಸಂಸಾರ ಹೇಸಿಗೆಯೇ. ಅಲ್ಲಿ ಆಶಾಲೇಶ ಮಾಡದ್ಹಾಂಗ ಈಸ ಬೇಕು. ತಾಮರಸ ಜಲದಂತೆ ಪ್ರೇಮವಿಟ್ಟು ಈಸಬೇಕು. ಎಷ್ಟು ಶತಮಾನಗಳಿಂದ ಬಂದಿದೆ ಈ ಹೋಲಿಕೆ ನಮಗೆ. ಗೇರುಹಣ್ಣಿನಲ್ಲಿ ಬೀಜ ಸೇರದಂತೆ, ಸಂಸಾರದಲ್ಲಿ ಮೀರಿ ಆಶೆ ಮಾಡದ್ಹಾಂಗೆ; ಹಾಗೆಯೇ ಮಾಂಸದಾಸೆಗೆ ಮತ್ಸ್ಯ ಸಿಲುಕಿ ಹಿಂಸೆ ಪಟ್ಟಪರಿಯಂತೆ ಮೋಸ ಹೋಗ ದ್ಹಾಂಗೆ ಇದ್ದು ಜೈಸಬೇಕು. ಅದು ದಾರಿ, ನಿಲವು. ಅದನ್ನು ಅನು ಸರಿಸಿದರೆ ಮಾತ್ರ ಮನಸ್ಸಿಗೆ ನೆಮ್ಮದಿ. ಯಾವ ಕಡೆ ಕಣ್ಣು ತಿರುಗಿಸಿ ದರೂ ಸುಖಾಭಿಲಾಷೆ, ಪಾಶವೀವರ್ತನೆ. ಯಾವುದು ಮಾನವನ ಬಾಳಿನ ಮಟ್ಟವನ್ನು ಇಳಿಸುತ್ತದೆಯೊ ಅಂಥ ಸಂಗತಿ ಈ ನೋಟ ಅವರ ಮನಸ್ಸಿಗೆ ಪೆಟ್ಟು ಕೊಡುತ್ತದೆ. ಆದರೆ ಆ ವಿಷಯಸುಖ ಬೇಗ ಆಯಾಸ ತರುತ್ತದೆ. ಅಲ್ಲಿಗೂ ಪೂರ್ತಿಯಾಗಿ ತೃಪ್ತಿ ತರುವುದಿಲ್ಲ. ದಾಹ, ರಾಗಾದಿಗಳನ್ನು ಉಪಶಮನ ಮಾಡುವುದಿಲ್ಲ. ಬದುಕನ್ನು ಮನಸ್ಸನ್ನು ಅಸ್ಥಿಮಿತ ಮಾಡುತ್ತದೆ. ಕೆಟ್ಟ ದಾರಿ, ನಡತೆಗಳಿಗೆ ಮನುಷ್ಯರು ಈಡಾಗುವಂತೆ ಮಾಡುತ್ತದೆ.

ಇನ್ನೊಂದು ಕಡೆ ನಟನೆ ಮಾಡುವವರು, ಇಬ್ಬಗೆಯ ಮನಸ್ಸಿನ ಜನ ಇದ್ದಾರೆ. ಅವರ ಪಂಗಡ ಹೆಚ್ಚು ಕೆಟ್ಟದು. ತಮಗೆ ಮೇಲಾದ್ದಾವುದು ಎಂಬುದು ಗೊತ್ತಾಗಿದ್ದರೂ ಲೋಕದ ಮನಸ್ಸಿನ ಮೇಲೆ ತಮ್ಮ ಪ್ರಭಾವ ವನ್ನು ಹೆಚ್ಚು ಮಾಡಿಕೊಳ್ಳುವ ಉದ್ದೇಶದಿಂದ ನಡವಳಿಕೆಯ ಹೊರ ಆಚಾರಗಳನ್ನು ಬಹು ಚೆನ್ನಾಗಿ ನಡಸುತ್ತಾರೆ. ಉತ್ತಮರಂತೆ ತೋರ್ಪಡಿಸಿ ಕೊಳ್ಳುತ್ತಾರೆ. ಒಳಗೆ ಅವರದು ಕೊಳೆತ ಬಾಳು. ಜನಜನಿತವಾದ ಒಂದು ಪದವಿದೆ :

ಉದರ ವೈರಾಗ್ಯವಿದು | ನಮ್ಮ ಪದುಮನಾಭನಲ್ಲಿ ಲೇಶಭಕುತಿಯಿಲ್ಲ | ಎಂಬುದು ಅದರ ಪಲ್ಲವಿ.*

ಉದಯ ಕಾಲದೊಳೆದ್ದು ಗಡಗಡ ನಡಗುತ |
ನದಿಯಲಿ ಮಿಂದೆವೆಂದು ಹಿಗ್ಗುತಲಿ |
ಮದ ಮತ್ಸರ ಕ್ರೋಧ ಒಳಗೆ ತುಂಬಿಟ್ಟುಕೊಂಡು
ಬದಿಯಲ್ಲಿದ್ದವರಿಗೆ ಆಶ್ಚರ್ಯ ತೋರುವುದು | ಉದರ ವೈರಾಗ್ಯವಿದು ||

ಕಂಚುಗಾರನ ಬಿಡಾರದಂದದಿ
ಕಂಚು ಹಿತ್ತಾಳೆ ಪ್ರತಿಮೆಗಳಂತೆ |
ಮಿಂಚಬೇಕೆಂದು ಬಲು ಜ್ಯೋತಿಗಳನು ಹಚ್ಚಿ
ವಂಚನೆಯಲಿ ಪೂಜೆಯನು ಮಾಡುವರು || ಉದರ ||

ಕರದಲಿ ಜಪಮಣಿ ಬಾಯಲಿ ಮಂತ್ರವು |
ಅರಿವೆ ಮುಸುಕು ಮೋರೆಗೆ ಹಾಕಿ
ಪರಸತಿಯರ ಗುಣ ಮನದಲಿ ಸ್ಮರಿಸುತ |
ಪರಮ ವೈರಾಗ್ಯಶಾಲಿ ಎಂದೆನಿಸುವ || ಉದರ ||

ಬೂಟಕತನದಲಿ ಬಹಳ ಭಕುತಿ ಮಾಡಿ
ದಿಟನೀತ ಸರಿಯಾರಿಲ್ಲೆನಿಸಿ
ನಾಟಕಸ್ತ್ರೀಯಂತೆ ಬಯಲ ಡಂಭವ ತೋರಿ
ಊಟದ ಮಾರ್ಗದ ಜ್ಞಾನವಿದಲ್ಲದೆ || ಉದರ ||

ನಾನು ಎಂಬುದ ಬಿಟ್ಟು ಜ್ಞಾನಿಗಳೊಡನಾಡಿ
ಏನಾದರೂ ಹರಿಪ್ರೇರಣೆಯೆಂದು
ಧ್ಯಾನಿಸಿ ಮೌನದಿ ಪುರಂದರ ವಿಠಲನ
ಕಾಣದೆ ಮಾಡಿದ ಕಾರ್ಯಗಳೆಲ್ಲವೂ || ಉದರ ವೈರಾಗ್ಯವಿದು ||

---

* ಪಲ್ಲವಿ ಸಾಮಾನ್ಯವಾಗಿ ತತ್ವದ ಅಥವಾ ಅನುಭವದ ಸಾರಾಂಶವನ್ನು ತಿಳಿಸುತ್ತದೆ. ಅದನ್ನು ಪ್ರತಿಯೊಂದು ಪದದ ಕಡೆಯಲ್ಲಿಯೂ ಪುನರಾವೃತ್ತಿ ಮಾಡಿಕೊಂಡು ಪದವನ್ನು ಹೇಳುವುದು ರೂಢಿ.

ಎಂದರೆ ತಪ್ಪು ತೋರಿಕೆಗಳನ್ನು ಒಂದು ಬಗೆಯಲ್ಲಿ ತಿಳಿಸಿ, ಮನಸ್ಸನ್ನು ಯಾವ ರೀತಿ ತಿದ್ದಿಕೊಂಡರೆ ಮನಸ್ಸನ್ನು ಸಸಿನೆ ಮಾಡಿಕೊಂಡರೆ ಬದುಕು ಮೇಲ್ಪಡುವುದು ಎಂದಹಾಗಾಯಿತು. ಇಲ್ಲವಾದರೆ ಅದು ಬರಿಯ ಜೀವನವನ್ನು ಸಂಪಾದಿಸಿಕೊಳ್ಳುವ ಮಾರ್ಗವಾಗುತ್ತದೆ. ಅಥವಾ ಭೋಗ ವನ್ನು ಸಾಧಿಸುವುದಕ್ಕೆ ಸ್ಥಾಪಿಸುವುದಕ್ಕೆ ಸುಳ್ಳನ್ನು ಮರೆಮಾಡುವುದು ಒಂದು ಉಪಾಯವಾಗುತ್ತದೆ ಮಾತ್ರ.

ಇಂಥ ಚಿತ್ರಗಳು ಭೂಮಿಯ ಮೇಲೆ ಅನೇಕ. ತೋರಿಕೆಗೂ ವಾಸ್ತವ್ಯತೆಗೂ ಇರುವ ವ್ಯತ್ಯಾಸವನ್ನು ದಾಟಿ ಉತ್ತಮರೆಂಬವರು ಕೂಡ ಮುಂದುವರಿದು ಹೋಗುವುದಕ್ಕೆ ತುಂಬಾ ಕಾಲ ಹಿಡಿಯುತ್ತದೆ. ಉತ್ತಮ ಬಾಳನ್ನು ಸಾಧಿಸಿ, ಶುಚಿಯಾಗಿ ಮುಕ್ಕಾಗದೆ ಇರಬೇಕಾದರೆ ಪ್ರತಿ ಯೊಬ್ಬರೂ ತಮ್ಮ ಆಲೋಚನೆಗಳನ್ನೂ ಪ್ರವೃತ್ತಿ ನಿಲವುಗಳನ್ನೂ ಉನ್ನತ ಆದರ್ಶಗಳ ಕಡೆಗೆ ತಿರುಗಿಸಿಕೊಳ್ಳಬೇಕು. ಅದು ಆಗಬೇಕಾದರೆ ನಮ್ಮ ಸಂಕಲ್ಪಗಳು ಮೇಲ್ಪಟ್ಟದವಾಗಬೇಕು. ಅವನ್ನು ಕಾರ್ಯಕ್ಕೆ ತಿರುಗಿಸಲು ಯತ್ನಿಸಬೇಕು. ಗಮ್ಯ ಅಂಥದಾದರೆ ಕಣ್ಣ ಸೆಳೆಗಳನ್ನೂ, ವಿಷಯಸುಖ ಗಳನ್ನೂ ತೊರೆಯಬೇಕಾಗುತ್ತದೆ. ಪ್ರಾಜ್ಞರಾದವರ ಸಹವಾಸವನ್ನು ಹುಡುಕಿ ಕಂಡುಕೊಳ್ಳಬೇಕಾಗುತ್ತದೆ ಎನ್ನುತ್ತಾರೆ ದಾಸರು. ಹಾಗೆ ನಡೆಯುವುದೆಲ್ಲ ದೇವರ ಪ್ರೇರಣೆಯಿಂದ ನಡೆಯುತ್ತದೆ ಎಂದು ಭಾವಗತ ಮಾಡಿಕೊಳ್ಳಬೇಕಾಗುತ್ತದೆ. ಸದ್ದುಗದ್ದಲವಿಲ್ಲದೆ ಹೊರಗಿನ ಯಾವ ಸಂಗತಿಯಿಂದಲೂ ವ್ಯಗ್ರನಾಗದೆ ಪುರಂದರ ವಿಠಲನ ಧ್ಯಾನದಲ್ಲಿ ತೊಡಗ ಬೇಕು. ದೇವರ ಚಿಂತನೆಯನ್ನುಳಿದ ಎಲ್ಲ ಕಾರ್ಯವೂ ಅಸತ್ ನಿಷ್ಪ್ರಯೋಜಕ ಎಂದೆಣಿಸಬೇಕು.

ಸಮಾಜದಲ್ಲಿ ಮತ್ತು ವ್ಯಕ್ತಿಜೀವನದಲ್ಲಿ ಅನೇಕ ಸಂಜ್ಞೆ, ಸಂಕೇತ ಗಳನ್ನು ಶಬ್ದಗಳನ್ನು, ಯೋಚನೆಗಳನ್ನು, ನಿಲವು ನಡತೆಗಳನ್ನು ಮನಸ್ಸಿಗೆ ತಂದುಕೊಂಡು ಗಂಡಸರನ್ನು ಕುರಿತಾಗಲಿ, ಹೆಂಗಸರನ್ನು ಕುರಿತಾಗಲಿ ಅವರು ಮಾತಾಡಿದಾಗ ಅಥವಾ ಅವರು ಕಣ್ಣಿಗೆ ಬಿದ್ದಾಗ ನಿಜ ಯಾವುದು ಸುಳ್ಳಾವುದು ಎಂಬುದಕ್ಕಿರುವ ವ್ಯತ್ಯಾಸ ತಿಳಿಸುತ್ತಾರೆ. ನಿಜವಾಗಿ ಶುಚಿ ಯಾರು ದೈವಭಕ್ತರಾರು, ಅಲ್ಲದವರಾರು ಎಂಬುದನ್ನೂ ಹೇಳುತ್ತಾರೆ.

ನಡತೆಯನ್ನು ಪ್ರಚೋದಿಸುವ ಪ್ರವೃತ್ತಿಯನ್ನು ಶುದ್ಧಿ ಮಾಡಬೇಕು. ಇದಾದ ಹೊರತು ಬದುಕು ಉತ್ತಮಪಡದು. ಈ ನಿಲವು ಆತನನ್ನೂ ಕಠಿಣವಾಗಿ ಕೆಲವು ಬಾರಿ ಮಾತಾಡುವಂತೆ ಮಾಡುತ್ತದೆ. ಹೊಲೆಯರ ಕಡೆ ನೋಡುವುದಾಗಲಿ ಅಥವಾ ಅವರ ಸಹವಾಸವಾಗಲಿ ಮೈಲಿಗೆ, ಕೊಳೆ ಮಾಡುತ್ತದೆ ಎಂಬ ಭಾವದ ರೀತಿ ಅದಕ್ಕೆ ದೊಡ್ಡ ಉದಾಹರಣೆ. ನಾಡಿನ ದುರದೃಷ್ಟದಿಂದ ಜಾತಿ ಪದ್ಧತಿಗೆ ಸೇರದೆ ಹೊರಗಿದ್ದ ಒಂದು ದೊಡ್ಡ ಜನವರ್ಗವಿತ್ತು. ಹೊಲೆ ಎಂಬ ಮಾತು ಬರಿಯ ಜನವರ್ಗಕ್ಕೆ ಹೊಂದುವ ಮಾತು ಮಾತ್ರವಲ್ಲ. ಅತ್ಯುನ್ನತ ವರ್ಗದವರೆನ್ನಿಸಿಕೊಂಡವರ ಮನೆಗಳಲ್ಲಿಯೂ ತಾಯಿ ಮಗುವನ್ನು ಹೆತ್ತ ಮನೆಗೆ ಹೊಲೆಮನೆ ಎಂಬ ಹೆಸರಿದೆ. ಹಾಗೆಯೇ ಕೊಳೆಯಾದ ಜನರನ್ನು ಬಿಡದಂತೆ, ಮನೆಯ ಒಳಗೆ ಒಂದು ಕೊಠಡಿಯನ್ನು ಪ್ರತ್ಯೇಕವಾಗಿ ಮಾಡಿಕೊಂಡು ಅಲ್ಲಿ ತಮ್ಮ ದೇವರುಗಳನ್ನು ಇಟ್ಟುಕೊಂಡು ಪೂಜೆ ಮಾಡುವುದನ್ನು ಮಾಡಿಕೊಂಡರು. ದಾಸರೆನ್ನುತ್ತಾರೆ; ಮನುಷ್ಯನ ಕೋಪ ದೇಹದೊಳಗಿನ ಹೊಲೆಯಲ್ಲವೆ? ಇನ್ನೊಬ್ಬನ ಧನ, ಹೆಂಡತಿ ಹೊಲೆಯಲ್ಲವೆ? ಜನ ಹೊರಗಿರುವ ಕೊಳೆಯನ್ನು ತಮ್ಮ ದೇಹದ ಒಳಗಿನ ಕೊಳೆಯನ್ನು ಮುಟ್ಟಿಕೊಂಡರೆ ಯಾವ ಬಗೆಯ ಚಿಕಿತ್ಸೆ ಈ ರೋಗವನ್ನು ಪರಿಹರಿಸಬಲ್ಲದು ಎನ್ನುತ್ತಾರೆ.

ಹೊಲೆಯನನ್ನು ಕಂಡು, ಎಂದರೆ, ಯಾರು ಕೊಳೆಯವರು ಅಥವಾ ಕುಲಗಳ ಹೊರಗಿನವರು ಎಂದು ಎಣಿಸಲ್ಪಟ್ಟಿದ್ದರೊ ಎಂಬುದನ್ನು ಕುರಿತು ದಾಸರು ಬರೆದ ಪದಗಳಲ್ಲಿ ಎರಡು ಮೂರು ಪ್ರಖ್ಯಾತವಾಗಿದೆ. ಒಂದು; "ಹೊಲೆಯ, ಹೊಲತಿ ಇವರವರಲ್ಲ | ಹೊಲಗೇರಿಯು ಹೊಲೆಯನ ಹೊಲತಿಯಿಂದಲ್ಲ" ಎಂಬುದು. ಇನ್ನೊಂದು "ಹೊಲೆಯ ಹೊರಗಿಹನೆ ಒಳಗಿಲ್ಲವೆ? ಸಲೆ ಶಾಸ್ತ್ರವನು ತಿಳಿದುಬಲ್ಲವರು ಹೇಳಿ" ಎಂಬುದು. ಹೊಲೆಯ ಹೊಲತಿ ಇವರು ಅವರು ಅಲ್ಲ. ಯಾವನು ಸಂಸಾರದ ಸಿಕ್ಕುಗಳಲ್ಲಿ ಸಿಕ್ಕಿಹಾಕಿಕೊಳ್ಳುತ್ತಾನೊ, ತಾಯಿ ತಂದೆಯರಿಗೆ ಕಠಿಣವಾದ ಮಾತುಗಳನ್ನಾಡುತ್ತಾನೊ, ಅವನು ಹೊಲೆಯ; ಗಂಡುಮಕ್ಕಳನ್ನು ಹೆತ್ತು ತಾನು ಹಿರಿಯಳೆಂದುಕೊಂಡು ಗಂಡನನ್ನು ದೂಷಿಸುವವಳು ಹೊಲತಿ; ಕಲೆ ಶಾಸ್ತ್ರಗಳನ್ನು ಕಲಿತು ಹಿರಿಯರಿಗೆ ಗಾಸಿಯನ್ನುಂಟುಮಾಡುವವ

ಹೊಲೆಯ. ತನ್ನ ಗಂಡನಲ್ಲದೆ ಇನ್ನೊಬ್ಬನಿಗೆ ಪ್ರಸನ್ನಳಾಗಿ ಗಂಡನಿಗೆ ವಿರುದ್ಧವಾಗಿ ಕ್ಲೇಶಗೊಳಿಸುವವಳು ಹೊಲತಿ; ತನ್ನ ಒಡೆಯನೆದುರು ನಿಂತು ವಾದಿಸುತ್ತ ಅವಿಧೇಯನಾಗಿ ನುಡಿಯುವುದನ್ನೇ ರೂಢಿಯಾಗಿಟ್ಟು ಕೊಳ್ಳುವವನೆ ಹೊಲೆಯ; ಗಂಡನಿಗೆ ಬಡತನ ಬಂದಾಗ ಅವನನ್ನು ನಿರ್ಲಕ್ಷಿಸುವವಳು ಹೊಲತಿ; ಮುಂತಾಗಿ ಮೊದಲ ಪದ್ಯ ಬೆಳೆಯುತ್ತದೆ. ಎರಡನೆಯದರಲ್ಲಿ ಇನ್ನಷ್ಟು ಹೊಂದುವ ಹೆಚ್ಚು ಖಚಿತವಾದ ವರ್ಣನೆಯಿದೆ;

"ಶೀಲವನು ಕೈಕೊಂಡು - ನಡಸದಾತನು; ಆಳಾಗಿ ಅರಸನಿಗೆ ಕೇಡು ಬಗೆವವನು; ಸೂಳೆಯನ್ನು ಕಾಮಿಸುವವನು, ಕೊಂಡ ಸಾಲಗಳನ್ನು ತೀರಿಸ ದಾತನು; ಲಂಡತನದಲಿ ನಡೆವವನು; ಉಂಡ ಮನೆಗೆ ಎರಡನ್ನು ಬಗೆವವನು; ಹೆಂಡತಿಯ ಇಚ್ಛೆಯವನು; ಇದ್ದಾಗ ದಾನಧರ್ಮ ಮಾಡದವನು, ಮದ್ದಿಕ್ಕಿ ಕೊಲ್ಲುವವನು, ಬದ್ಧವಾದ ನಡೆನುಡಿ ಇಲ್ಲದಾತನು; ಶುದ್ಧ ತಾನೆಂಬಾತನು; ಆಸೆ ಮಾತನು ಕೊಟ್ಟ ಭಾಷೆ ತಪ್ಪುವವನು, ಲೇಸು ಉಪಕಾರ ಗಳ ಮಾಡದವನು; ಮೋಸದಲಿ ಜೀವಗಳನ್ನು ಕೆಡಿಸುವವನು, ಹುಸಿ ಯನು ಬಗಳುವವನು; ಅರಿತು ಆಚಾರವನು ನಡಸದಾತನು; ಪರಸತಿಗೆ ಅಳುಪುವವನು, ಗುರು ಹಿರಿಯರನ್ನು ಕಂಡು ನಮಿಸದಾತನು, ಪುರಂದರ ವಿಠಲನನ್ನು ನೆನೆಯದವನು—ಹೊಲೆಯ" ಹೊಲೆಯನಾಗಿಯೊ, ಬ್ರಾಹ್ಮಣ ನಾಗಿಯೊ, ಹುಟ್ಟಿದುದು ಮಾತ್ರ ನಿಜವಾದ ಬ್ರಾಹ್ಮಣನನ್ನೂ, ನಿಜವಾದ ಹೊಲೆಯನನ್ನೂ ಮಾಡದು. ಶೀಲ, ನಡತೆ, ಇವು ನಿಜವಾದ ತಕ್ಕತನ ವನ್ನು ನಿರ್ಣಯಿಸುವುವು. ಇಲ್ಲಿನ ಗಣನೆ, ನೀತಿಗೆ ಸಂಬಂಧಿಸಿದುದು. ಇನ್ನೊಂದು ವರ್ಣನೆಯಲ್ಲಿ ಇನ್ನು ಕೆಲವು ದೋಷಗಳನ್ನು ನಿರ್ದೇಶಿಸು ತ್ತಾರೆ. ಇನ್ನೊಬ್ಬರಿಗೆ ತಿಳಿವಳಿಕೆ ಕೊಡದಾತನು; ಉಳ್ಳವನಾಗಿ ದಾನ ಧರ್ಮ ಮಾಡದವನು, ಸಾಲ ಮಾಡುತ್ತ ಅದನ್ನು ಹಿಂದಕ್ಕೆ ಕೊಡಲಿಷ್ಟ ಉಳ್ಳದವನು, ಇತರರಿಗೆ ನಿಂದೆಯ ಮಾತುಗಳನ್ನಾಡುತ್ತ ಅದನ್ನು ಹರಡು ವವನು; ಗಂಡ ಹೆಂಡಿರ ನಡುವೆ ಕೀಟಲೆ ತಂದಿಡುವವನು; ಆಸೆಗಳನ್ನು ಉತ್ಪತ್ತಿ ಮಾಡಿ ಕೊಟ್ಟ ಮಾತನ್ನು ಮುರಿವವನು, ಅನ್ಯಾಯವನು ಕಂಡು ಅದನ್ನು ಪರಿಹರಿಸಲೊಲ್ಲದವನು, ಇತರರನ್ನು ಹಳಿದು ತನ್ನನ್ನು ಹೊಗಳಿ ಕೊಳ್ಳುವವನು—ಊರ ಹೊರಗೆ ಮಾತ್ರವಿದ್ದಾರೆಯೆ ಈ ಅಂತ್ಯಜರು?

ಹೊರಗೆ ಮಾತ್ರವಿಲ್ಲ, ಇಂಥ ಚಂಡಾಲರು. ಎಲ್ಲರ ಒಳಗೂ ಇದ್ದಾರೆ. ಇಂಥವು ಎಷ್ಟೊ ಪದ್ಯಗಳು.

ಎಲ್ಲ ಕಾಲದಲ್ಲಿಯೂ ಇಂಥ ಇನ್ನೊಂದು ಬಗೆಯ ಜನರಿದ್ದಾರೆ. ತಾವು ಶುಚಿ ಎಂದುಕೊಂಡು ಅವರು ಇತರರ ಸಂಪರ್ಕವನ್ನು ತೊರೆಯುತ್ತಾರೆ. ಇದರಲ್ಲಿ ಒಂದು ಬಗೆಯ ನಗೆಯೂ ಇದೆ. "ಮಡಿ, ಮಡಿ, ಎಂದು ಅಡಿಗಡಿಗ್ಹಾರುತಿ | ಮಡಿ ಎಲ್ಲಿ ಬಂತೆ ಬಿಕನಾಸಿ." ಎಷ್ಟು ನಿನ್ನ ನಟನೆ. ಎಲುಬು ಚರ್ಮ ಮಲಮೂತ್ರ ಕೋಶಗಳು ನಿನಗೆ ಹರ್ಷ ಕೊಡುತ್ತವೆ. ದೇಹದ ಒಂಬತ್ತು ದ್ವಾರಗಳು ಕೊಳೆಯಿಂದ ತುಂಬಿವೆ. ಅವುಗಳ ಸಂತಸಗಳಲ್ಲಿ ಓಲಾಡುತ್ತೀಯೆ. ಇನ್ನು ಅವು ಒದಗಿಸುವ ಸುಖಸೌಕರ್ಯಗಳೊ? ಹುಟ್ಟುಸೂತಕ, ಮೃತ್ಯುಸೂತಕ—ಈ ಎರಡು ಅಶುಚಿಗಳ ನಡುವೆ ನೀನು ನಿಂದಿರುವಿ. ಕಾವೇರಿಯಲಿ ಸುಮ್ಮನೆ ಒಂದು ಮುಳುಗುಹಾಕಿದರೆ ಆ ಕೊಳೆ ಹೋಗುವುದೇ? ಅದು ನಿನ್ನೊಳಗಿದೆ. ಎಂದವರೇ ನಿಜವಾದ ವಸ್ತುಗಳ ತಿಳಿವಳಿಕೆಯನ್ನು ಅರಿಯದಾತನಿಗೆ ಕರ್ಮದ ಕೊಳೆ ಹೋದೀತೆ? ಇನ್ನೊಂದು ಪದ್ಯ ಬರುತ್ತದೆ:

ಮಡಿಮಡಿ ಎಂದು ಅಡಿಗಡಿಗೆ ಹಾರುವಿ! ಮಡಿ ಮಾಡುವ ಬಗೆ ಬೇರುಂಟು | ಬಟ್ಟೆಯನು ನೀರೊಳಗದ್ದಿ ಒಣಗಿಸಿ ಉಟ್ಟುಕೊಂಡರೆ ಅದು ಮಡಿಯಲ್ಲ. ಹೊಟ್ಟೆಯೊಳಗಿನ ಕಾಮಕ್ರೋಧವನು ಬಿಟ್ಟು ನಡೆದರೆ | ಸಚಿತ್ತದಲ್ಲಿ ದಿನವೂ ನಡೆದರೆ ಅದು ಮಡಿ.

ಆಸೆಯನ್ನೂ ಕೋಪವನ್ನೂ, ಮದವನ್ನೂ, ಅಸೂಯೆಯನ್ನೂ ತೊರೆಯಬೇಕು. ಅವು ನಿನ್ನ ಒಡಲಲ್ಲಿ, ಮನಸ್ಸಿನಲ್ಲಿ ಇವೆ. ದಶಮಿ, ದ್ವಾದಶಿಯಂಥ ಪುಣ್ಯಕಾಲದಲ್ಲಿ ವಸುದೇವಸುತನನ್ನು ಪೂಜಿಸಿದರೆ ಅದು ಮಡಿ. ದೋಷಕ್ಕೆ ಅಂಜದೆ, ಪರಾನ್ನವನ್ನುಂಡು, ಯಮಪಾಶಕ್ಕೆ ಬೀಳುವುದು ಮಡಿಯಲ್ಲ. ಇತರರಿಗೆ ಸೇರಿದ ಆಹಾರವನ್ನು ನೀನು ತಿನ್ನುವುದಕ್ಕೆ ಹೆದರಬೇಕು. ಹಸಿದು ಭೂಸುರರು ಮಧ್ಯಾಹ್ನಕಾಲದಲ್ಲಿ ಕುಸಿದು ಮನೆಗೆ ಬಳಲುತ ಬಂದರೆ ಹುಸಿಯುತ್ತ ಗತಿಯಿಲ್ಲ ಎಂದು ಹೇಳಿ ಬಳಿಕ ಹಸನಾಗಿ ಅಟ್ಟ ಊಟಗಳನ್ನು ಬಡಿಸಿಕೊಂಡು ತಿನ್ನುವುದು. ಪಾಪಗಳನ್ನು ಹೊರಗೆ ಹಾಕಿ ಶುಚಿಮಾಡಿಕೊ. ವಿಠಲನನ್ನು ನೆನೆ. ಅನೇಕಮಂದಿ ತಾವು

ಆಚಾರವಂತರೆಂದು ನಟಿಸುತ್ತಾರೆ. ಭಕ್ತರೆಂದು ಕಾಣಿಸಿಕೊಳ್ಳುತ್ತಾರೆ. ಹೃದಯದಲ್ಲಿ ಅವರು ಅಶುಚಿ.

ಎಂಥ ಕೆಟ್ಟ ಕಾಲ ಬಂತು. ಮನುಷ್ಯರಾಗಿ ಹುಟ್ಟಿದ್ದೇವೆ. ಹರಿಯನ್ನು ಮರೆತಿದ್ದೇವೆ ಎಂದವರೇ ;

ಏನಾಯಿತೀ ಜನಕೆ....? ಮೌನವನು ಹಿಡಿದು ಮರೆತರು ಹರಿಯ. ನಾಲಿಗ್ಗೆ ಮುರಿದಿತೋ ನೆಗ್ಗಿಲ ಕೊನೆಮುಳ್ಳು. ಬಾಲಕತನದಲ್ಲಿ ಭೂತ ಹಿಡಿಯಿತೊ! ಮೇಲು ಕೆಳಗಿನ ತುಟಿ ಎರಡು ಒಂದಾಯಿತೊ! ಕಾಲ ಮೃತ್ಯು ಬಂದು ಕಂಗೆಡಿಸಿತೊ!

ಘಟಸರ್ಪ ಕಚ್ಚಿ ವಿಷ ಘನವಾಗಿ ಏರಿತೊ| ಕಟಕರಿಸಿ ನಾಲಿಗೆ ಕಡಿದು ಹೋಯಿತೊ| ಹಟದಲ್ಲಿ ಹರಿಯನ್ನು ನೆನೆಯದೆ ಇರುವಂಥ| ಕುಟಿಲ ಚಂಚಲ ಮನಸ್ಸು ಕೂಡಿ ಬಾಧಿಸಿತೊ

ಹರಿ ಎಂದರೆ ಇವರ ಶಿರ ಹರಿದು ತಾ ಬೀಳುವುದೆ| ಹರಿನಾಮ ಹಣೆಯಲ್ಲಿ ಬರೆದಿಲ್ಲವೆ | ವರದ ಪುರಂದರ ವಿಠಲ ರಾಯನ | ಸ್ಮರಿಸಿದರೆ ಸಿಡಿಲೆರಗಿ ಕೊಲ್ಲುವುದೇ || ಎನ್ನುತ್ತಾರೆ. ಇದು ಕೆಟ್ಟ ಕಾಲ, ನಿಜವಾಗಿ ಕಲಿಯುಗ ಹೇಗೆ ಹೊರಹೊಮ್ಮಿ ಹರಡಿದೆ. ಜನರು ಹರಿಯನ್ನು ಮರೆತರು. ಅಲ್ಪರನ್ನು ಹೊಗಳುತ್ತ ಗುರುಗಳಲ್ಲಿ ದೋಷ ಕಾಣುತ್ತಾರೆ. ಹಿರಿಯರನ್ನು ಲೆಕ್ಕಿಸರು. ಸಾಕಿ ಸಲಹಿದ ತಂದೆ ತಾಯಿಯರ ಮಾತು ಕೇಳರು. ಹೆಂಗಸರ ಮಾತನ್ನು ಕೊನೆಯಿಲ್ಲದಷ್ಟು ಕೇಳುವರು. ಕಣ್ಣಿಗೆ ಕಾಣುವುದನ್ನು ಕುರಿತು ನುಡಿಯುವರು. ಆಡಬಾರದುನನ್ನು ಆಡುವರು. ಅನ್ನವಿಟ್ಟವರಿಗೆ ದ್ರೋಹ ಮಾಡುವರು, ತಮ್ಮಲ್ಲಿ ಬಂದು ಬೇಡಿ ತಮ್ಮ ಗುಣಗಳನ್ನು ಹೊಗಳಿದವರ ನೆರವಿಗೆ ಕೂಡ ಒಂದು ರೂಪಾಯಿ ಕೊಡದೆ ತಮ್ಮ ಮೇಲೆ ಒತ್ತಾಯ ಹೇರುವವರಿಗೆ ಬಹುಧನ ಕೊಡುತ್ತಾರೆ. ಕಳ್ಳರು ಸುಳ್ಳರು ಇವರ ಗೆಳೆಯರು. ಒಳ್ಳೆಯವರಿಗೆ ಮೋಸ ಮಾಡುತ್ತಾರೆ. ತಬ್ಬಲಿಗಳಿಗೂ ಏನೂ ಇಲ್ಲದವರಿಗೂ ಸ್ವಲ್ಪವೂ ನೆರವು ಕೊಡರು; ಸಿಹಿ ತಿಂಡಿಗಳನ್ನು ಸಿರಿವಂತರಿಗೆ ಊಡುತ್ತಾರೆ. ಮದುವೆಯಾದ ಹೆಂಡಿರಿಗೆ ಮೋಸಮಾಡುತ್ತಾರೆ. ಕೋರಿದ ದೇವರುಗಳನ್ನು ಬಿಟ್ಟು ಕ್ಷುದ್ರದೇವತೆಯರಿಗೆ ಕಾಣಿಕೆ ಸಲ್ಲಿಸಿ ಮಣಿಯುತ್ತಾರೆ, ಇದು ನಿರಂತರ ಕಥೆ. ಅಂಥ

ಕಾಲ ಆಗಿನದೇ ಆಗಬೇಕಾಗಿಲ್ಲ. ಇಂದೂ ಅದೇ ಜನ, ಬಗೆ, ರೀತಿ, ನಡೆ–ನಮಗೂ ದಾಸರು ಕಲಿಸುವ ಪಾಠ ಇಷ್ಟು. ಭಾರತದ ಚರಿತ್ರೆಯಲ್ಲಿ, ಎಲ್ಲ ಯುಗಗಳಲ್ಲಿಯೂ, ಎಂದರೆ ಉಪನಿಷತ್ತುಗಳ ಕಾಲ ಬುದ್ಧವಚನಗಳ ಕಾಲ, ಸುಭಾಷಿತಗಳ ಕಾಲ ವೀರಶೈವ ವಚನಕಾರರ ಕಾಲ, ಎಲ್ಲದರಲ್ಲಿಯೂ ನುಡಿದಿರುವುದು ಒಂದನ್ನೇ. ಕಬೀರ, ಸೂರದಾಸ, ಏಕನಾಥ ಯಾರು ನುಡಿದಿರುವುದೂ ಇದನ್ನೇ. ನಮ್ಮ ಕಣ್ಣೆದುರಿಗೆ ಮೊರೆಯುತ್ತಿರುವುದು, ಪ್ರತಿದಿನವೂ ನಮ್ಮನ್ನು ಅಡಸಿರುವ ಜಾಡ್ಯ. ಈ ಒಂದೇ ಎನ್ನಿಸುತ್ತದೆ. ಇಲ್ಲಿ ಮಾತ್ರವೇ ಅಲ್ಲ. ಬಹುತರ ಎಲ್ಲೆಲ್ಲಿಯೂ ಅದೇ. ಕಲಿ ವಿಜೃಂಭಿಸಿದೆ. ಮಾನವರು ಉದ್ಧಾರವಾಗಬಯಸಿದರೆ, ಕವಿದಿರುವ ಕಲಿಯನ್ನು ಎದುರಿಸಿ ಗೆಲ್ಲಬಹುದು. "ತಾಸು ಬಾರಿಸುತ್ತಿದೆ ಕೇಳಿ" ಎಂಬ ಪದ್ಯ ಡಂಗುರ ಹೊಡೆದಂತೆ, ಈ ಭಾವವನ್ನು ತಿಳಿಸುತ್ತದೆ. ಇದನ್ನು ಹಿಂದಾಗಲೆ ವರ್ಣಿಸಿಯಾಗಿದೆ. "ಹರಿಯನು ನೆನೆಯದ, ನರಜನ್ಮವೇಕೆ, ಶ್ರೀಹರಿಯ ಕೊಂಡಾಡದ ನಾಲಿಗೆಯೇಕೆ" ಎಂಬ ಪದದ ಮುಂದಿನ ಕೆಲವು ಚರಣಗಳಲ್ಲಿ ಅಂಥವೇ ಕೆಲವು ವ್ಯರ್ಥ ಕ್ರಿಯೆಗಳನ್ನು ವಿವರಿಸಿದ್ದಾರೆ. "ಮಾತಾಪಿತರ ಪೊರೆಯದ ಮಕ್ಕಳು | ಮಾತು ಕೇಳದ ಸತಿ ಮನೆಯೊಳಿದ್ದೇಕೆ, ನೀತಿ ಇಲ್ಲದ ನೆರೆಹೊರೆಯು ತಾನೇಕೆ. ಅನಾಥನಾಗಿ ಕೋಪ ಮಾಡಲೇಕೆ. ಹಾಗೆಯೇ ಸತ್ಯ ಶೌಚವಿಲ್ಲದಾಚಾರ, ನಿತ್ಯನೇಮಿಲ್ಲದ ಜಪ–ತಪ ಭಕ್ತಿ ಇಲ್ಲದ ಬಹಿರಂಗ ಪೂಜೆ | ಉತ್ತಮರಿಲ್ಲದ ಸಭೆ, ತಾನೇಕೆ ? ವೇದವನೋದದ ವಿಪ್ರ, ಕಾದಲಾರದೆ ಹೋಗುವ ಕ್ಷತ್ರಿಯ, ಕ್ರೋಧವ ಬಿಡದ ಸಂನ್ಯಾಸಿ ತಾನೇಕೆ. ಆದರವಿಲ್ಲದ ಅಮೃತಾನ್ನವೇಕೆ. ಸಾಲದಡಿ ಹೂಳಿದ ಸಂಸಾರವೇಕೆ ? ಬಾಲಕರಿಲ್ಲದ ಭಾಗ್ಯ, ವೇಳೆಗೆ ಒದಗದ ನಂಟರು ಅನುಕೂಲವಿಲ್ಲದ ಸತಿಸಂಗ, ಅಳಿಸಿ ಅಳಿದುಹೋದ ಮಕ್ಕಳಿದ್ದೇಕೆ. ತಿಳಿದು ಬುದ್ಧಿಯ ಪೇಳದ ಗುರು ಏಕೆ, ನಳಿನನಾಭ ನಮ್ಮ ಪುರಂದರ ವಿಠಲನ ಚೆಲುವ ಮೂರ್ತಿಯ ನೋಡದ ಕಂಗಳೇಕೆ" ಎನ್ನುತ್ತಾರೆ.

"ಹರಿಭಕುತಿ ಸುಖವು ಅನುಭವಿಗಲ್ಲದೆ ಮಿಕ್ಕ ನರಗುರಿಗಳು ಅದರ ಸ್ವಾದವ ಬಲ್ಲವೆ ?" ಎಂಬ ಪದವು ಇನ್ನೊಂದು ಬಗೆಯ ಜನಗಳನ್ನು

ವರ್ಣಿಸುತ್ತದೆ. ಎಸೆವ ತೆಂಗಿನಕಾಯನ್ನು ಎತ್ತು ಮೆಲ್ಲಬಲ್ಲುದೆ, ರಸಭರಿತ ಖರ್ಜೂರವನ್ನು ಕುರಿ ಮೆಲ್ಲಬಲ್ಲುದೆ, ಹಸು ಕರೆದ ಹಾಲ ಸವಿ ಸುಖಿಗಳಿಗಲ್ಲದೆ, ಕಸದಿ ವಸಿಸುವ ಉಣ್ಣಿಗಳು ಬಲ್ಲವೆ, ಸರಸಿಜದ ಪರಿಮಳವನ್ನು ಮಧುಕರನು ಅರಿವಂತೆ, ನಿರುತ ಬಳಿಯೊಳಿರುವ, ಕಪ್ಪೆಗಳು ಬಲ್ಲವೆ! ಸರಸ ಪಂಚಾಮೃತವ ಶ್ವಾನ ಬಲ್ಲುದೆ. ಹರಿಕಥಾಶ್ರವಣ ಸುಖವನ್ನು ಕತ್ತೆ ಬಲ್ಲುದೆ? ಅಂಧ ದೀಪದ ಬೆಳಕ, ಮೂಢ ಮಾತಿನ ಸವಿಯ, ಮಂದ ಬಧಿರನು ಹಾಡನ್ನು ಕೇಳಿ ಸುಖಿಸುವರೆ. ಅಂದ ಮುತ್ತಿನ ದಂಡೆ ಕಪಿ ಬಲ್ಲದೆ. ಮಂದಮತಿ ಪುರಂದರ ವಿಠಲನನು ಬಲ್ಲನೇ.

ಧನವಲ್ಲ, ಹುಟ್ಟಲ್ಲ, ವಿದ್ಯಾ ಶಿಕ್ಷಣ ಕೂಡ ಮುಖ್ಯವಲ್ಲ. ವಯಸ್ಸು ಅಲ್ಲ ವರುಷ ಕಾರಣವಲ್ಲ—ಎಂಬುದು ಇನ್ನೊಂದು ಹಾಡಿನ ಪಲ್ಲವಿ. ಧ್ರುವ ರಾಯ, ಪ್ರಹ್ಲಾದರ ಕಥೆ ಇಲ್ಲಿ ಉದಾಹರಣೆಗೆ ಬರುತ್ತದೆ. ಎಲ್ಲರಿಗೂ ಮುಕ್ತಿ ಬರುವುದಿಲ್ಲ. ಅದಕ್ಕಾಗಿ ಸಿದ್ಧತೆಯಲ್ಲಿ ಮೊದಲೇ ತೊಡಗಿರಬೇಕು. ಅದಕ್ಕೆ ಮೇಲ್ಪಟ್ಟ ಚೆನ್ನಕೇಶವನ ಕೃಪೆ, ಅವರ ಮೇಲೆರಗಬೇಕು. ಇದರ ಅಗತ್ಯಗಳು ಅನೇಕ. ಮನಸ್ಸು ದೇಹ ಎರಡೂ ಈ ಕಡೆಗೆ ಒಲಿದು ಬೆಳೆಯಬೇಕು. ನಮ್ಮ ಒಳಗನ್ನು ಶುಚಿಗೊಳಿಸಿಕೊಳ್ಳುವ ಸಮಯದಲ್ಲಿ ಕಹಿಯಾಗಲಿ, ಹಟವಾಗಲಿ, ಸಂದೇಹಗಳಾಗಲಿ ತಲೆಹಾಕಬಾರದು—

"ಧರ್ಮವೇ ಜಯವೆಂಬ ದಿವ್ಯ ಮಂತ್ರ | ಮರ್ಮವನರಿತು ಮಾಡಲಿಬೇಕು ತಂತ್ರಾ | ವಿಷವಿಕ್ಕಿದವಗೆ ಷಡ್ರಸವನುಣಿಸಲುಬೇಕು | ದ್ವೇಷ ಮಾಡಿದವನ ಪೋಷಿಸಲಿಬೇಕು || ಪುಸಿ ಮಾಡಿ ಕೆಡಿಸುವನ ಹಾಡಿ ಹರಸಲುಬೇಕು | ಮೋಸ ಮಾಡುವನ ಹೆಸರು ಮಗನಿಗೆ ಇಡಬೇಕು | (ಇನ್ನೊಂದು ಪದ್ಯದಲ್ಲಿ ಹಗೆಯ ಹೆಸರನು ಮಗನಿಗೆ ಇಡಬೇಕು—ಎಂದಿದೆ. ಎರಡೂ ಕಷ್ಟವೇ.) ಹಿಂದೆ ನಿಂದಿಪರನ್ನು ವಂದಿಸುತಲಿರಬೇಕು | ಬಂಧಿಸಿದವನ ಕೂಡ ಬೆರೆಯಬೇಕು. ನಿಂದ ನಿಲುವಿಗೆ, ಸೇರದವನ ಹೊಗಳಲುಬೇಕು. ಕೊಂದವನ ಗೆಳೆತನವ ಮಾಡಬೇಕಯ್ಯ" ಹೀಗೆ ಮುಂದುವರಿಯುತ್ತದೆ. ಸಾಮಾನ್ಯ ಸಮಾಜಕರಿಗೆ, ಅವಿವೇಕವೆಂದೂ, ಅಶಕ್ಯವೆಂದೂ ತೋರುವ ಉಪದೇಶಗಳು ಧರ್ಮದ ದಾರಿ ಎಷ್ಟು ಕಷ್ಟ ಎಂದು ಕಾಣಿಸೀತು. ಅದರ

ಸಮಸ್ಯೆಗಳೂ ಅಷ್ಟೇ. ಹಿಂದಿನ ಕಾಲದಿಂದ ಒಂದೇ ರೀತಿ ಉಳಿದು ಕೊಂಡು ಬಂದಿವೆ. ಆದರೆ ನಡವಳಿಕೆಗೆ ಇಂಥವನ್ನು ತಂದುಕೊಳ್ಳಲು ಬೇಕು—ಒಳಗು ತಿದ್ದಬೇಕಾದರೆ. ಮನಸ್ಸಿನ ಪ್ರವೃತ್ತಿಗಳು ಶುದ್ಧವಾಗದೆ ಕ್ರಿಯೆ ಸರಿಯಾಗದು—ಎಂಬುದು ಮಾನವ ಬಾಳಿಗೆ ಎಷ್ಟು ದೂರದ ನಿಲವಿನದು. ಯುಗ ಯುಗಗಳು ಕಳೆದರೂ ಇಂಥ ಭಾವನೆಗಳಿಂದ, ಚಾರಿತ್ರ್ಯದಿಂದ ಮನುಷ್ಯನು ದೂರವಾಗಿಯೇ ಇದ್ದಾನೆ. "ಜಾನಾಮಿ ಧರ್ಮಂ ನ ಚ ಮೇ ಪ್ರವೃತ್ತಿಃ | ಜಾನಾಮಿ ಅಧರ್ಮಂ ನ ಚ ಮೇ ನಿವೃತ್ತಿಃ ||" ಎಂಬ ಆಲೋಚನೆ ಮಾನವನ ನಡತೆಯಲ್ಲಿನ ಮೂಲ ದೌರ್ಬಲ್ಯವನ್ನು ಕಾಣಿಸುತ್ತದೆ. ಈ ತಿಳಿವಳಿಕೆ ಬಂದ ಇವನು ತತ್ವವನ್ನು ಒಪ್ಪಿಕೊಂಡರೆ ತಾನೇ ಏನು ಪ್ರಯೋಜನ? ಅದು ಕಾರ್ಯಕ್ಕೆ ತಿರುಗದವರಿಗೆ ಅಂಥ ತಿಳಿವಳಿಕೆಯ ಪ್ರಯೋಜನ ಇದ್ದೂ ಇಲ್ಲದಂತೆಯೇ. ಆದರೆ ಸಾಧು ಸಂತರು ಇಂಥುದಕ್ಕೆ ಮಾತ್ರವೇ ನಮ್ಮ ಗಮನವನ್ನೂ ಯತ್ನವನ್ನೂ ಸೆಳೆದಾಗ ಗಟ್ಟಿಯಾಗಿ ಯಾವುದು ಒಳ್ಳೆಯದು, ಯಾವುದಲ್ಲ, ಅಸತ್ತಾದುದು ಯಾವುದು, ನಮ್ಮ ಆತ್ಮವನ್ನು ಮುರಿಯತಕ್ಕದ್ದು ಯಾವುದು ಎಂಬುದನ್ನು ಅವರು ತಿಳಿಸುತ್ತಾರೆ. ನೆಲದ ಮೇಲಿರುವ ಕಷ್ಟದ ಬಹು ಭಾಗವನ್ನು ಹೋಗಲಾಡಿಸುವ ಒಂದೇ ಮಾರ್ಗ ಸರಿಯಾದ ತಿಳಿವಳಿಕೆ, ಅದಕ್ಕೆ ತಕ್ಕ ಸರಿಯಾದ ಬದುಕು. ಪುನಃ ಪುನಃ ದಾಸರು ಮನುಷ್ಯನ ಮನಸ್ಸಿಗೂ ದೇಹದ ಒಂದೊಂದು ಅಂಗಕ್ಕೂ ತಿಳಿವಳಿಕೆ ಕೊಡುತ್ತಾರೆ. ಅವಕ್ಕೆ ಇರುವ ಕೆಟ್ಟ ಓಲುಗಳನ್ನು ತಿಳಿಯಪಡಿಸುತ್ತಾರೆ. ನಾಲಗೆಯನ್ನು ಕುರಿತು ಆಡಿದ ಕೆಲವು ಮಾತುಗಳು ಇವು: ಆಚಾರವಿಲ್ಲದ ನಾಲಿಗೆ—ನಿನ್ನ ನೀಚ ಗುಣವ ಬಿಡು ನಾಲಿಗೆ | ನಾಚಿಕೆ ಲಜ್ಜೆಯ ನೀ ಮುನ್ನ ಅರಿಯದೆ | ಚಾಚಿಕೊಂಡಿರುವಂಥ ನಾಲಿಗೆ" ಎಂಬುದು ಅದರ ಸ್ವಭಾವವನ್ನು ಕಾಣಿಸುತ್ತದೆ. ಮಾತನಾಡು ಹಿಡಿದು | ಒದ್ದರೂ ಹುಸಿಬೇಡ || ಇದ್ದುಕೊಂಡು ಉಣ್ಣು ಅಮೃತಾನ್ನಗಳನ್ನು | ಬುದ್ಧಿಯಲಿರು ಕಂಡೆಯ || ಇಂಥವೇ ನಾಲಗೆ ನುಡಿಯದ ಅದರ ಓಲುಗಳನ್ನು ಅದರ ತಪ್ಪುಗಳನ್ನು ಕೆಟ್ಟವಾದವನ್ನು ವಿವರಿಸುತ್ತಾರೆ. ಪುರಂದರ ವಿಠಲರಾಯನನ್ನು ಮರೆಯದೆ ನೆನೆ; ನಿನಗೆ ಪರರ ಚಿಂತೆ ಏತಕೆ ಎಂದು ನಾಲಿಗೆಗೆ ಬುದ್ಧಿ ಹೇಳುತ್ತಾರೆ. ತನಗೆ

ಹೇಳಿಕೊಂಡಂತೆ; ಲೋಕಕ್ಕೆ ಹೇಳಿದಂತೆ. ಯಾರದಾದರೂ ನಾಲಿಗೆ ನಾಲಿಗೆಯೇ.

ಒಂದು ಸಂಗತಿಯನ್ನು ಮಾತ್ರ ಅವರು ಗುರುತಿಸುತ್ತಾರೆ. ಮನಸ್ಸ ತೊಳೆದು ಶುಚಿಯಾದ ಹೊರತು ಯಾವ ಕೊಳೆಯೂ, ಯಾವ ಅಶುಚಿಯೂ ತೊಳೆದುಹೋಗುವುದಿಲ್ಲ ಎಂಬುದು ಅದು. ಮಲವು ತೊಳೆಯಬಲ್ಲುದೆ, ಮನವು ತೊಳೆಯದನಕ || ಹಾಗೆಯೇ ತನುವ ನೀರೊಳಗದ್ದಿ ಫಲವೇನು?" ಎಂಬ ಪದ್ಯದಲ್ಲಿ ಇಂಥವ್ರ.ಗಳ ನಿರ್ದೇಶಗಳು ದೊರೆಯುತ್ತವೆ. ಮನದಲ್ಲಿ ದೃಢ ಭಕುತಿಯಿಲ್ಲದ ಮನುಷ್ಯನು ತನ್ನ ತನುವನ್ನು ನೀರೊಳಗದ್ದಿದರೆ ಏನು ಫಲ? ಯಾವುದು ನಿಜವಾದ ಸ್ನಾನ–ಯಾವುದಲ್ಲ ಎನ್ನುವಾಗ ಕ್ರಿಯೆ ಆಲೋಚನೆ ಸತ್ಸಂಗ ದೇಶದಿಂದ ದೇಶಕ್ಕಲೆದು ಕಾಶಿಯಾತ್ರೆ ಮಾಡಲು ಏನು ಪ್ರಯೋಜನ? ಮನಸ್ಸಿನ ಸ್ವಭಾವ ಚಲಿಸುವುದು. ಆಸೆಯನ್ನು ಸುಡು. ಜಪತಪ ನೆರವೇರಿಸು. ಉಪವಾಸ ಮಾಡುವುದೋ, ಸ್ನಾನ ಮಾಡುವುದೊ ಕಡೆಗೆ ದಾನ ಮಾಡುವುದೊ ಸುಲಭ. ಆದರೆ ಒಂದರ ಮೇಲೆ ಮನಸ್ಸನ್ನು ನಿಲ್ಲಿಸುವುದು, ಅದರಲ್ಲಿಯೂ ಪುರಂದರ ವಿಠಲನಲ್ಲಿ ನಿಲ್ಲಿಸುವುದು ಕಷ್ಟ; ಆದ್ದರಿಂದ ಇತರ ಅನೇಕ ಸಾಧುಗಳಂತೆ ದಾಸರೂ ಮನಸ್ಸನ್ನು ಒಂದು ಹುಚ್ಚುನಾಯಿಗೆ ಹೋಲಿಸುತ್ತಾರೆ. "ಹುಚ್ಚು ಕುನ್ನಿ ಮನವೆ ಹುಚ್ಚುಗೊಂಬುದು ಘನವೆ" ಎಂಬ ಪದ ಇದನ್ನು ವಿವರಿಸುತ್ತದೆ. ಇನ್ನೊಂದು ಪದ್ಯ ಮನಸ್ಸಿಗೆ ಎಚ್ಚರಿಕೆಗಳನ್ನು ಕೊಡುತ್ತದೆ. ಮುದ್ದು ಅಚ್ಚುತನ ದಾಸರೊಡಗೂಡಿ ಎಚ್ಚರದಲ್ಲಿ ನಡೆ; ಏನನ್ನು ನೋಡಿದರೆ ಯಾವುದಕ್ಕೆ ಮನಸ್ಸನ್ನು ತೆತ್ತರೆ ಯಾವುದನ್ನು ತೊರೆದರೆ ಯಾವುದರಿಂದ ಬಿಡುಗಡೆ ಹೊಂದಿದರೆ ಮೇಲು ಎಂಬುದನ್ನು ತಿಳಿಸುತ್ತದೆ. ನೆನಪಿನಲ್ಲಿಟ್ಟುಕೊಳ್ಳಬೇಕಾದುದು ಯಾವುದು, ಯಾವುದನ್ನು ಮರೆಯತಕ್ಕದ್ದು ಎಂಬುದು ನಿರಂತರ ಒಕ್ಕಣೆ ಇರುತ್ತದೆ. ಎಷ್ಟೊ ಮೋಹಗಳು, ನಮ್ಮನ್ನು ಸರಿಯಾದ ದಾರಿಯಿಂದ ಬೇರೆಡೆಗೆ ಒಯ್ಯುತ್ತದೆ. ಹಾಗೆ ಮೋಹಗೊಳ್ಳುವುದು ತುಂಬಾ ಪ್ರಿಯವಾಗಿಯೂ ಇರುತ್ತದೆ. ಜಿಂಕೆ, ಕೋಗಿಲೆ, ಆನೆ, ಮೀನು, ಚಿಟ್ಟೆ, ದುಂಬಿ ಇವೆಲ್ಲವೂ ಮೋಹಗಳಿಗೇ ಸಿಕ್ಕಿಕೊಳ್ಳುತ್ತವೆ. ಅವಕ್ಕೆ ಮನಸ್ಸು ತೆತ್ತು ವಿಧಿಹತವಾಗಿ ಪ್ರಾಣ

*

ಸೆರುತ್ತವೆ. ಸಾವು ನಿಮ್ಮನ್ನು ಹಿಡಿವ ಮುಂಚೆ ಬಾಳನ್ನು ತಿದ್ದಿಕೊಳ್ಳಿ, ನಾಶವಾಗಬೇಡಿ ಎನ್ನುತ್ತಾರೆ. ಘನತೆ ಸ್ಥಾನ ಶಕ್ತಿ ಯಾವುದೂ ಕಾಪಾಡುಪವಲ್ಲ. ಹರಿಶ್ಚಂದ್ರನಿಗೆ ಏನಿರಲಿಲ್ಲ? ಅವನು ಸುಡುಗಾಡಿನಲ್ಲಿ ಹಣೆ ಅಕ್ಕಿ, ಹಾಗದ ಕಾಸು, ಎತ್ತಬೇಕಾಯಿತು. ರಾವಣನ ಬದುಕು ಏನಾಯಿತು—ದೇವತೆಗಳ ಕೈಯ ಸೇವೆಯನ್ನು ಕೊಳ್ಳುತ್ತಿದ್ದ. ಸಾವಿನ ಮನೆ ಹೊಕ್ಕು ಏಕೆ ಸಾಹಸಪಡುವೆ. ಹದಿನೆಂಟು ಕೋಟಿ ಧನ ಉದಯಕ್ಕೆ ಬರುತಿರಲು ಒದಗಿತೆ ಆ ರಾಸಿ ಹೊನ್ನು ಕರ್ಣನಿಗೆ? ಬೆಳ್ಳಿಯ ಗಿಣಿಲು ಬಂಗಾರದ ಹರಿವಾಣ, ಕುಳಿತಲ್ಲಿ ಕನಕದ ರಾಸಿಗಳು. ಗಳಿಗೆಗೆ ಈ ಭಾಗ್ಯ, ಕಾಡಬೆಳದಿಂಗಳಾಗುತ್ತದೆ; ಉಳಿವುದ ನಾ ಕಾಣೆ ಚರಲಕ್ಷ್ಮಿ ಎನಲು, ದೇವರ ಚಿಂತೆ, ದೇವರ ಕೃಪೆ ಮಾತ್ರ ರಕ್ಷಿಸಬಲ್ಲುದು.

ಗಂಡುಸಾಗಿ ಹುಟ್ಟಿದವರು ದಾಸರು. ಗಂಡು ಜಾತಿಗೆ ಅನೇಕ ಉಪದೇಶ ಗಳನ್ನು ಮಾಡಿದ್ದಾರೆ. ಹಾಗೆಯೇ ಹೆಂಗಸರಿಗೂ ಅನೇಕ ಎಚ್ಚರಿಕೆ ಗಳನ್ನು ಕೊಡುತ್ತಾರೆ. ಇಬ್ಬರೂ ಪತಿತರಾಗದಂತೆ ತಿಳಿಸುತ್ತದೆ ಆ ಎಚ್ಚರಿಕೆ. ಪ್ರಾಚೀನವಾದ ಒಂದು ತತ್ವವಿದೆ: ಗಂಡನ ಪಾಪ ಹೆಂಡತಿಯ ಮೇಲೆ ಕವಿಯುವುದಿಲ್ಲ. ಹೆಂಡತಿಯದು ಗಂಡನ ಕೊರಲಿಗೆ ಕಟ್ಟುವುದು ಎಂಬ ತತ್ವವನ್ನು ಗಂಡಸಿನ ನೆನಪಿಗೆ ತರುತ್ತದೆ. ಅವನ ಪುಣ್ಯದಲ್ಲಿ ಹೆಂಡತಿಗೆ ಭಾಗ ದೊರೆಯುವುದಂತೆ. ಹೆಂಡತಿಯ ಪುಣ್ಯದ ಯಾವ ಭಾಗವೂ ಗಂಡನಿಗೆ ಇಲ್ಲವಂತೆ. ಇದು ಗಂಡು ಹೊತ್ತ ಹೊಣೆಯ ಭಾಗ. ಗಂಡಸಿಗೆ ಹೆಂಗಸಿನ ಮೇಲೆ ಯಾವೊಂದು ಬಗೆಯ ಆಸೆ ಇದೆಯೊ ಅದರಿಂದ ಅವನು ಅನೇಕ ದುಃಖಗಳಿಗೆ ಈಡಾಗುತ್ತಾನೆ. ಅಂಥಲ್ಲಿ ಹೆಣ್ಣು ಗಂಡಸನ್ನು ನಿರ್ಬಲ ಮಾಡುತ್ತಾಳೆ. ಅನೇಕ ಮೋಹಗಳಿಗೆ ಅವನನ್ನು ಸೆಳೆದು ಭಂಗ ಪಡಿಸುತ್ತಾಳೆ. ತಾಯಾಗಿ ಹೆಂಡತಿಯಾಗಿ ಆ ಮಾಯೆ ಬಹು ವಿಧದಲ್ಲಿ ಕಾಡುತ್ತದೆ. ಅವನನ್ನು ಅನೇಕ ಬಗೆಯ ಸ್ವಾರ್ಥಗಳಿಗೆ ನಡಸಿ, ಹಿತ ಶತ್ರುವಾಗಿ ಹೊಂದುವುದು. ನಿಮಿಷ ರತಿ ಕೊಟ್ಟು ನಿತ್ಯ ಮುಕ್ತಿಯಿಂದ ಸೆಳೆಯುವುದು; ಕ್ಷಿತಿಯ ಪೂಜ್ಯತೆ ಕೆಡಿಸುವುದು; ಮುಂದೆ ಶತ ಜನ್ಮಗಳಿಗೆ ಹೊಣೆಯಾಗಿ ಸಿಲ್ಲುವುದು. ಕಣ್ಣೆತ್ತಿ ಅವಳನ್ನು ನೋಡಬೇಡ, ಅವಳ ಸಣ್ಣ ಬೈತಲೆ ಕಂಡು ಮರುಳಾಗಬೇಡ. ದೂರದಲ್ಲಿಯೇ ಸುಖವಣ್ಣ.

ಇಂದ್ರಿಯದ ಆಸೆಗಳಿಗೆ ಸೋಲುವುದು ತುಂಬಾ ಸುಲಭ. ಹೆಣ್ಣನ್ನು ಕುರಿತು ಆಡಿದ ಮಾತಿನ ಬಹು ಭಾಗ ಗಂಡಿನ ಮೇಲೆ ಅವಳು ನಡಸುವ ಅಧಿಕಾರವನ್ನೂ ಅವಳ ನಡವಳಿಕೆಗಳನ್ನೂ ಕುರಿತದ್ದು. ಅವಳನ್ನು ಆಜ್ಞೆಯಿಂದ ಆಳಬೇಕು. ಆಕೆಯ ಸಂಬಂಧದಲ್ಲಿ ಗಂಡು ತನ್ನನ್ನು ತನ್ನ ವಶದಲ್ಲಿಟ್ಟುಕೊಳ್ಳಬೇಕು. ಕೆಲವು ಪದ್ಯಗಳು ಈ ಇಬ್ಬರಿಗೂ ಮರ್ಯಾದೆ ತರುವಂಥವಲ್ಲ.

ಸರಿಯಿಲ್ಲದ ಹೆಣ್ಣ ಪ್ರಕಾರವೊಂದನ್ನು–ಕಷ್ಟ ಉಂಟುಮಾಡುವವಳನ್ನು ಒಂದು ಚಿತ್ರ ವರ್ಣಿಸುತ್ತದೆ. ಚಿತ್ರ ಸ್ವಾರಸ್ಯವಾಗಿದೆ. ಗಂಡನಲ್ಲಿ ಅನುರಾಗವಿಲ್ಲದ ಹೆಣ್ಣು, ಅಂಥುದರ ಸಂಗ ಬೇಡ ಎನ್ನುತ್ತಾರೆ.

"ವ್ರತ ಕೆಡುತ್ತದೆ. ಪತಿ ಭಕುತಿಯಿಲ್ಲದ ಸತಿಯ ಸಂಗ ಕೆಡಿಸುತ್ತದೆ. ಸುಖ ಪಡೆಯಲಿಲ್ಲ, ಗಂಡ ಬಂದರೆ ಎದ್ದು ನಿಲ್ಲಳು. ಆ ಕ್ಷಣದಿ ಕಂಡಾಡಿ ಏಕವಚನಗಳನ್ನು ನುಡಿದು ಅಂಡಲೆದು ಮಾರ್ಪಲೆದು, ಕಾಡಿ ಬೇಡುವ ಇಂಥ ಭಂಡದೊತ್ತಿನ ಕಾಟ, ಏಳು ನಾಗರ ಕಾಟ.

ಒಂದು ತಂದರೆ ಮನೆಗೆ ಹತ್ತಾಗಿ ಭಾವಿಸದೆ | ತಂದರೆ ಹತ್ತು, ಮನೆಯೊಳಗೊಂದ ಮಾಡಿ | ಇಂದಿಗೆ ಇಲ್ಲ ಎಂದು ಮುಖವ ತಿರುಹುತಲಿ ಮದ | ದಿಂದ ಹೋಹಳು ನಾರಿ, ಬಹು ದೊಡ್ಡ ಮಾರಿ ||

ಮಕ್ಕಳಿಗೆ ಇಡಲಿಲ್ಲ ಮರಿಗಳಿಗೆ ಕೊಡಲಿಲ್ಲ | ಇಕ್ಕುವೊಡೆ ಬೆಳ್ಳಿ ಬಂಗಾರ ಇಲ್ಲ. ಚಿಕ್ಕವಳು ನಾ ನಿನ್ನ ಕೈ ಹಿಡಿದು ಕೆಟ್ಟೆ ಎಂಬ ಮೂರ್ಖ ತೊತ್ತಿನ ಸಂಗ ಕುಲಕೆಲ್ಲ ಭಂಗ.

ತಾಯನು ಹೊರಡಿಸು, ತಂದೆಯನು ತೆರಳಿಸು | ದಾಯಾದಿಯನು ಮನೆಯ ಹೊಗಿಸಬೇಡ | ಬಾ ಇನ್ನೊಂದು ಮನೆ ಕಟ್ಟಿ ಬೇರೆ ಇರುವ, ನಾವು ಎಂಬ ಮಾಯಗಾತಿಯ ಸಂಗ ಅಭಿಮಾನ ಭಂಗ || ಇಷ್ಟನೆಲ್ಲವ ಬಿಟ್ಟು ಕೆಟ್ಟನೈ | ನಾನಿಂದು ಕಷ್ಟ ಸೆದೆಯೆನುವೆನೆ, ಈ ಪರಿಯಲಿ–ಸೃಷ್ಟಿಗಧಿಕನು ಪುರಂದರ ವಿಠಲನೊಬ್ಬನೇ ಗತಿ ಎನ್ನುತ್ತದೆ ಆ ಪದ. ಇನ್ನೊಂದು ಪ್ರಖ್ಯಾತವಾದ ಹಾಡಿದೆ. ಇದನ್ನು ಕೇಳಿ ಈ ಕಾಲದ ಎಲ್ಲ ಹೆಂಗಸರು ಕೋಪ ಮಾಡಿಕೊಳ್ಳುತ್ತಾರೆ. ಸತಿಗೆ ಸ್ವಾತಂತ್ರ್ಯವ ಕೊಡದಿರಿ ಎಂಬುದು ಆ ಹಾಡು. ಈ ಸ್ವಾತಂತ್ರ್ಯ ಎಷ್ಟು ಬಗೆಯಲ್ಲಿ ವಿಸ್ತರಿಸಬಲ್ಲುದು

ಎಂಬುದರ ವರ್ಣನೆಗಳಿವೆ. ಒಂದು ಕೆಟ್ಟ ಅಥವಾ ದುಷ್ಟ ಬಗೆಯ ಹೆಂಗಸಿನೊಡನೆ ಬದುಕಬೇಕಾಗಿರುವಾಗಿನ ಚಿತ್ರ ಅದು. ಇಂಥದನ್ನು ಯಾವ ಸಂಸಾರದಲ್ಲಿಯೂ ಕಾಣಬಹುದು. ಇಂದು ಇಂಥ ಹಾಡುಗಳಿಗೆ ದಂಗೆ ಎದ್ದು ಗಂಡಂದಿರ ಮೇಲೆ ತಮ್ಮ ಆಕ್ಷೇಪಣೆಗಳನ್ನು ಹೊರಿಸುವ ಪದ್ಯಗಳನ್ನು ಬರೆದಾರು. ಆಗ ದಾಸರಿಗೆ ಆ ದೃಷ್ಟಿಗೆ ಬರುವುದು ಕಷ್ಟದ ದಿನ.

ತಮ್ಮ ಕೈಯಲ್ಲಿ ಮಾತ್ರ ಇಟ್ಟುಕೊಳ್ಳಬೇಕಾದ್ದನ್ನು ಹೊರಗೆಡಹುವ ಜನ ಬುದ್ಧಿಹೀನರು; ಹಾಗೆಯೇ ಇನ್ನೊಬ್ಬನ ಕೈಗೆ ನಂಬಿ ತಮ್ಮ ಸಂಪತ್ತನ್ನು ಇಡುವವನು, ತನ್ನ ಸಂಬಂಧಿಕರಿಗೆ ಹಣವನ್ನು ಸಾಲ ಕೊಡುವವನು; ವೃದ್ಧಾಪ್ಯದಲ್ಲಿ ಚಿಕ್ಕ ವಯಸ್ಸಿನ ಹೆಂಡತಿಯನ್ನು ಮದುವೆಯಾಗುವವನು; ಇಂಥ ಚಿತ್ರ ಲೋಕದಲ್ಲಿ ಎಲ್ಲೆಲ್ಲಿಯೂ ಕಾಣಬಹುದಾದ್ದು. ಕರು ಸತ್ತ ಆಕಳಲ್ಲಿ ಹಾಲು ಕರೆವವರು ಇನ್ನೆಷ್ಟೊ ಮಂದಿ; ಗಿರವಿ ತೆಗೆದುಕೊಳ್ಳದೆ ಸಾಲ ಕೊಡುವವನು ಬುದ್ಧಿವಂತನೆ? ಹೆಂಡತಿಯ ತವರಲ್ಲಿ ಹೋಗಿ ಇರುವವನು, ತಾನು ಉಳಿದು ಜೀವಿಸಲು ಮಗಳನ್ನು ಮಾರುವವನು; ಇಂಥ ಚಿತ್ರಗಳು ಹತ್ತಾರು. ಇನ್ನೊಂದು ಪದ ತುಂಬಾ ಮೋಜಿನದು: "ಇಕ್ಕಲಾರೆ; ಕೈ ಎಂಜಲು ಚಿಕ್ಕ ಮಕ್ಕಳು ಅಳುತಾವೆ; ಹೋಗು ದಾಸಯ್ಯ" ಎಂಬುದು. ಇಂಥವಲ್ಲಿ ಇಲ್ಲ ಎನ್ನುವವರ ಮನಸ್ಸು ಯಾವ ಯಾವ ರೀತಿ ಆಡುತ್ತದೆ ಎಂಬ ಚಿತ್ರವಿದೆ. ಇದು ಹೆಣ್ಣಿನ ಚಿತ್ರ. ಬೇಡಲು ದಾಸಯ್ಯ ಬಂದಿದ್ದಾನೆ. ಭಿಕ್ಷೆ ಇಡಲಾರೆ ಎಂಬುದಕ್ಕೆ ಕೊಡುವ ಕಾರಣಗಳೆಷ್ಟು! ಮಡಕೆ ತೊಳೆಯುತ್ತೇನೆ, ಮನೆಯ ಸಾರಿಸುತ್ತೇನೆ, ಒಡೆಯರಿಲ್ಲ, ಕಾಣೊ, ಹೋಗೊ! ತೊಡೆಯ ಮೇಲಿನ ಕೂಸು ಮೊಲೆ ಹಾಲ ಉಣುತಿದೆ, ನಡೆನಡ ಕಿರಿಕಿರಿ ಮಾಡದೆ ದಾಸಯ್ಯ. ಅಟ್ಟದ ಮೇಲಿನ ಅಕ್ಕಿ ತೆಗೆಯಲಾರೆ| ಹೊಟ್ಟೆ ನೋವು ಕಾಣೊ, ಹೋಗೊ ದಾಸಯ್ಯ. ಮುಟ್ಟಾಗಿ ಕುಳಿತೇನೆ, ಮನೆಯವರಿಲ್ಲವೊ| ಕಮ್ಮಾಗ್ರ ಮಾಡದೆ ಹೋಗೊ ದಾಸಯ್ಯ|| ವೀಸದ ಕಾಸಿನ ದವಸವ ತಂದಾರೆ| ಕೂಸಿಗೆ ಸಾಲದು ಹೋಗೊ ದಾಸಯ್ಯ ಆಸೆ ಮಾಡಲು ಬೇಡ, ದೋಷಕಾರ್ತಿ ನಾನು.

ಇನ್ನೊಂದುಪದೇಶದಲ್ಲಿ ಭಾಗವತರು ಎಂದರೆ–ಹಾಡುವವನು ಹೋಗಿ ಸ್ವಲ್ಪ ಸುಣ್ಣ ಕೇಳುತ್ತಾನೆ. ಸುಣ್ಣವಿಲ್ಲ ಭಾಗವತರೆ, ಸುಣ್ಣನೆಯ ಗೋಡೆಗೆ ನಿನ್ನೆ ತೊಡೆದುಬಿಟ್ಟೆ. ವೀಳೆಯ ಹಾಕುವನಲ್ಲ, ವ್ಯಾಧಿಷ್ಠ ಗಂಡ | ಬಾಳುಗೇಡಿ ನನ್ನ ಬಾಯಿ ನೋಡಿ! ಹಾಳಾದ ಮನೆ ಹೊಕ್ಕು ಗೋಳು ಗರೆಯುತ್ತೇನೆ | ಕೇಳಿದ ಬಳಿಕ ಇದನ್ನು ಹೇಳದೆ ಫಲವೇನು; ಸುಣ್ಣವಿಲ್ಲ ಭಾಗವತರೆ: ಮದ್ದು ತಿಂದು ತಿಂದು ಮನೆಯಲ್ಲಿ ಬರಿದಾಯ್ತು. ಹೊದ್ದಿತು ಮೂದೇವಿ, ಮೈದುನಗೆ; ಬದ್ಧತನದಿ ಸಂಜೆ ಭಂಗಿ ಮುಕ್ಕುವ ಭಾವ ಒದ್ದುಕೊಳ್ಳುತ್ತಾನೆ. ಒಳಗೆ ಕದವನಿಕ್ಕಿ ಸುಣ್ಣವಿಲ್ಲ ಭಾಗವತರೆ; ಅನ್ನೆಕಾರಿ ಅತ್ತೆ, ತೊನ್ನುಬಡಕ ಮಾವ ಆಕ್ಷೇಪಣೆ ಮಾಡುವ ಹೆಂಗಸಿಗೆ ಯಾವುದೂ ಮಿತಿಯಿಲ್ಲ–'ಗನ್ನಗಾತಕಿ ರಂಡೆ ಅತ್ತಿಗೆ ಮುಂಡೆ, ನನ್ನ ಗೋಳು ತಾಗಿ ಎಂದಿಗೆ ಹೋದಾರೊ' ಎಂದು ಮನೆಯವರ ಮೇಲೆಲ್ಲ ವಿರಸ ಕಾರುವ ಚಿತ್ರ ತುಂಬ ಕರ್ಕಶವಾದುದು. ಏನು ಚಿತ್ರಗಳು ಇವು!

ಇನ್ನೊಂದು ಬಗೆಯ ಚಿತ್ರವೂ ಹೆಂಗಸಿನದೇ. "ಮುಪ್ಪಿನ ಗಂಡನ ಒಲ್ಲೆನೆ. ತಪ್ಪದೆ ಪಡಿಪಾಟ ಪಡಲಾರೆ" ಎಂದು ತೊಡಗುತ್ತದೆ. ಆ ಕಷ್ಟ ಆಕೆಯನ್ನು ಕಾಡುತ್ತಿದೆ. ಉದಯದಲ್ಲಿ ಏಳಬೇಕು; ಉದಕ ಕಾಸಲು ಬೇಕು; ಹದನಾಗಿ ಬಜೆಯನು ಅರೆದಿಡಬೇಕು; ಬದಿಯಲಿ ನಾನಿದ್ದು ಎಲೆ ಅಡಿಕೆ ಕುಟ್ಟಿಡಬೇಕು. ಬಿದಿರು ಕೋಲು ತಂದು ಮುಂದಿಡಬೇಕು; ಈ ಪಡಿಪಾಟ ಪಡೆಯಲಾರೆನಪ್ಪಾ || ಪಿತ್ತ ಓಕರಿಕೆ ಮುದುಕರಿಗೆ ವಿಶೇಷ | ಹೊತ್ತು ಹೊತ್ತಿಗೆ ಜೊಲ್ಲು ಚೆಲ್ಲಬೇಕು | ಮೆತ್ತನ್ನ ರೊಟ್ಟಿ ಮುದ್ದೆ ಮಾಡಲುಬೇಕು; ಒತ್ತಿ ಒದರಿ ಕೂಗಿ ಕರೆಯಬೇಕು. ಮುಪ್ಪಿನ ಗಂಡನ ಒಲ್ಲೆನೆ || ಜಾಡಿ ಹಾಸಬೇಕು, ನೋಡಿ ಬಾಡಬೇಕು | ಅಡಿಗಡಿಗೆ ಕಣ್ಣೀರು ಸುರಿಸಬೇಕು | ಒಡೆಯ ಶ್ರೀ ಪುರಂದರ ವಿಠಲನ ನೆನೆಯುತ ಮಿಡಿಗೊಂಡು ಮೂಲೆಗೆ ಒರಗಬೇಕು, ಅವನೊಬ್ಬನೇ ದಿಕ್ಕು ಎನ್ನುತ್ತಾಳೆ. ಇನ್ನೊಂದು ಚಿತ್ರ, ವೈದಿಕ ಗಂಡನೊಡನೆ ಸಂಸಾರ ಮಾಡಲಾರೆ ಎಂಬ ಹೆಂಗಸಿನದು. ಅದಕ್ಕಿಂತ ನೀರೊಳಗೆ ಹಾರಿ ಮುಳುಗುವುದು ಲೇಸು ಎನ್ನಿಸುತ್ತದೆ ಅವಳಿಗೆ.

ಒಮ್ಮೆ ಬೀದಿಯಲ್ಲಿ ಹೋಗುತ್ತಿರುವಾಗ ಯಾರೊ ಒಬ್ಬರು ಭಿಕ್ಷಕ್ಕೆ

ರಾಗಿ ತಂದು ಕೊಟ್ಟರು. " ರಾಗಿ ತಂದಿರ್‍ಯಾ ಭಿಕ್ಷಕೆ, ರಾಗಿ ತಂದಿರ್‍ಯಾ " ಎಂಬ ಹಾಡು ಇದು. ವಾಡಿಕೆಯ ಭಿಕ್ಷವಲ್ಲ ರಾಗಿ; ಆದರೂ ಅದೂ ಭಿಕ್ಷವೇ ಅಲ್ಲವೇ. ದಾಸರು ರಾಗಿ ಎಂಬ ಪದದಲ್ಲಿ ' ಆಗಿ ' ಎಂಬ ಭಾಗ ವನ್ನಿಟ್ಟುಕೊಂಡು ಗಂಡಸರು ಹೆಂಗಸರು ಹೇಗೆ ಹೇಗಿರಬೇಕು ಎಂಬುದನ್ನೆ ತುಂಬಾ ಚಮತ್ಕಾರದಿಂದ ಹೇಳುತ್ತಾರೆ. ಉದಾಹರಣೆಗೆ " ಯೋಗ್ಯ ರಾಗಿ, ಭೋಗ್ಯರಾಗಿ, ಭಾಗ್ಯವಂತರಾಗಿ ನೀವು || ಅನ್ನ ದಾನವ ಮಾಡುವ ರಾಗಿ, ಅನ್ನಛತ್ರವನಿಟ್ಟವರಾಗಿ, ಅನ್ಯ ವಾರ್ತೆಯ ಬಿಟ್ಟವರಾಗಿ ಅನುದಿನ ಭಜನೆಯ ಮಾಡುವರಾಗಿ | ಸಾಧು ಧರ್ಮ ಆಚರಿಸುವರಾಗಿ, ಕರೆಕರೆ ಸಂಸಾರ ನೀಗುವರಾಗಿ; ಪುರಂದರ ವಿಠಲನ ಸೇವಿಪರಾಗಿ " ಎಂದು.

ಇನ್ನೊಂದು ದಿನ ದಾಸರು ಒಂದು ಮನೆಗೆ ಬರುತ್ತಾರೆ. ಹಸಿವು ಕಾಡುತ್ತಿದೆ. ಒಡನೆಯೇ ಊಟಕ್ಕೆ ಬಂದೆವು ನಿನ್ನ ಕೋಟಲೆಗಳ ಬಿಟ್ಟು ಅಡಿಗೆ ಮಾಡಮ್ಮ || ಕತ್ತಲಿಕ್ಕುತಲಿವೆ ಕಣ್ಣು ಬಲು | ಬತ್ತಿ ಬರುತಿರಲು ಕೈ ಕಾಲು ಜುಮ್ಮು | ಹೊತ್ತು ಹೋಗಿಸಬೇಡವಮ್ಮ ಒಂದು ತುತ್ತ ನಾದರು ಮಾಡಿ ಇಕ್ಕುವುದು ಧರ್ಮ, ಅಡಿಗೆ ಮಾಡಮ್ಮ || ಒಡಲೊಳು ಉಸಿರಿಲ್ಲವಮ್ಮ; ಗಳಿಗೆ | ತಡವಾದರೆ ಈ ಪ್ರಾಣ ಉಳಿವುದಿಲ್ಲಮ್ಮ | ನುಡಿಯು ಚಿತ್ತಕೆ ಬರಲಮ್ಮ; ಒಂದು | ಹಿಡಿ ಅಕ್ಕಿ ಅನ್ನವನಿಕ್ಕಿ ಕೀರ್ತಿ ಪಡೆಯಮ್ಮ || ಹಣ್ಣು ರಾಶಿಗಳನ್ನು ಸುರಿಯೆ ಕೋಟಿ | ಕನ್ನೆಧರಿತ್ರಿ ಭಾರ ವನೆಳೆಯೆ | ಅನ್ನ ದಾನಕೆ ಇನ್ನು ಸರಿಯೆ ಎಂದು ಕೇಳುತ್ತಾರೆ.

ಲೋಕದ ರಚನೆಯನ್ನು ಕುರಿತು ದಾಸರು ವಿನೋದವಾಗಿ ನಡೆಯು ವುದೂ, ನುಡಿಯುವುದೂ ಉಂಟು. ದುಷ್ಟರನ್ನು ಕಂಡು ಅವರ ಇರವೂ ಅಗತ್ಯ ಎಂದು ಅವರ ಪ್ರಯೋಜನವನ್ನು ಕುರಿತು ನುಡಿಯುತ್ತಾರೆ:

ಜಾಲಿಯ ಮರದಂತೆ ಧರೆಯೊಳು ದುರ್ಜನರು || ಪ ||
ಮೂಲಾಗ್ರ ಪರ್ಯಂತ ಮುಳ್ಳು ಕೂಡಿಪ್ಪಂತೆ;
ಬಿಸಿಲಲ್ಲಿ ಬಳಲಿ ಬಂದವರಿಗೆ ನೆರಳಿಲ್ಲ;
ಹಸಿದು ಬಂದವರಿಗೆ ಹಣ್ಣಿಲ್ಲ;
ಕುಸುಮ ವಾಸನೆಯಿಲ್ಲ; ಕೂಡಲು ಸ್ಥಳವಿಲ್ಲ;
ರಸದಲ್ಲಿ ಸ್ವಾದವು ವಿಷದಂತೆ ಇರುವ ಜಾಲಿಯ ಮರದಂತೆ |

ಊರ ಹಂದಿಗೆ ಷಡ್ರಸಾನ್ನ ವಿಕ್ಕಲು
ನಾರುವ ದುರ್ಗಂಧ ಬಿಡಬಲ್ಲದೇ ;
ಘೋರ ಪಾಪಿಗೆ ತತ್ವಜ್ಞಾನವ ಪೇಳಲು |
ಕ್ರೂರ ಕರ್ಮವ ಬಿಟ್ಟು ಸುಜನನಾಗುವನೆ ||
ತನ್ನಿಂದ ಉಪಕಾರ ಕೋಟಿಕಾದರೂ ಇಲ್ಲ |
ಬಿನ್ನಾಣ ಮಾತಿಗೆ ಕೊನೆಯಿಲ್ಲ
ಅನ್ನಕೆ ಸೇರಿದ ಕುನ್ನಿ ಮಾನವರಂತೆ
ಇನ್ನಿವರ ಕಾರ್ಯವು ಪುರಂದರ ವಿಠಲ ಎನ್ನುತ್ತಾರೆ.

ಇದರ ಜೊತೆಗೆ ಇನ್ನೊಂದು ಹಾಡು ಕೂಡಿಕೊಳ್ಳುತ್ತದೆ. ಅದರ ಮೋಜು ಚೆನ್ನಾದುದೇ. "ನಿಂದಕರಿರಬೇಕು. ಹಂದಿ ಇದ್ದರೆ ಹ್ಯಾಂಗೆ ಕೇರಿ ಶುದ್ಧಿಯೋ ಹಾಂಗೆ! * ದುಷ್ಟ ಜನರು ಈ ಸೃಷ್ಟಿಯೊಳಿದ್ದರೆ | ಶಿಷ್ಟ ಜನರಿಗೆಲ್ಲ ಕೀರ್ತಿಗಳು. ದುರುಳ ಜನಂಗಳು ಚಿರಕಾಲವಿರುವಂತೆ ಕರವ ಮುಗಿದು ವರವ ಬೇಡುವನು" ಎನ್ನುವವರೆಗೂ ಅವರ ಮನಸ್ಸು ಹೋಗುತ್ತದೆ. ದಾರಿಯಲ್ಲಿ ಯಾರನ್ನಾದರೂ ಕಂಡು, ಒಂದು ಕೆಳಿತನದ ಮಾತೊ, ಛೀ ಪೆಟ್ಟೋ ಹಾಕಬೇಕು ಎನ್ನಿಸಿದಾಗ ಅಥವಾ ಎಚ್ಚರಿಕೆ ಕೊಡಬೇಕೆನ್ನಿಸಿದಾಗ, ಅಥವಾ ಸತ್ಯವನ್ನು ನುಡಿಯಬೇಕು ಎನ್ನಿಸಿದಾಗ ದಾಸರು ಅಂಥವರಿಗೆ ಆದರದಿಂದ ನುಡಿಯುತ್ತಾರೆ. ಅದೂ ಪ್ರೀತಿಯ ಕಾರಣವೇ. ಏನು ಮಾಡಿದರೆ ಅವರಿಗೆ ನೆರವು ಸಿಕ್ಕುತ್ತದೆಯೊ, ಅವರು ಉದ್ಧಾರವಾಗುತ್ತಾರೊ ಅದನ್ನು ಸ್ಪಷ್ಟವಾಗಿ ತಿಳಿಸುತ್ತಾರೆ.

ಎರಡರ್ಥ ಬರುವಂಥ ಹಾಗೇ ಮುರಿಯಬಲ್ಲ ಪದಗಳನ್ನು ಬಳಸಿ ದಾಸರು ಕೆಲವು ವೇಳೆ ಬೆಚ್ಚು ಬೀಳಿಸುತ್ತಾರೆ. ದಾಸರು ಅಚ್ಚ ಬ್ರಾಹ್ಮಣರು. ಆದುದರಿಂದ ಸಾಮಾನ್ಯವಾಗಿ, ಮುಸ್ಲಿಮರು ಕೊಟ್ಟಂಥ ಆಹಾರ ಅವರಿಗೆ ವೈಲಿಗೆ. ಒಂದು ಹಾಡು ಹೀಗೆ ಆರಂಭವಾಗುತ್ತದೆ. "ತುರುಕರು ಕರೆದರೆ ಉಣಬಹುದಣ್ಣಾ!" ಎಂದು. ಮೊದಲು ಇದನ್ನು

* ದಾಸರು ಇಲ್ಲಿ ಮಾತನಾಡುವುದು, ಒಂದು ಹಳ್ಳಿ–ಊರನ್ನು ಕುರಿತು; ಹಿಂದಿನ ಕಾಲದ ಹಳ್ಳಿಯನ್ನು.

ಕೇಳಿದ ಕೂಡಲೆ ಕಿವಿಗೆ ಬಡಿವ ಅರ್ಥ ತುರುಕರು ಎಂದರೆ ಮುಸ್ಲಿಮರು ಎಂದು. ಅವರು ಆಹ್ವಾನಿಸಿದರೆ ಊಟ ಮಾಡಬಹುದು ಎಂದಾಗುತ್ತದೆ. ದಾಸರು ಹಾಗೆ, ಹೀಗೆ ಹೇಳಿಯಾರೆ? ಹೀಗೆ ಹೇಳುತ್ತಾರಲ್ಲಾ ಎಂದು ದಿಗ್ಭ್ರಮೆಗೊಂಡವರಿಗೆ ಅವರ ಝುಗುಳ್ಳಗೆ ಕಾಣಿಸುತ್ತದೆ. ತುರು–ಕರು ಎಂದರೆ ಹಸು–ಕರು ಎಂದು. ಕರೆ ಎಂಬ ಮಾತಿಗೂ ಎರಡರ್ಥ; ಆಹ್ವಾನ ಕೊಡುವುದು ಎಂದು ಒಂದು. ಹಸುವಿನ ಹಾಲು ಕರೆಯುವುದು ಎಂಬು ದೊಂದು. ಮುಂದೆ ಬರುವ ಪದ್ಯಗಳು, ಸಮಾಜದಲ್ಲಿಯ ಜನಕ್ಕೆ ಥಂಡಿ ಯಾಗಿ ಹಾಲು ಕರೆಯುವ ಆಕಳಿಂದ ಎಷ್ಟು ಪ್ರಯೋಜನವುಂಟು ಎಂಬುದನ್ನು ತಿಳಿಸುತ್ತವೆ. ತುರುಕರಿಂದ ಮುಟ್ಟು ಮಡಿ ಬಿಟ್ಟು ಹೋಗು ವುದು | ತುರುಕರಿಂದಲಿ ಎಂಜಲು ಹೋಗುವುದು | ತುರುಕರ ಕೂದಲು ತುರುಬಿಗೆ ಸುತ್ತಿದರೆ, ಎಣಿಕೆಯಿಲ್ಲದ ಮುತ್ತೈದೆಯರಣ್ಣ; ತುರುಕರ ಪೂಜಿಸೆ ಹರಿ ಬಲುಮೆ ಮುಂತಾಗಿ ವರ್ಣಿಸುತ್ತಾರೆ. ಇನ್ನೊಂದು ಪಲ್ಲವಿ, ಒಂದೇ ಮಾತಿನ ಬೆಡಗು, ಚಮತ್ಕಾರವಾಗಿರುವುದನ್ನು ವರ್ಣಿಸುತ್ತದೆ. ಅದರ ಪಲ್ಲವಿ–" ತಂದೆ, ನೀ ತಂದೆ, ನಾ ಬಂದೆ, ನಿನ್ನ ಹಿಂದೆ " ಎಂದು ತೊಡಗುತ್ತದೆ. ಮೊದಲ ತಂದೆ, ಹೆತ್ತ ತಂದೆ, ಲೋಕಕ್ಕೆ ನೀನು, ನನ್ನನ್ನು ತಂದದ್ದರಿಂದ ಅಥವಾ ನೀನು ಮುಂದೆಬರಲು ನಾ ಹಿಂದೆ ಬಂದೆ, ನೀ ತಂದೆ ಎಂಬಂತಾಗುತ್ತದೆ. ಶಬ್ದದ ಪುನರುಕ್ತಿ ಮತ್ತು ಒಂದು ಅನುಪ್ರಾಸ ಅರ್ಥದ ಮತ್ತು ಭಾವಾಭಿವ್ಯಂಜನೆ ಬಹು ಚೆಲುವಾದ ಫಲ ಗಳನ್ನು ಉಂಟುಮಾಡಿಕೊಡುತ್ತದೆ. ಇನ್ನೂ ಹೆಚ್ಚಿನ ವಿನೋದ–ಒಂದು ನಾಯಿಯನ್ನು ಕುರಿತ ಸಂಬೋಧನೆ. ಕನ್ನಡ ಸಾಹಿತ್ಯದಲ್ಲಿ ಅಂಥದು ಇನ್ನೊಂದಿಲ್ಲ. ಬೀದಿಗಳಲ್ಲಿ ನಾಯಿ ತಿರುಗಾಡುತ್ತಿರುವುದನ್ನು ಕಂಡಾಗ ಅದನ್ನು ನಿಲ್ಲಿಸಿಕೊಂಡು ಅದನ್ನು ಪ್ರಶ್ನೆ ಕೇಳುವಂತೆ ತೊಡಗುತ್ತದೆ.

" ಡೊಂಕು ಬಾಲದ ನಾಯಕರೆ, ನೀವೇನೇನೂಟವ ಮಾಡಿದಿರಿ ?
ಕಣಕ ಕುಟ್ಟುವ ಅಲ್ಲಿಗೆ ಹೇಗಿ, ಹಣಿಕಿ ಇಣಿಕೀ ನೋಡುವಿರಿ
ಕಣಕ ಕುಟ್ಟೋ ಒನಕೆಲಿ ಬಡಿದರೆ ಕುಂಯ್ ಕುಂಯ್
ರಾಗವ ಪಾಡುವಿರಿ !

ಹುಗ್ಗಿ ಮಾಡೊ ಅಲ್ಲಿಗೆ ಹೋಗಿ ತಗ್ಗಿ ಬಗ್ಗಿ ನೋಡುವಿರಿ,
ಹುಗ್ಗಿ ಮಾಡೊ ಸೌಟಲಿ ಬಡಿದರೆ ಕುಂಯ್ ಕುಂಯ್
ರಾಗವ ಮಾಡುವಿರಿ.
ಹಿರೇ ಬೀದಿಯಲಿ ಓಡುವಿರಿ, ಕರೇ ಬೂದಿಯಲಿ ಹೊರಳುವಿರಿ"

ಎಂದು, ನಾಯಿಯನ್ನಾದರೂ ಬಿಡುತ್ತಾರೆಯೆ ದಾಸರು? ಪುರಂದರ ವಿಠಲರಾಯನ ಮರೆತು ಸದಾ ನೀವು ಚಲಿಸುವಿರಿ. ನಾಯೂ ವಿಠಲನನ್ನು ನೆನೆಯಬೇಕು; ನಾಯಾಗಬಹುದು—ನಾಯ ಸ್ವಭಾವದವರಾಗಬಹುದು. ಆದರೆ ದಾಸರ ಮನಸ್ಸು ಹೇಗೆ ಲಘುವಾಗಿ ಆಡಬಲ್ಲುದು ಎಂಬುದಕ್ಕೆ ನಿದರ್ಶನ ಇಂಥ ಹಾಡು. ಹೀಗೆಲ್ಲಿ ಮಾಡುವುದು, ಏಕೆ ಎಂದು ಕೇಳಿದರೆ, 'ನೀ ನಾಯಿ' ಒಮ್ಮೆಯೂ ಪುರಂದರ ವಿಠಲನನ್ನು ನೆನೆಯುವುದಿಲ್ಲ ಎಂದರ್ಥ.

ಇನ್ನೊಂದು ಮಟ್ಟದಲ್ಲಿ ದಾಸರ ನುಡಿ ನುಡಿಯತ್ತದೆ; ಚಕ್ರವರ್ತಿ ಕೃಷ್ಣದೇವರಾಯನು ಒಮ್ಮೆ ಸಂಭಾಷಣೆ ನಡೆಸಿದಂತೆ—ಇದು ಐತಿಹ್ಯ—ಇಲ್ಲಿ ಮಾತು ಬರುತ್ತದೆ. ಹಿಂದಿನ ಕಾಲಗಳಲ್ಲಿ ರತ್ನಪಡಿ ವ್ಯಾಪಾರಿಯ ಹಾಗೆ, ಸಾಹುಕಾರನ ಹಾಗೆ ಮಹಾರಾಜನ ಪರಿಚಯ ಇವರಿಗೆ ಇದ್ದಿರಬೇಕು. ಈಗ ಇವರು ಪುರಂದರದಾಸರು. ಈ ಪರಿಸ್ಥಿತಿಗೆ ತಮ್ಮನ್ನು ತಂದುಕೊಂಡದ್ದನ್ನು ಆತನು ಏನೋ ವ್ಯಾಖ್ಯಾನ ಮಾಡಿರಬೇಕು. ಒಂದೆರಡು ಬಾರಿ ಮಹಾರಾಜನು ಅವರಿಗೆ ಧಾರಾಳವಾಗಿ ದಾನಗಳನ್ನೂ ಕೊಟ್ಟಂತೆ ಕಾಣುತ್ತದೆ. ಅದನ್ನು ದಾಸರು ಬಡವರಿಗೆ ಹಂಚಿಕೊಟ್ಟಿದ್ದರೆಂದು ತಿಳಿದು ಬಂದಿದೆ. ದಾಸರು ಸಹಜವಾಗಿ ಚಕ್ರವರ್ತಿಯ ಸ್ಥಿತಿಗೂ, ತನ್ನ ಸ್ಥಿತಿಗೂ ಹೋಲಿಕೆ ವ್ಯತ್ಯಾಸಗಳನ್ನು ಕಾಣಿಸುತ್ತ, ತಮ್ಮ ಸ್ಥಿತಿಯನ್ನು ಮೆಚ್ಚಿಕೊಳ್ಳುತ್ತಾರೆ. ಏನು ಧೈರ್ಯ! ಯಾರ ಹಂಗು ಅವರಿಗೆ ಇಂದು?

ನಿಮ್ಮ ಭಾಗ್ಯ ದೊಡ್ಡದೊ—ನಮ್ಮ ಭಾಗ್ಯ ದೊಡ್ಡದೊ!
ಸಮ್ಮತಿಯಲಿ ನೀವು ನಾವು ಸಾಟಿ ಮಾಡಿ ನೋಡುವ ಬನ್ನಿ

ಈ ಎರಡು ಸ್ಥಾನಗಳಲ್ಲಿ ಸಮಾನತೆ ಹೇಗೆ; ತನ್ನದರ ಮೇಲ್ಮೆ ಸ್ಥಾಪಿಸುವ ಗಾಂಭೀರ್ಯವಿದೆ ಉತ್ತರದಲ್ಲಿ. ವಿವರಗಳನ್ನು ನೋಡಿ.

ಹೇಮ ಹೊನ್ನು–ಹಣಗಳಿಗೆ ಹೇರಳ ಭಯಗಳುಂಟು |
ರಾಮನಾಮ ದ್ರವ್ಯಕ್ಕೆ ಇನ್ನು ಯಾರ ಭಯವೂ ಇಲ್ಲ |
ಕಡಗ ಕಂಠ ಮಾಲೆಗಳಿಗೆ ಕಳ್ಳರಂಜಿಕೆವುಂಟು |
ಅಡವಿ ತುಳಸಿ ಮಾಲೆಗೆ ಇನ್ನಾರ ಅಂಜಕೆ ಇಲ್ಲವಯ್ಯ
ವ್ಯಾಪಾರ ಉದ್ಯೋಗಕ್ಕೆ ಇನ್ನು ವ್ಯಾಕುಲದ ಭಯವುಂಟು
ಗೋಪಾಳದ ವೃತ್ತಿಗೆ ಇನ್ನು ಗೊಡವೆ ಯಾರದಿಲ್ಲಯ್ಯ |
ಸರಕು ಬೆಲ್ಲ ತುಪ್ಪ ಸವೆದೀತು ಎಂಬ ಚಿಂತೆಯುಂಟು |
ಹರಿ ನಾಮಾಮೃತಕೆ ಇನ್ನಾವ ಚಿಂತೆ ಇಲ್ಲವಯ್ಯಾ
ನಿಮ್ಮ ಭಾಗ್ಯ ಲಕ್ಷ್ಮಿದೇವಿ | ನಮ್ಮ ಭಾಗ್ಯ ನಾರಾಯಣನು;
ನಮ್ಮ ನಿಮ್ಮ ಭಾಗ್ಯ ಪುರಂದರ ವಿಠಲನು ” :

ಮಹಾರಾಜನಿಗೆ ಸರಿಯಾದ ಉತ್ತರ ಸಿಕ್ಕಿರಬೇಕು. ಇದು ಭಿಕ್ಷುಕನ ಗರ್ವ. ಆ ಕಾಲದ ಮಹಾಗರ್ವಿ ಚಕ್ರವರ್ತಿಯನ್ನು ಕುರಿತು ಈ ರೀತಿ ಸಮತೆ ನಿಲ್ಲುವುದು ಇನ್ನಾರಿಗೆ ಶಕ್ಯ ?

ದಾಸರು ಈಗ ಸಂತುಷ್ಟಚಿತ್ತರಾದ ಜೀವಿಗಳು. ಮುಕ್ತರು. ಆತನೀಗ ಎಲ್ಲ ಕ್ಲೇಶ ನಿರ್ಬಂಧಗಳಿಂದಲೂ ಬಿಡಿಸಿಕೊಂಡಿದ್ದರು. ತತ್ರ ಕಾ ಪರಿ ದೇವನಾ. ಈಗ ಅವರಿಗೆ ಮೂರು ಲೋಕಗಳಲ್ಲಿ ಸ್ವರ್ಗ, ಮರ್ತ್ಯ, ಪಾತಾಳ ಮತ್ತು ಇನ್ನೊಂದು ಪ್ರಪಂಚದಲ್ಲಿಯೂ ಧಾರಾಳವುಂಟು.

# 6. ಸಾಹಿತ್ಯಕ್ಕೆ, ಸಂಗೀತಕ್ಕೆ ಪುರಂದರದಾಸರ ಕೊಡುಗೆ

ಪುರಂದರದಾಸರ ಕೊಡುಗೆ ಪ್ರಥಮತಃ ಕರ್ನಾಟಕದ ಸಾಧು ಸಂತರೂ ಗೇಯಕಾರರೂ ಆಗಿ, ಮೊದಲು ಪಾರ್ಥಿವ ಜೀವನಕ್ಕೆ ಕಚ್ಚಿಕೊಂಡು ಇದ್ದವರು, ಭಗವದ್ಭಕ್ತರಾಗಿ ಮನಃಶಾಂತಿ ಪಡೆದುಕೊಂಡರು. ತಮ್ಮ ಕಾಲದಲ್ಲಿ ಸಜ್ಜನರಾಗಿ ಮುಕ್ತರಾಗಿದ್ದ ಗುರು ವ್ಯಾಸರಾಯರ, ಸಮಾನ ಭಕ್ತರಾದ ಕನಕದಾಸರಂಥವರ ಸಹವಾಸ ಪಡೆಯುವ ಸಂತೋಷ ಅವರಿಗೆ ದೊರಕಿತು. ಅಧ್ಯಾತ್ಮ ಸಾಧನೆಯ ಯತ್ನದಲ್ಲಿ ತೊಡಗಿದ ಜೀವನ ಎಷ್ಟು ದೊಡ್ಡದು ಎಂಬುದನ್ನು ಕಾಣಬಲ್ಲವರಾದರು. ಸಮತೆಯನ್ನು ಸಾಧಿಸಿದ ಮನಸ್ಸನ್ನೂ ತಮ್ಮ ಆತ್ಮ ಚೈತನ್ಯಕ್ಕೆ ಧಾರಾಳವನ್ನೂ ತಂದು ಕೊಳ್ಳಲು ಅವರು ಕಷ್ಟಪಟ್ಟು ದುಡಿದಿದ್ದರು. ಸಂದೇಹಗಳಾಗಲಿ ದೇಹದ ಅಗತ್ಯ ಪೀಡೆಗಳಾಗಲಿ ಅವರ ಮನಸ್ಸನ್ನು, ಆತ್ಮವನ್ನು ಕತ್ತಲುಗೊಳಿಸ ದಂತೆ ನೋಡಿಕೊಂಡಿದ್ದರು. ಸುತ್ತಲೂ ಇದ್ದ ಜನರ ಬಗುಳು, ಹಲ್ಕಿರಿತ ಮೊದಮೊದಲು ಅವರಿಗೆ ಸಂತತವಾಗಿ ನೋವುಂಟುಮಾಡಿತ್ತು. ಮನಸ್ಸಿನ ಒಂದು ಸ್ತಿಮಿತವನ್ನು ಬೆಳಸಿಕೊಳ್ಳುವುದಕ್ಕೂ ದೇವರಲ್ಲಿ ಏಕಾಗ್ರ ಭಕ್ತಿ ಯನ್ನು ಸಾಧಿಸುವುದಕ್ಕೂ ಅವರಿಗೆ ಹೆಚ್ಚು ಕಾಲ ಹಿಡಿಯಲಿಲ್ಲ. ಅದು ಅವರಿಗೆ ಅಂತಃಪ್ರಸನ್ನತೆಯನ್ನು ತಂದಿತ್ತು. ತನ್ನದಾಗಿದ್ದುದನ್ನೆಲ್ಲ ಅವರು ಬಿಟ್ಟುಕೊಟ್ಟಿದ್ದರಲ್ಲವೇ. ದೈವೇಚ್ಛೆಗೆ ತಮ್ಮನ್ನು ತಾವು ಅರ್ಪಿಸಿ ಕೊಂಡಿದ್ದುದರಿಂದ ತನ್ನನ್ನು ಕುರಿತಾಗಲಿ, ಹೆಂಡತಿ ಮಕ್ಕಳ ರಕ್ಷಣೆಯನ್ನು ಕುರಿತಾಗಲಿ ಯೋಚನೆ ಇಲ್ಲದವರಾಗಿದ್ದರು. ಬದುಕಿನಲ್ಲಿನ ಗೆಲವು ಸೋಲು ಅವರನ್ನು ಸೋಲಿಸಲಿಲ್ಲ–ನೋಯಿಸಲಿಲ್ಲ. ಎಲ್ಲದರಿಂದಲೂ ತಮ್ಮನ್ನು ಬಿಡಿಸಿಕೊಂಡು ಸ್ವಂತ ಆಸಕ್ತಿಗಳನ್ನು ಬಿಟ್ಟು ಬದುಕುವುದನ್ನು ಅವರು ಬೆಳಸಿಕೊಂಡಿದ್ದುದರಿಂದ ಲೋಕದ ಸಮಸ್ತ ಸಂಗತಿಗಳನ್ನು ಕುರಿತು ಉದಾರವಾಗಿ ಇರಲು ನೆರವಾಯಿತು. ನಡೆದಲ್ಲೆಲ್ಲ ನೆರವು ಕೊಡುತ್ತ ಹಿತವನ್ನು ಉಪದೇಶಮಾಡುತ್ತ ಕಷ್ಟದಲ್ಲಿದ್ದವರಿಗೆ ಸಮಾಧಾನ ಹೇಳುತ್ತ ನಡೆದರು. ಸ್ವಂತ ಹೃದಯದಲ್ಲಿ ಹರ್ಷವಿದ್ದ ಅವರು ಯಾರನ್ನು

ಕಂಡರೂ ನಗುನಗುತ್ತ ಎಂಥವರಿಗೂ ಭರವಸೆ ಕೊಡುತ್ತ ಜೀವನದ ಸಂತೋಷಕ್ಕೆ ಕಾರಣರಾದರು.

ಇದು ಆತನ ಉಕ್ತಿಯನ್ನು ಸರಳ ಮಾಡಿತು, ಸಗುಣವಾಗಿ ಮಾಡಿತು. ಮನುಷ್ಯರನ್ನು ಕಂಡರೆ ಅವರಿಗೆ ಪ್ರೀತಿ. ಯಾವ ಸಹವಾಸದಲ್ಲಿಯೂ ಸುಲಭವಾಗಿ ಬೆರೆಯುತ್ತಾ, ಎಂಥ ಸನ್ನಿವೇಶಕ್ಕೂ ಬಗ್ಗಿಕೊಳ್ಳಬಲ್ಲವರಾಗಿದ್ದರು. ತನ್ನ ದೇವರಲ್ಲಿ ಅವರಿಗಿದ್ದ ಪ್ರೀತಿ ಸ್ವಚ್ಛವಾದದ್ದು, ನಿಷ್ಠವಾದದ್ದು. ಅವರ ಶ್ರದ್ಧೆ ಇತರರಿಗೆ ತಟ್ಟುವುದೂ ಮುಟ್ಟುವುದೂ ಶಕ್ಯವಿತ್ತು.

ಆಯಾ ಸಂದರ್ಭಕ್ಕೆ ತಕ್ಕಂತೆ ಸಹಜವಾಗಿ ನೇರವಾಗಿ ಹುಟ್ಟಿ ಬಂಗವು ದಾಸರ ಹಾಡುಗಳು. ಅಥವಾ ಯಾರನ್ನೊ, ಕಣ್ಣಿಗೆ ಬಿದ್ದ ಜೀವದ ಒಂದು ಪರಿಸ್ಥಿತಿಯನ್ನೊ ಕುರಿತವು. ಸ್ಪಷ್ಟವಾಗಿ, ನೇರವಾಗಿ, ತಿಳಿಯಾಗಿ ಅಂಥಲ್ಲಿ ನುಡಿಯಬೇಕಾದ ಅಗತ್ಯ ಕಂಡರೆ ಅವರು ಏನು ಹೇಳಬೇಕೊ ಅದು ಆ ಸಮಯದಲ್ಲಿ ಜನರ ಮನಸ್ಸನ್ನು ನಾಟಬೇಕಿತ್ತು. ಹೇಳಿದ ಅರ್ಥ ಇನ್ನೊಬ್ಬರಿಗೆ ತಿಳಿಯಬೇಕಿತ್ತು. ಹೇಳಿದುದು ಹಾಡಿನ ರೂಪದಲ್ಲಿ ಬಂದುದರಿಂದ ಅದು ನೇರವಾಗಿ ಮನಸ್ಸುಗಳನ್ನು ತಟ್ಟಿ ಪ್ರಭಾವಗೊಳಿಸುವಂಥುದಾಯಿತು. ನಾಡಿನ ಚರಿತ್ರೆಯ ಸಂಸ್ಕೃತಿಯೂ ಅವರ ತಲೆಯ ತುಂಬ ಇದ್ದುದೇ. ಪುರಾಣ, ಇತಿಹಾಸ, ಸಂಗತಿಗಳಿಗೆ ಉದಾಹರಣೆಯಾಗಿ, ಹೇಳುವುದರ ಅಲಂಕರಣಕ್ಕಾಗಿ ಒದಗುತ್ತಿತ್ತು. ಆದುದರಿಂದ ಜನಕ್ಕೆ ಒಪ್ಪಿಗೆಯಾಗುತ್ತಿತ್ತು. ಈ ಕಡೆಗೆ ಓಲುವಂತೆ ಮಾಡುತ್ತಿತ್ತು. ಹೃದಯದ ಅಂತರದಲ್ಲಿ ಅವರು ಕವಿ. ಉಪಮೆಗಳೂ, ರೂಪಕಗಳೂ ಹೊಮ್ಮಿಬಂದವು. ಲೋಕೋಕ್ತಿ, ಗಾದೆ, ಸುಮಾರು ನಾಡಿನಲ್ಲಿ ಬಳಕೆಯಲ್ಲಿದ್ದುದೆಲ್ಲ ಹಾಡುಗಳಲ್ಲಿ ಪಲ್ಲವಿಗಳಂತೆ ಕೂಡ ಬಂದವು. ಅವರು ಬಳಸಿದ ಭಾಷೆ ಆ ಕಾಲದಲ್ಲಿ ಜನ ಈಗ ಯಾವುದನ್ನು ಉತ್ತರ ಕನ್ನಡದ್ದು ಎನ್ನುವರೊ ಅದಕ್ಕೆ ಹತ್ತಿರದ್ದು. ಕನ್ನಡದ ಮಹತ್ಸಾಧನೆಗಳ ಕಾಲದಲ್ಲಿ ಆ ಭಾಗವೇ ನಮ್ಮ ನುಡಿಯ ನಿಜವಾದ ಹೃದ್ಭಾಗ. ಬಲಾತ್ಕಾರದಿಂದ ಅಥವಾ ಶ್ರಮದಿಂದ ನೆಯ್ದುದ್ದು, ಹೊಸೆದದ್ದು ಯಾವುದೂ ಅಲ್ಲಿಲ್ಲ. ಹೃದ್ಭಾವ, ಚಿಂತನ, ಧ್ವನಿ, ಧಾಟಿ, ಸಂಗೀತ,

ತಾಳದ ಬಡಿತ ಹೊಂದಿಕೊಂಡು ಒಂದೊಂದು ಹಾಡನ್ನೂ ಸಾರ್ಥಕವಾದ ಉಕ್ತಿಯನ್ನಾಗಿ ಮಾಡಿದೆ. ಹಾಡಿನ ಪಲ್ಲವಿ ಅದರ (ಮುಖ್ಯ) ಕೇಂದ್ರ ಭಾವವನ್ನು ವ್ಯಕ್ತಪಡಿಸುತ್ತದೆ. ಅನುಪಲ್ಲವಿ ಅದಕ್ಕೆ ಒತ್ತಾಸೆಯಾಗಿಯೊ ಅದರ ಅರ್ಥಕ್ಕೆ ಯಾವುದಾದರೂ ವಿಶೇಷವನ್ನು ಸೇರಿಸಿಯೊ ಸೊಗಸುತ್ತವೆ. ಯಾವ ಸನ್ನಿವೇಶದಲ್ಲಿ ಅದು ಹುಟ್ಟಿಬಂದುದು ಎಂಬ ಭಾವಾಂಶವನ್ನು ಮನಸ್ಸಿಗೆ ತಟ್ಟುವಂತೆ ಹೃದಯಕ್ಕೆ ಹೊಗುವಂತೆ ನುಡಿಯುತ್ತದೆ. ಎಂದರೆ, ಹಾಡಿನ ಸಾರಭೂತವಾದ ಮತ್ತು ಒಟ್ಟರ್ಥಗಳು ಪಲ್ಲವಿ ಅನುಪಲ್ಲವಿಗಳಲ್ಲಿ ಪೂರ್ತಿಯಾಗಿ ಪ್ರತಿಫಲಿಸುತ್ತವೆ. ಈ ಅಚ್ಚು ಶ್ರೀಪಾದರಾಯರ ಕಾಲ ದಿಂದಾದರೂ ಅವರಿಗೆ ಬಂದಿರಬೇಕು. ಶ್ರೀಪಾದರಾಯರೇ ಹರಿದಾಸ ಪರಂಪರೆಗೆ ಮೂಲ.

ಈ ಹಿಂದೆ ಹೇಳಿರುವ ಹಾಡುಗಳಲ್ಲಿ ಅನೇಕವು ಈ ಸಂಗತಿಯನ್ನು ಉದಾಹರಿಸುತ್ತವೆ: ಗೋಪಿ ಯಶೋದೆಯರ ಗೀತಗಳು; ಮಗು ಕೃಷ್ಣ ನನ್ನು ಕುರಿತು ದಾಸರ ಮನಸ್ಸಿನಲ್ಲಿಯೇ ಆ ಬಗೆಯ ಬಯಕೆ ಆನಂದಗಳು; ತನ್ನ ಹೃದಯವನ್ನು ಇರಿದಿದ್ದ, ಹುಟ್ಟಿದ್ದ ವ್ಯಥೆಗಳು—ಇವನ್ನೆಲ್ಲ ಹಾಡುಗಳಲ್ಲಿ ಕಾಣಬಹುದು. ಮೊದಮೊದಲು ಅನೇಕ ದುಃಖಗಳು, ಅವರ ಶಾಂತಿ ಯನ್ನು ಕೆಡಿಸುತ್ತಿದ್ದವು. ಅವರ ಇಷ್ಟಾರ್ಥಗಳು ನೆರವೇರದಂತೆ ಮಾಡಿ ದ್ದವು. ಬಡವರ ಪರವಾಗಿಯೂ, ದುಃಖಾರ್ತರ ಪರವಾಗಿಯೂ, ಅವರ ಸಹಾನುಭೂತಿ, ಅವರು ಐಶ್ವರ್ಯವನ್ನು ಬಿಟ್ಟುಬಂದ ಕಾಲದಿಂದಲೂ ಒಲಿದುಬಂದಿತ್ತು. ಆದುದರಿಂದ ಜೀವನದ ಒಂದು ವಿವೇಕ ಅವರ ನುಡಿ ಯನ್ನು ನಡೆಸಿತ್ತು. ಅವರ ಹೃದಯ ಪೂರ್ತಿಯಾಗಿ ಅಭಿವ್ಯಕ್ತವಾದಂತೆ ಅಲ್ಲಿ ಕಾಣುತ್ತದೆ. ಈ ನಾಡಿನಲ್ಲಿ ಹುಟ್ಟಿಕೊಂಡ ಎಲ್ಲ ಮತ ವರ್ಗದವ ರಿಗೂ ಒಪ್ಪುವ, ಹೊಂದುವ ನಡೆ ನೀತಿ ಅಲ್ಲಿವೆ. ಸಾಧಾರಣವಾಗಿ ಭಾರತದಲ್ಲೆಲ್ಲ ಅವಕ್ಕೆ ಪ್ರಾಧಾನ್ಯವುಂಟು. ಅವು ನಮ್ಮ ಸಂಸ್ಕೃತಿಗೆ ಆಧಾರ. ಅವನ್ನು ನುಡಿಯುವ, ಅವರ ಧ್ವನಿ ಆ ಸತ್ಯವನ್ನು ದೃಢ ವಿಶ್ವಾಸವನ್ನು ನುಡಿಯುತ್ತದೆ. "ಮಾನವ ಜನ್ಮ ದೊಡ್ಡದು. ಇದ ಹಾನಿ ಮಾಡಲುಬೇಡಿ ಹುಚ್ಚಪ್ಪಗಳಿರ" ಎನ್ನುವಾಗ "ಈಸಬೇಕು ಇದ್ದು ಜೈಸಬೇಕು" ಎಂದಾಗ, "ಈ ಪರಿಯ ಸೊಬಗಾವ ದೇವರಲಿ ಕಾಣೆ"

ಅಥವಾ, "ಬಿನ್ನಹಕೆ ಬಾಯಿಲ್ಲವಯ್ಯಾ ಅನಂತ ಅಪರಾಧ ಎನ್ನಲ್ಲಿ ಇರಲಾಗಿ" ಎಂಬ ಆತ್ಮನಿವೇದನೆಯಲ್ಲಿ ಬದುಕನ್ನು ನೆನಸಿಕೊಂಡು "ಅನುಗಾಲವು ಚಿಂತೆ ಜೀವಕ್ಕೆ ದೇವರಲಿ ಅದು ನಿಂತು ಸಾಕಾಗುವ ತನಕ" ಎಂಬ ತಿಳಿವಿಗೆ ನಡಸುವಾಗ "ಇಂತಿಂಥಾದ್ದೆಲ್ಲಾನೂ ಬರಲಿ ಗೋವಿಂದನ ದಯೆಯೊಂದಿರಲಿ" ಎಂಬ ವಾಕ್ಯಕ್ಕೆ ಉಪಷ್ಟಂಭಕವಾಗಿ ವಿವರಗಳನ್ನು ಬೆಳಸುವಾಗ, ಅವರ ಹೃದಯ ಉಕ್ಕಿ ಹರಿದುಬರುತ್ತದೆ. "ಕಣ್ಣಿನೊಳಗೆ ನೋಡೊ ಹರಿಯ" ಎಂದು ತನಗೊ, ಇನ್ನಾರಿಗೊ ಹೇಳಿಕೊಂಡಾಗ ಅವರ ಆಧ್ಯಾತ್ಮ ಶುದ್ಧಿಯ ಉನ್ನತಿ ವ್ಯಕ್ತಪಡುತ್ತದೆ. "ಕಾಯಲಾರೆನು ಕೃಷ್ಣ ಕಂಡವರ ಬಾಗಿಲನು" ಎಂದಾಗ ಅವರ ಹೃದಯದಲ್ಲಿ ಹುಟ್ಟಿ ಬಂದ ದುಃಖದ ಅಥವಾ ಒಂದು ಅಪಮಾನದ ಕೂಗು ಕೇಳಿದರೆ "ಕಂಡೆನಾ ಕನಸಿನಲಿ ಗೋವಿಂದನ" ಎಂಬಲ್ಲಿಯೂ "ಕೃಷ್ಣಮೂರ್ತಿ ಕಣ್ಣ ಮುಂದೆ ನಿಂತಿದ್ದಂತಿದೆ" ಎಂಬುದರಲ್ಲಿ ಜೀವಂತವಾದ ತನ್ನ ದೇವರ ಪ್ರತ್ಯಕ್ಷತೆಯೂ, ಆತ್ಮಸಾಕ್ಷಾತ್ಕಾರವೂ ಕಾಣಿಸಿಕೊಳ್ಳುತ್ತವೆ. ಯಾರಿಗೆ ಆಗಲಿ, ಗುರುವಿನ ಉಪದೇಶ, ನೇತೃತ್ವ ದೊರೆಯುವವರೆಗೂ ಉತ್ಥಾನತೆ ಯಾಗಲಿ ಪೂರ್ಣ ಕ್ರಿಯಾ ನಿರ್ದೇಶನವಾಗಲಿ ದೊರೆಯಲಾರದೆಂಬುದು ಅವರ ಬೆಳವಣಿಗೆಯ ಕಾಲದಲ್ಲಿ ಅವರಿಗೆ ತಿಳಿದುಬಂದದ್ದರಿಂದ ಯಾವುದು ಅಗತ್ಯ, ಯಾವುದನ್ನು ಬಿಡಬೇಕು ಎಂಬುದನ್ನು ಅವರು ಚೆನ್ನಾಗಿ ಅರಿತಿದ್ದರು. ಸತ್ಯದ ಸಾಕ್ಷಾತ್ಕಾರವಾದಾಗ ಅವರ ನೆತ್ತರಲ್ಲಿ, ಎಲುವಲ್ಲಿ ತಾನು ಕೃತಾರ್ಥನಾದೆ ಭಗವದನುಗ್ರಹ ಸಂಪೂರ್ಣವಾಗಿ ಸಿಕ್ಕಿತು ಎಂದು ಕಂಡುಕೊಂಡವು.

ದೇವರ ಪ್ರೀತಿಯನ್ನು ಪಡೆದಾಗ ಸಮಸ್ತ ಲೋಕದ ಎಲ್ಲದರ ವ್ಯವಹಾರ ವ್ಯವಸ್ಥೆಯನ್ನು ತಿಳಿದುಕೊಂಡ ಹಾಗೆಯೆ. ಆಗ ಮನುಷ್ಯ ಮನುಷ್ಯನಿಗೆ ಕುಲ ಜಾತಿಗಳಿಗೆ ನಡುವೆ ಯಾವ ವ್ಯತ್ಯಾಸವೂ ಇಲ್ಲವೆಂಬಂತೆ ಅವರು ಮಾತನಾಡಬಲ್ಲವರಾದರು. ಹೀಗಾಗಿ ಗೀತಾ ಉಪನಿಷತ್ತುಗಳ ಆಲೋಚನೆಗಳೆಲ್ಲ ಸಹಜವಾಗಿ ಅವರ ಉಕ್ತಿಯ ಭಾಗವಾಗುತ್ತದೆ. ಜಂಗಮರೂ ಮಾಧ್ವಬ್ರಾಹ್ಮಣರೂ ಇಬ್ಬರೂ ಹೊಂದಿಕೊಳ್ಳುವಂತೆ ಆ ವಾಣಿ ನುಡಿಯಬಲ್ಲದ್ದಾಯಿತು. ತಾನೇ ಜಂಗಮನೆಂದು ನುಡಿದಾಗ

ಆದರೂ ಹೃದಯದಲ್ಲಿ ಮಾಧ್ವ ಸಮಯದ ತತ್ತ್ವವೆಂದು ಯಾವುದನ್ನು ಗುರು ವ್ಯಾಸರಾಯರು ನಂಬೆಂದು ಅವರಿಗೆ ಹೇಳಿಕಳಿಸಿದ್ದರೊ ಅದು ಅವರ ಹೃದಯದಲ್ಲಿ ಅಚ್ಚಳಿಯದೆ ನೆಲಸಿರುವುದು ನಿಜವಾಗಿತ್ತು.

ಇರುವುದು ಒಂದೇ ಸಮಯ ಹರಿಚಿತ್ತ. 'ವಿಶ್ವವನ್ನೆಲ್ಲ ಆಳುವುದು ಆ ಹರಿಚಿತ್ತ. ಮಾನವನ ಚಿತ್ತ ರವೆಯಷ್ಟೂ ನೆರವೇರುವುದಿಲ್ಲ. ಶಕ್ಯವಾಗದು ಎಂಬುದು "ತೇನ ವಿನಾ ತೃಣಮಪಿ ನ ಚಲತಿ" ಎಂಬ ಪ್ರಾಚೀನ ವಾಕ್ಯವಲ್ಲದೆ ಬೇರೊಂದಲ್ಲ. ಅದರ ಇಚ್ಛೆ ಇಲ್ಲವಾದರೆ ಹುಲ್ಲುಕಡ್ಡಿ ಚಲಿಸದು ಎಂಬುದು ಸಾಗರದಷ್ಟು, ಪರ್ವತಪಂಕ್ತಿಗಳಷ್ಟು ಹಳೆಯದು. ಮಾನವನ ಮತ್ತು ದೈವದ ಉದ್ದಿಷ್ಟಗಳು ಹಲವೇಳೆ ಅತ್ಯಂತ ವ್ಯತಿರಿಕ್ತವಾಗಿರುತ್ತವೆ. ಬೇಡುವುದು ಮನುಷ್ಯನ ಇಚ್ಛೆಗೆ ಒಳಪಟ್ಟದ್ದು, ನೆರವೇರಿಸುವುದೂ ಬಿಡುವುದೂ ಭಗವದಿಚ್ಛೆ. ಹೆಂಡಿರು ಬೇಕು ಮಕ್ಕಳು ಬೇಕು ಎಂದು ನರನು ಬೇಡಬಹುದು. ದೇವರು ಅವನಿಗೆ ವಿವಾಹವನ್ನೆ ಆಗಲಿಸದಿರಬಹುದು. ಯುಕ್ತವಾದ ಆಹಾರ ವಿತರಣೆಯಾಗಬೇಕೆಂದು ಮನುಷ್ಯನು ಬಯಸಬಹುದು. ಮನುಷ್ಯನು ಅದಕ್ಕಾಗಿ ಕಣ್ಣೀರಿಟ್ಟು ಬೇಡುವಂತೆ ದೇವರು ಮಾಡಬಹುದು. ಬೇಕೆಂದು ಪುರಂದರ ವಿಠಲನನ್ನು ಬೇಡು ಎನ್ನುವುದು ವಿವೇಕದ ಪರಮೋಚಿತ ಪ್ರಕಾರ. ಹಲವು ಗೀತಗಳ ವಿಷಯ ವ್ಯಕ್ತಿಯ ಜೀವನ, ಸಾಮಾಜಿಕ ಜೀವನ; ಕವಿಯಾಗಲಿ ನಾಟಕಕಾರರಾಗಲಿ ನುಡಿಯುವಂತೆ ಇಂಥದನ್ನು ತಮ್ಮ ಉಕ್ತಿಯಲ್ಲಿ ರೂಪಿಸುವುದಿಲ್ಲ. ಅಗತ್ಯಬಿದ್ದಂತೆ ನುಡಿಯುತ್ತಾರೆ, ಅವರ ಹೃದಯ ಪ್ರವೃತ್ತಿ ಒತ್ತಿದಂತೆ. ಹಾಗೆ ನುಡಿದುದು ಸಾಹಿತ್ಯವಾದಾಗ–ಒಂದು ವಿಶೇಷಾರ್ಥದಲ್ಲಿ ಇದು ನಿಜ. ಯಾವುದನ್ನು ಸಾಹಿತ್ಯದ ತತ್ವ, ರೂಢಿ, ತಂತ್ರ ಎಂಬ ಸೂತ್ರಗಳು ವಿಶೇಷ ಲಕ್ಷಣಗಳೂ, ಬೆಡಗು ಜಾಣತನಗಳೂ ಕಾಣಿಸುತ್ತವೆಯೊ ಅಂಥವಕ್ಕೆ ಪ್ರವೇಶವೇ ಇರುವುದಿಲ್ಲ. ಅದು ಕೇವಲವಾಗಿ ವ್ಯಕ್ತಿಯ ವಾಣಿ. ಇನ್ನೇನಾದರೂ ಅದು ಆಗಿದೆಯೊ ಇಲ್ಲವೊ ಎಂಬುದು ಲಕ್ಷ್ಯವಿಲ್ಲ. ಗಣನೆಗೆ ಬಾರದು. ಇಂಥಲ್ಲಿ ಅಷ್ಟನ್ನು ನುಡಿಯಬೇಕೆಂಬುದೇ ಸಾಹಿತ್ಯ. ಹಾಗೆ ಇರಬೇಕೆಂಬುದೇ ಪ್ರಧಾನ ಗಮ್ಯ. ಹಾಗೆಯೇ ಇಲ್ಲಿನ ಸಂಗೀತ ಕೂಡ. ಇಲ್ಲಿನ ಸಂಗೀತಕ್ಕಿಂತ ಹೆಚ್ಚು ಮುಖ್ಯವಾದವು

ಮಾತುಗಳು; ಅವುಗಳಲ್ಲಡಗಿರುವ ಭಕ್ತಿ. ಪುರಂದರದಾಸರು ಕವಿ, ಸಂಗೀತಗಾರರು ಎರಡೂ ಆಗಿದ್ದುದರಿಂದ, ಆ ಎರಡೂ ಸುಖವಾಗಿ ಬೆಸೆದುಬಂದಿವೆ, ಅಥವಾ ಸೇರಿಕೊಂಡು ಬಂದಿವೆ. ಪ್ರಧಾನವಾಗಿರುವುವು ಅಲ್ಲಿನ ಮಾತುಗಳು. ಮಾತುಗಳ ಮೂಲಕ ತಿಳಿಸಿದ ಸಂಗತಿಗಳು. ಈ ಬಗೆಗೆ ತ್ಯಾಗರಾಜರ ಗುರಿ ಬೇರೆ; ದಾಸರ ಗುರಿ ಬೇರೆ. ತ್ಯಾಗರಾಜರಿಗೆ ಪ್ರಧಾನವಾದ ವಿಷಯ ರಾಮಭಕ್ತಿ; ಆತ್ಮಮುಕ್ತಿ. ಅವರು ಸಾಧಿಸಬೇಕೆಂದಿದ್ದುದು ನಾದಯೋಗ.*

ಬಹುಶಃ ಖಾಸಗಿಯಾಗಿ ಅವರಿಗೆ ಉಂಟಾಗಿದ್ದ ಒಂದು ದುಃಖ ಹೇಗೆ ರೂಪಾಂತರಗೊಂಡು ಮನುಷ್ಯ ಸಾಮಾನ್ಯಕ್ಕೆಲ್ಲ ಲಕ್ಷಣವಾಗುವ ವಾಣಿಯಾಯಿತೆಂಬುದಕ್ಕೆ ಒಂದು ಹಾಡನ್ನು ಆರಿಸಿಕೊಳ್ಳಬಹುದು. ಪರೋಕ್ಷವಾಗಿ ಅದು ನಮಗೆ ಸಾಹಿತ್ಯವನ್ನು ರಚಿಸಿಕೊಟ್ಟಿದೆ. ದಾಸರ ಚಿಕ್ಕ ಮಗನೊಬ್ಬನು ತೀರಿಕೊಂಡನೆಂದು ತಿಳಿದುಬಂದಿದೆ. ಅದರ ವ್ಯಥೆ ಅವರ ಎದೆಯ ಭಾರವಾಗಿತ್ತು. ಆ ವ್ಯಥೆ "ಗಿಳಿಯು ಪಂಜರದೊಳಿಲ್ಲ ಹರಿ ಹರಿಯೆ, ಬರಿ ಪಂಜರವಾಯಿತಲ್ಲಾ" ಎಂಬ ಹಾಡು. ಅಕ್ಕ ನಿನ್ನ ಮಾತು ಕೇಳಿ | ಚಿಕ್ಕದೊಂದು ಗಿಳಿಯ ಸಾಕೆ | ರೆಕ್ಕೆ ಬಂದ ಆ ರಾಮ ರಾಮನ | ಬೆಕ್ಕು ಕೊಂಡುಹೋಯಿತಲ್ಲಾ, ಹರಿ ಹರಿಯೆ ಬರಿ ಪಂಜರವಾಯಿತಲ್ಲ || ಅಂಗೈಲಾಡುವ ಗಿಳಿ | ಮುಂಗೈಲೋದುವ ಗಿಳಿ | ಕಂಗಳಿಗೆ ಕಾಣದಂತೆ ಮಂಗಮಾಯವಾಯಿತಲ್ಲ, ಹರಿ ಹರಿಯೋ ಬರಿ ಪಂಜರವಾಯಿತಲ್ಲಾ || ಅದಕ್ಕೆ ಮುತ್ತಿನ ಹಾರ ಹಾಕಿ ಅಲಂಕರಿಸಿದೆ. ಅದರ ಬಣ್ಣ ಎಷ್ಟು ಹಸಿರು ಆ ಪುಟ್ಟಮರಿ ಎಷ್ಟು ಜಾಣಮರಿ ಈಗ ಸತ್ತಿತು, ಹೋಯಿತು ಈ ಕಣ್ಣು ಇನ್ನೆಲ್ಲಿ ಅದನ್ನು ಕಂಡೀತು ಹರಿಹರಿಯೆ | ಇವು ಮಾತುಗಳಾಗಿ ಆ ವ್ಯಥೆಯನ್ನು ವ್ಯಕ್ತಪಡಿಸಿದರೂ ಇದು ಅಚ್ಚಗೀತೆ. ಎಲ್ಲ ಗೀತೆಗಳ ಆರಂಭದ ಪಂಕ್ತಿಗಳೂ ಯಾವುದೊ ಅನುಭವ ಸಂಪತ್ತಿನ ಒಂದು ಸಾರಾಂಶ. ಅಂಥ ವಾಣಿಯು ಅದರ ಸಮೀಪಕ್ಕೆ ಬರುವುದು; ಇನ್ನೊಂದಿಲ್ಲ. ಅದಕ್ಕಿಂತ ಉತ್ತಮವಾದ ವಾಣಿ ದೊರಕುವುದಿಲ್ಲ.

---

* ದೀಕ್ಷಿತರಿಗೆ ಕೀರ್ತನೆಯಲ್ಲಿನ ಗೇಯಭಾಗ ಸುಮಾರು ಸಂಪೂರ್ಣವಾಗಿ ಅದರ ಸಂಗೀತದ ಶಿಲ್ಪ; ರಚನೆ. ಅವರೂ ಚಕ್ರದ ಆರಾಧನೆಯಲ್ಲಿ ತೊಡಗಿದ್ದವರು.

ಅವರು ಹಾಡಿದ ಮೊದಲ ಪದ್ಯ ಯಾವುದೊ, ಕಡೆಯದು ಯಾವುದೊ ತಿಳಿಯದು. 'ಆದದ್ದೆಲ್ಲ ಒಳಿತೇ ಆಯಿತು' ಎಂಬುದು ಅವರ ಜೀವನದ ಒಂದು ಮಜಲಲ್ಲಿ ತೊಡಗಿದ್ದರೆ ಹೊತ್ತ ಭಾರವನ್ನು ಇಳಿಸಿಕೊಳ್ಳುತ್ತವೆ. ಯಾವಾಗಲೂ ಚಿಂತೆ ಜೀವಕ್ಕೆ ಎಂದು ಮುಂದುವರಿಯುತ್ತದೆ. ಇನ್ನೇನು? ಇನ್ನೇನು? ಎಂಬಲ್ಲಿನ ಧನ್ಯತೆಯ ದರ್ಶನದ ಕಡೆ ನಡೆದು, ಅದನ್ನು ದಾಟಿ ಬಹುತರ ಅಪಾರ ಆನಂದ ಎಂಬಂತಹ ಒಂದು ಸುಳಾದಿಯಲ್ಲಿ ಮುಗಿದಿರಬೇಕು. ಇದು ಅರ್ಥ ಭಾವಗಳ ದ್ಯೋತನೆಯಲ್ಲಿ ಹೇಳಬಹುದಾದ ಸಂಗತಿಯ ಕ್ರಮ. ಈ ಜೀವ ತುಂಬಿದ ಬಾಳು ಬದುಕಿ ಯಾವ ಯಾವ ರೀತಿ ಸಣ್ಣತನದಿಂದ ತಪ್ಪಿಸಿಕೊಂಡು ಬಂದು ತನ್ನ ಬದುಕನ್ನು ಶಕ್ತಿಗೆ ಕಟ್ಟಿಕೊಂಡಿತು; ನಗೆ ಅಳು ಅನುಭವಿಸಿತು; ಲೋಕವನ್ನು ವಿಧಿಯನ್ನು ತೆಗಳಿತು; ತನ್ನನ್ನೇ ನಿಂದಿಸಿಕೊಂಡಿತು; ಜನಕ್ಕೆ ತಮ್ಮ ರೀತಿ ನೀತಿಗಳನ್ನು ಕುರಿತು ಏನೇನನ್ನು ಹೇಗೆ ಹೇಗೆ ಅದು ನುಡಿಯಿತೊ ಭಗವತ್ಕೃಪೆಯನ್ನು ಸಂಪಾದಿಸುವ ಮಾರ್ಗವನ್ನು ಸುಲಭವಾಗಿ ಸರಳವಾಗಿ ಚೆಲುವಾಗಿ ಹೇಗೆ ಹೇಳಿತೊ ಎಂಬುದರ ಒಂದು ಜೀವನ ಚಿತ್ರವಾಗುತ್ತದೆ. ಅದೆಲ್ಲ ಸೇರಿ ದಾಸರ ಕತೆ. ಏನನ್ನಾದರೂ ಹೇಳಬೇಕೆಂದು ಅವರಿಗೆ ಅನ್ನಿಸಿದಾಗ ಈಗ ಯಾವ ಕಷ್ಟವೂ ಇರಲಿಲ್ಲ. ಅಡ್ಡಿ ಆತಂಕಗಳಿರಲಿಲ್ಲ. ನುಡಿವಾಗ, ನಿರ್ದಾಕ್ಷಿಣ್ಯದಿಂದ ನುಡಿದರು. ಕೆಲವೇಳೆ ಅವರು ಬಳಸುವ ಭಾಷೆ ನಯವಾಗಿ ಕೂಡ ಆಗಿರುವುದಿಲ್ಲ. ಕೆಲವೇಳೆ ಕಾಣುತ್ತವೆ. ಕಲಿತವರೆಂದು ಆವುಟ ನಟನೆ ಕಟ್ಟುವವರನ್ನು ಕಂಡು ಅವರಿಗೆ ರೇಗಿರುತ್ತದೆ. ತಮ್ಮ ಸ್ಥಾನವನ್ನು ಅವರು ದುರುಪಯೋಗಪಡಿಸಿಕೊಂಡಿರುತ್ತಾರೆ. ವ್ಯಾಸರಾಯರಂಥ ಹಿರಿಯರ ಹತ್ತಿರ ಸೇರಿಕೊಂಡು ದಾಸಕೂಟದ ಜನರನ್ನು ತಿರಸ್ಕಾರದಿಂದ ಕಂಡಿರುತ್ತಾರೆ. ದಾಸರಿಗೆ ಅವಮರ್ಯಾದೆ ತೋರಿಸಿರುತ್ತಾರೆ. ಅಂಥವರನ್ನೂ, ಅವರ ನಡವಳಿಕೆಯನ್ನೂ ಬಹುಶಃ ನೋಡಿ, "ಇಂಥ ತುಡುಗು ಮುಂಡೇಗಂಡರಿಗಿನ್ನು ವೈಷ್ಣವ ಸಲ್ಲುವುದೇ" ಎಂಬಷ್ಟು ಗಡುಸಾಗಿ ತಕ್ಷಣ ನೇರವಾಗಿ ನುಡಿದಿದ್ದಾರು. ಇನ್ನು ಕೆಲವರೋ ಗಡ್ಡ ಮೀಸೆ ಬೋಳಿಸಿಕೊಳ್ಳುತ್ತಾರೆ. ಹಣೆಯ ಮೇಲೆ, ದೊಡ್ಡ ನಾಮ ತಿದ್ದುತ್ತಾರೆ. ತೋಳಮೇಲೆ, ಮೈಮೇಲೆಲ್ಲಾ ಹುಚ್ಚುಹುಚ್ಚಾಗಿ ಮುದ್ರೆ

ಒತ್ತಿಕೊಳ್ಳುತ್ತಾರೆ. ದೊಡ್ಡ ಮಾತಾಡಿ, ತಮ್ಮನ್ನು ದೊಡ್ಡವರೆಂದು ಕರೆದುಕೊಳ್ಳುತ್ತಾರೆ. ಇಂಥ ರಂಡೆ ಮಕ್ಕಳಿಗೂ ವೈಷ್ಣವಕ್ಕೂ ಹೇಗೆ ಸಂಗತಿಯಾದೀತು! ಹೇಸದೆ, ಅಳುಕದೆ, ಭಾಗವತನಿಂದೆ ಮಾಡುತ್ತಾರೆ. ತಮ್ಮ ಹಿರಿಮೆಯನ್ನು ಕುರಿತು ಮಿತಿ ಇಲ್ಲದಷ್ಟು ಅಭಿಮಾನ ಅವರಿಗೆ. ಕ್ಷುದ್ರರು, ಗೂಬೆ ಮೊಗದವರು ಇಂಥವರನ್ನು, ವೈಷ್ಣವರೆನ್ನುವುದು ಹೇಗೆ– ಇದು ಬಹು ಅಪರೂಪವಾದ ಹಾಡು. ದಾಸರೇನೇ ಮನಸಾರೆ ಈ ಮಾತು ಗಳನ್ನು ಬಳಸಿದ್ದಾರೆ ಎನ್ನಿಸುತ್ತದೆ. ಅವರು ನುಡಿದಿರಲಾರರು ಅಥವಾ ಬರೆದಿರಲಾರರು ಎಂಬ ಯಾವ ಅಪಸಂಕೋಚವೂ ಇದಕ್ಕೆ ಅಡ್ಡಿ ಬರ ಬೇಕಾದ್ದಿಲ್ಲ. ಅವರ ಶೀಲಕ್ಕೆ ಹೊಂದಿಬರುವ ಮಾತು ಅವರ ಗಂಡು ಗುಣ, ಪೌರುಷ ಹಾಗೆ. ಕೆಲವೇಳೆ ಇಂಥವರನ್ನು ಹಂದಿಗಳೆಂದು ಕರೆಯು ತ್ತಾರೆ. ಬೇಕಾದಂಥ ಮಾತುಗಳನ್ನು ಬಳಸಿ; ಮಾತುಗಳ ವಜ್ರಗಾರೆ ಹಚ್ಚಿ. ಆದರಿಂದ ಅಂಥವರು ನಾಶವಾಗುವುದಾದರೆ ನಾಶ ಮಾಡುತ್ತಾರೆ. ಮತ ಪಂಥಕ್ಕೆ ಸಂಬಂಧಿಸಿದಂತೆ ಅವರ ಕೆಲವು ಹಾಡುಗಳನ್ನು ಕಿವಿಯಿಂದ ಕೇಳಿದ ಹೊರತು ಅಂಥವನ್ನು ಅವರು ನುಡಿಯಬಲ್ಲರೆಂದು ತಿಳಿಯುವುದಿಲ್ಲ.

ಒಳಗು ಮನಸ್ಸಿನಲ್ಲಿ ಹುಟ್ಟುವ ಪ್ರತಿಯೊಂದು ಕ್ರಿಯೆಗೂ ದೇವರ ದಯೆ ಪ್ರಚೋದನೆ, ನಿರ್ದೇಶನ ಅದರ ಕಡೆಗೇ ಗುರಿ ಎಂದು ದಾಸರು ನುಡಿಯು ವಾಗ ಇನ್ನೊಂದು ಅಂಶ ಸೇರಿಕೊಳ್ಳುತ್ತದೆ. ನಡೆಯುವುದಕ್ಕೆ ಯಾವ ಗ್ರಹ ನಕ್ಷತ್ರಗಳೂ ಕಾರಣವಲ್ಲ ಎಂಬುದು ಅದು. "ಸಕಲ ಗ್ರಹಬಲ ನೀನೆ, ಸರಸಿಜಾಕ್ಷ। ನಿಖಿಲ ರಕ್ಷಕ ನೀನೆ ವಿಶ್ವವ್ಯಾಪಕನೆ" ಎಂಬ ಹಾಡಿನಲ್ಲಿ ಅತ್ಯುನ್ನತಿಯ ಮಟ್ಟವನ್ನು ಮುಟ್ಟುತ್ತಾರೆ. ರವಿ ಚಂದ್ರ ಬುಧ ನೀನೆ ರಾಹು ಕೇತುವು ನೀನೆ। ಭವರೋಗಹರ ನೀನು ರಕ್ಷಕನು ನೀನು ॥ ಅವನಿಗೆ ಹೊರತಾದ್ದು ಬೇರೊಂದಿಲ್ಲ. ಸರ್ವವ್ಯಾಪಕನೆಂದ ಮೇಲೆ ಹೊರ, ಒಳ, ಅಡಿ ಮುಡಿ ಬೇರೇನಿದ್ದೀತು. ಪಕ್ಷ ಮಾಸವು ನೀನೆ ಪರ್ವಕಾಲವು ನೀನೆ। ನಕ್ಷತ್ರ ಯೋಗ ತಿಥಿ ಕರಣ ನೀನೆ। ಅಕ್ಷಯ ವೆಂದು ದ್ರೌಪದಿಯ ಮಾನವ ಕಾಯ್ದೆ। ಪಕ್ಷಿವಾಹನ, ದೀನ ರಕ್ಷಕನು ನೀನೆ॥ ಋತು ವತ್ಸರವು ನೀನೆ ಪೃಥ್ವಿಗಾದಿಯು ನೀನೆ। ಕ್ರತು ಹೋಮ ಯಜ್ಞ ಸದ್ಗತಿಯು ನೀನೆ। ಜಿತವಾದ ಎನ್ನೊಡೆಯ ಪುರಂದರ ವಿಠಲನೆ।

ಶ್ರುತಿಗೆ ಸಿಲುಕದ ಅಪ್ರತಿಮ ಮಹಿಮನು ನೀನೆ. ಆತನ ಆತ್ಮ ತುಂಬು ಪ್ರಶಂಸೆ ಘೋಷಣಾಗೀತೆ, ಸಕಲ ಸಂಗ್ರಹದಂತಿರುವೆ. ಆ ನಿಲವಿನಲ್ಲಿ ಯಾವ ಸಣ್ಣತನಕ್ಕಾಗಲಿ, ಸಣ್ಣ ಗುರಿಗಳನ್ನು ಹುಡುಕಿಕೊಂಡು ಹೋಗುವ ಹವ್ಯಾಸದಲ್ಲಿಯಾಗಲಿ ತಲೆಹಾಕುವುದಿಲ್ಲ. ಇಂಥ ಒಂದು ಮನಃಸ್ಥಿತಿ ಯಲ್ಲಿಯೇ–ತನಗೇನು ಬರುವುದೊ, ಆಗುವುದೊ ಅದರ ಕಡೆ ತನ್ನ ಲಕ್ಷ್ಯ ವಿಲ್ಲ ಎಂದದ್ದು. ಯಾವ ಅಪಮಾನಗಳು ಬರಲಿ, ಯಾವ ದುಃಸ್ಥಿತಿಯ ಪರಾಕಾಷ್ಠೆಗೆ ತಾನು ಈಡಾದರೂ ಅವನು ಪುರಂದರ ವಿಠಲನಿಗೆ ತನ್ನ ಸೇವೆ ಅರ್ಪಿತವಾದರಾಯಿತು ಅದು ನಡೆದರಾಯಿತು * ಎನ್ನುವು ದೊಂದೇ ಲಕ್ಷ್ಯ.

ಒಟ್ಟಿನಲ್ಲಿ ಒಂದು ಸರಳ, ಶ್ರದ್ಧಾಪೂರ್ಣವಾದ, ಏಕಾಗ್ರ ಬದುಕಿನ ಚಿತ್ರವನ್ನು ಈ ಗೀತಗಳಲ್ಲಿ ನಾವು ಕಾಣುವುದು. ತನ್ನ ಜೀವನದ ಸಫಲತೆಯ ಕಡೆ ಯತ್ನ ಒಂದು ಕಡೆಯಲ್ಲಿದ್ದರೆ ಇತರರಿಗೆ ಬೆಳಕು ಮಾರ್ಗ ದರ್ಶನ ನೆರವು, ದೊರೆಯುವ ಒಂದು ಮೂಲ ಸ್ಥಾನವಾಗುತ್ತದೆ. ಇಂಥ ಜನ ಇತರರು ತಮ್ಮನ್ನು ಕುರಿತು ಏನಾಡಿಕೊಳ್ಳುತ್ತಾರೆ ಎಂಬುದನ್ನು ಲಕ್ಷಿಸುವುದಿಲ್ಲ. ಅಥವಾ ಯಾವುದನ್ನು ಕುರಿತೂ ಅವರಿಗೆ ಹೆದರಿಕೆಯಿಲ್ಲ. ಇತರರ ಅನುಗ್ರಹಕ್ಕೆ ಅವರು ಕಾಯುವವರಲ್ಲ. ತಮ್ಮನ್ನು ಹಿಡಿದಿರುವ ಯಾವುದೊ ಮಹಾ ಇಷ್ಟಾರ್ಥ ಒಂದು ಮಾತ್ರ ಅವರನ್ನು ನಡಸುತ್ತದೆ. ಅವರು ಲೋಕವನ್ನು ಬಿಡುವುದಿಲ್ಲ. ಸಾಧಾರಣ ದಿನಜೀವನದಲ್ಲಿನ ಹೊಣೆ ಗಾರಿಕೆಗಳು ಒಪ್ಪದವೆಂದು ನುಡಿಯುವುದಿಲ್ಲ. ಉನ್ನತ, ಗಮ್ಯದ ಕಡೆ ಕಣ್ಣು, ಹೃದಯ ನಿರಂತರವಾಗಿ ನಟ್ಟಿರುತ್ತವೆ, ಉಳಿದವು ಏನೊ ಹೇಗೊ ನಡೆಯಲಿ. ಅವರು ಅನ್ನುವುದೆಲ್ಲ, ಹಾಡುವುದೆಲ್ಲ ಗುರಿಯನ್ನು ಕುರಿತ ಮಾತೇ ಅದರ ಅಭಿವ್ಯಂಜನೆ. ಅದರ ಕಡೆಗೆ ನಡಸಿಕೊಂಡು ಹೋಗುವ ದಾರಿ; ಮಾಡುವ ಪಯಣ.

---

* ಇಂಥ ಒಂದು ಮನಃಸ್ಥಿತಿಯಲ್ಲಿಯೆ ವಿವೇಕದಲ್ಲಿಯೇ ಮೃತಿಯಿಂದ ಯಾರನ್ನೂ ಕಳೆದುಕೊಂಡ ಒಬ್ಬರನ್ನು ಕುರಿತು ಅವರು ಹೇಳಿದ್ದು: "ಕೊಟ್ಟ ದೇವರು ಕೊಂಡುಹೋದರೆ, ಕುಟ್ಟಿ–ಕುಟ್ಟಿ ಹೊಡೆದುಕೊಳುವೆ–ಏಕಳುವೆ, ಚಿಂತೆ ಬಿಡು" ಎಂದುದು.

ವಿಶೇಷವಾದ ಒಂದು ಸಣ್ಣ ಸಂಗತಿ, ದಾಸರನ್ನು ಹದಮಾಡಿತು. ಅವರಿಗೆ ನೆರವಾಯಿತು. ಅದು ದಾಸರನ್ನು ಉಳಿಸಿತು ಎನ್ನಬೇಕು. ತನ್ನನ್ನು ತೆಗಳಿ ನಿಂದಿಸಿದವರು ಅವರಿಗೆ ಅಧಿಕವಾದ ಉಪಕಾರ ಮಾಡಿದ ರೆನ್ನುತ್ತಾರೆ. ಅವರಿಗೆ ವಿಮುಖರಾಗಿ ದೇವರಿಗೇ ತನ್ನನ್ನು ಅತಿಶಯವಾಗಿ ಮೀಸಲುಮಾಡಿಕೊಳ್ಳುವಂತೆ ಅಂಥವರು ಮಾಡಿದರು. ಈ ದೃಷ್ಟಿ ಅತಿಶಯವಾದ್ದು. ತನ್ನ ಸ್ನೇಹಿತರು ಮಾಡಿದ್ದಷ್ಟು ಉಪಕಾರವಾಯಿತು; ವಿಠಲನಲ್ಲಿ ತಮ್ಮ ಭಕ್ತಿ ಏಕಾಗ್ರವಾಗಿ ನಿಲ್ಲುವಂತೆ ಮಾಡಿದರು. 'ಹಂಗಿಸಿ ಹಂಗಿಸಿ ಎನಗೆ ಹರಿನಾಮ ನಿಲ್ಲಿಸಿದರು' ಆಡಿ ಆಡಿ ಅಣಕಿಸಿದರು. ಅಪಮಾನಕ್ಕೀಡುಮಾಡಿದರು. ಮನಸ್ಸಿನ ಸಂತೋಷ ಕಳೆದುಕೊಳ್ಳು ವಂತೆ ಮಾಡಿದರು. ರಾಗದ್ವೇಷಗಳಿಂದ ಬಿಡುಗಡೆಮಾಡಿದರು. ಬೆನ್ನ ಹಿಂದೆ ನಿಂತು ಹಂಗಿಸಿ, ನಿಂದಿಸಿದವರು ತನ್ನನ್ನು ಕಾಪಾಡಿದಂತೆ ಬಂಧು ಗಳಿಂದ ತನ್ನ ಬಾಯನ್ನು ಮುಚ್ಚಿಸುವಂತೆ ಮಾತನಾಡಿದರು. ನಿಜವಾಗಿ ನನ್ನನ್ನು ಬದುಕಿಸಿದರು. ಕೀಟಲೆ ಮಾಡಿ ಕಿರುಕುಳ ಕೊಟ್ಟವರು ಉದ್ಧಾರ ಮಾಡಿದರು. ಕೈವಲ್ಯಮಾರ್ಗದಲ್ಲಿ ತಾನು ಮುಂದೆ ನಡೆಯುವಂತೆ ಮಾಡಿ ದರು. ನನಗೆ ಒಂದು ಕಾಸು ದೊರೆಯದಂತೆ ಮಾಡಿ ದುಃಖಕ್ಕೆ ಭಂಗಕ್ಕೆ ಒಳಪಡಿಸಿದರು. ನಿಜ. ಇಂಥದೆಲ್ಲ ತನಗೆ ಕೆಡಕು ಮಾಡಲಿಲ್ಲ; ಹೆಚ್ಚು ಪ್ರಾಮಾಣಿಕವಾಗಿ ತನ್ನನ್ನು ಹರಿಗೆ ಮುಡಿಪಾಗುವಂತೆ, ಅವನಿಗೆ ಸೇರಿದ ಬೆಲೆಯುಳ್ಳ ಒಂದು ಪದಾರ್ಥವಾಗುವಂತೆ ಮಾಡಿದರು. ತಂದೆ ಪುರಂದರ ವಿಠಲ ನಿನ್ನ ಕೃಪೆಯನ್ನು ನನ್ನ ಮೇಲೆ, ಹರಿಸು. ನಿನ್ನ ಸೇವಕರ ಸೇವಕ ನೆನ್ನಿಸು—ಎಂಬುದು ಅವರ ಹೃದಯದ ಕೂಗಾಯಿತು. ಆಚಾರವಂತ ರಾಗಿಯೂ ವಿದ್ವಾಂಸರ ಮಂಡಳಿಯಲ್ಲಿದ್ದುಕೊಂಡು ತನಗೆ ಕಾಟ ಕೊಡು ತ್ತಿದ್ದ ಜನವನ್ನು ಕುರಿತು ಬಹುಶಃ ಇಂಥಲ್ಲಿ ನುಡಿಯುತ್ತಿದ್ದರೆಂದು ಕಾಣು ತ್ತದೆ. ಅವರು ಕೈಕೊಂಡಿದ್ದ ದಾಸಜೀವನದ ಆಕ್ಷೇಪಕರು, ಆದರೆ ಗುರು ವ್ಯಾಸರಾಯರು ಅವರಿಗೆ ತಮ್ಮ ಪ್ರೀತಿಯನ್ನು ಎರೆದರು. "ದಾಸರೆಂದರೆ ಪುರಂದರದಾಸರಯ್ಯ" ಎಂದು ಅವರು ಕರೆದದ್ದು ಆತನಿಗೆ ಗೌರವಸ್ಥಾನ ವನ್ನು ಮಾನವನ್ನು ತಂದುಕೊಟ್ಟಿತು. ಇತರರು ಹರಡಿದ ಚಾಡಿಯ ಕೆಟ್ಟ ಪರಿಣಾಮಗಳಿಂದ ಅವರಿಗೆ ಹೀನಮಾನ ಕಾಣಿಸುತ್ತಿದ್ದವರ ಪೀಡೆ

ತಟ್ಟದಂತೆ ಮಾಡಿ ಅವರನ್ನು ಕಾಪಾಡಿತು.

1539ರಲ್ಲಿ ವ್ಯಾಸರಾಯರು ತೀರಿಕೊಂಡರು. ಆ ಬಳಿಕ ವಿಜಯನಗರ ದಲ್ಲಿ ಜೀವನ ಕಷ್ಟತರವಾಗಿ ರಾಜಧಾನಿಯ ನೀತಿಜೀವನ ಪೂರ್ತಿಯಾಗಿ ಕೆಟ್ಟುಹೋಯಿತು. ಇಂಥ ಸಂದರ್ಭದಲ್ಲಿ ತಾನೇ ಪುರಂದರದಾಸರಂಥ ಒಬ್ಬ ವ್ಯಕ್ತಿ ಇದ್ದುಕೊಂಡು ಧಾರಾಳವಾಗಿ ಧರ್ಮವನ್ನೂ ಕರ್ಮವನ್ನೂ ಕುರಿತು ನುಡಿಯುವ ಅಗತ್ಯ! ಒಳ್ಳೆಯತನ, ಋಜುತೆ, ತ್ರಿಕರಣಶುದ್ಧಿ ಇವುಗಳ ನಿಜವಾದ ಸಂಗತಿಯನ್ನು ಅಂಥವರು ಮಾತ್ರ ನುಡಿದು ತಿಳಿಸ ಬಲ್ಲರು. ಕಾಲ ನಿಜವಾಗಿ ವಿಷಮವಾಗಿ ಪುರಂದರ ವ್ಯಥೆ ಅಧಿಕವಾಗಿತ್ತು.

ದಾಸರ ಸುಳಾದಿಗಳಲ್ಲಿಯೂ ಉಗಾಭೋಗಾದಿಗಳಲ್ಲಿಯೂ ಇರುವ ಕೆಲವು ಭಾಗಗಳನ್ನು ವೀರಶೈವ ವಚನಗಳಿಗೆ ಹೋಲಿಸುವ ಯತ್ನಗಳು ನಡೆದಿವೆ. ದಾಸರಿಗೂ ಕೆಲವು ಮಹಾರಾಷ್ಟ್ರದ ಸಂತರಿಗೂ ಹೋಲಿಕೆ ಯನ್ನು ಸ್ಥಾಪಿಸುವ ಯತ್ನಗಳೂ ನಡೆದಿವೆ.* ಒಂದು ಸಂಗತಿಯನ್ನು ಯಾರೂ ಮರೆಯಬಾರದು. ಆಲೋಚನೆ, ಭಾವ, ಹಿನ್ನೆಲೆ ಇವರೆಲ್ಲರಿಗೂ ಒಂದೇ ನೆಲಸಿನದು. ಈ ನಾಡಿನ ಧಾರ್ಮಿಕ ಸಂಪ್ರದಾಯ ಸಂತತವಾಗಿ ಒಂದು ದಾರಿಯಲ್ಲಿ ನಡೆದುಕೊಂಡು ಬಂದಿದೆ. ಅದರಲ್ಲಿ ಭಕ್ತಿ ಅದಕ್ಕೆ ಪಕ್ಷಪಾತ ಉಂಟುಮಾಡಿದೆ. ಸಾಹಿತ್ಯ ಮತ್ತು ನೀತಿ ಇವು ಭರತ ಖಂಡ ದಲ್ಲಿ ಹುಟ್ಟಿ ಹರಡಿದುದು ಈ ಮಾತೃಸ್ಥಾನದಿಂದಲೇ. ಯಾವುದೇ ಭಾಷೆಯ ಸಂತರು ತಮ್ಮ ಗೇಯಗಳನ್ನು ರಚಿಸಿರಲಿ, ಅದೆಲ್ಲ ಒಂದೇ ಭಾವ ಮೂಲದಿಂದ ತೆಗೆದುಕೊಂಡು ಬಲಿತದ್ದು. ಸಂಪ್ರದಾಯ ಹೀಗೆ ಅವಿಚ್ಛಿನ್ನ ವಾಗಿ ಈವರೆಗೂ ನಡೆದುಕೊಂಡು ಬಂದುದು ಈ ರಾಷ್ಟ್ರದ ಒಂದು ಸಂಪತ್ತು. ಇಲ್ಲಿನ ಜನವರ್ಗವನ್ನು ಒಂದು ಹಿಡಿತದಲ್ಲಿ ಕಟ್ಟಿ ನಿಲ್ಲಿಸಿರು ವುದು ಅದು. ಪುರಂದರದಾಸರಲ್ಲಿ ಕೆಲವು ಮಾಧ್ವ ಪಕ್ಷಪಾತಗಳು,

---

* ಪುರಂದರದಾಸರದೆನ್ನುವ ಕೆಲವು ಉಗಾಭೋಗಗಳಿಗೂ, ಬಸವೇಶ್ವರ ವಚನ ಗಳಲ್ಲಿ ಕೆಲವಕ್ಕೂ ತುಂಬಾ ಹತ್ತಿರವಾದ ಸಾಮ್ಯವಿದೆ. ಹಾಗೆಯೇ ಅವಕ್ಕೂ ಅದ್ಯರು, ಆರಾಧ್ಯರು ರಚಿಸಿರುವರೆಂಬ ಉಗಾಭೋಗಗಳಿಗೂ ಅದೇ ಬಗೆಯ ಸಾಮ್ಯವಿದೆ.

ಸಮಯಾಚಾರದ ಕೆಲವು ಕಾರ್ಪಣ್ಯಗಳು ಇದ್ದರೂ ವ್ಯಕ್ತಿಜೀವನದಲ್ಲಿಯೂ ಸಾಮಾಜಿಕ ಜೀವನದಲ್ಲಿಯೂ ಶುಚಿಯನ್ನು ಸ್ಥಾಪಿಸುವ ಸಂಗತಿಗಳಾವುವು ಎಂಬುದನ್ನು ಕುರಿತು ನುಡಿದ ಈ ನುಡಿಗಳು ಈ ಸತ್ಯ ಮಾರ್ಗವನ್ನೇ ಹಿಡಿಯುತ್ತವೆ. ಅಶುಚಿಯವರನ್ನು ವಿರೋಧಿಸಿ ನುಡಿದರು. ಮನುಷ್ಯನ ನಿಲವನ್ನು ಯಾವುದು ಎತ್ತಿ ಉನ್ನತಗೊಳಿಸುವುದೊ, ಅಂಥದನ್ನೇ ಹೊಗಳಿದರು, ಎತ್ತಿನಿಲ್ಲಿಸಿದರು. ಆತ್ಮೋನ್ನತಿಯನ್ನು ಸಾಧಿಸುವ ಸಾಹಸವನ್ನು ಹೊಗಳಿದರು. ಸರ್ವಪ್ರಮಾಣದ ಭಾಷೆಯನ್ನು ಬಳಸಿ ತಮಗೆ ತಿಳಿದಂತೆ ಲೋಕಸೇವೆ ಮಾಡಿದರು. ಪುರಂದರದಾಸರ ಪದಗಳು ಸಾಹಿತ್ಯವಾಗಿ ಬೆಲೆಯುಳ್ಳವು. ವಚನಗಳನ್ನು ಹಾಡುತ್ತಿದ್ದರೆನ್ನುತ್ತಾರೆ. ಹಾಡಿದ ಧಾಟಿ ಯಾವುದೊ ? ಯಾವ ರಾಗಗಳಲ್ಲಿ ಯಾವ ತಾಳಗಳಲ್ಲಿ ಎಂಬುದು ಲಿಖಿತವಾಗಿಲ್ಲ. ಆಗ ರಾಗಗಳನ್ನು ಹೇಗೆ ಹಾಡುತ್ತಿದ್ದರೊ ನಾವರಿವ ಮಾರ್ಗವಿಲ್ಲ. ದಾಸರು ಸಂಗೀತವನ್ನು ಬಳಸಿದರು. ಹಾಡಿ ತಮ್ಮ ದೇವರ ಎದುರಿಗೆ ಕುಣಿದರು. ದಿನಾ ಹಾಡುತ್ತ, ಕುಣಿಯುತ್ತ ರಾಜಬೀದಿಗಳಲ್ಲಿ ಸಂಚಾರ ಮಾಡಿದರು. ಹೀಗೆ ಮಾಡಿದಲ್ಲೆಲ್ಲ, ತಾವು ಹೋದಲ್ಲೆಲ್ಲ–ಜನಕ್ಕೆ ದೇವರನ್ನು ಕುರಿತು ದೇವರ ಕೃಪೆಯನ್ನು ಗಳಿಸುವ ಮಾರ್ಗವನ್ನು ಕುರಿತು ನುಡಿಯುತ್ತ ಹೋದರು. ದಾಸಕೂಟವೆಂದು ಯಾವುದನ್ನು ಕರೆಯುವರೊ ಜೀವನದ ಆ ಮಾರ್ಗವನ್ನು ಕಟ್ಟಿನಿಲ್ಲಿಸಿದರು. ಹರಿದಾಸ ಪಂಥವು ಆ ಸಮಯದ ತಂತ್ರ ಮತ್ತು ಕಾರ್ಯಕಲಾಪ ನಾಡಿನಲ್ಲಿ ಬಹು ಕಾಲ–ತ್ಯಾಗರಾಜರ ಕಾಲದವರೆಗೆ ಕೂಡ ನಡೆದುಬಂದಿತು. ಭಜನೆಗಳಲ್ಲಿಯೂ ಅಥವಾ ಬೀದಿಗಳಲ್ಲಿಯೂ ಉಂಛವೃತ್ತಿಗಾಗಿ ಧಾನ್ಯ ಸಂಗ್ರಹಿಸಲು ಸಂಚರಿಸುತ್ತಿರುವಾಗ ಆ ಕ್ಷಣ ಕಟ್ಟಿ ಹಾಡಿದವು ಎಷ್ಟೋ ಹಾಡುಗಳು. ದಾನ ಕೊಟ್ಟವರು ಸ್ವಂತ ಇಷ್ಟದಿಂದ ಕೊಟ್ಟರು. ತ್ಯಾಗರಾಜರು ಉಂಛವೃತ್ತಿಯ ಸಮಯದಲ್ಲಿ ಹೀಗೆ ಧಾನ್ಯಸಂಗ್ರಹ ಮಾಡಿದ್ದು ಸಂಗೀತದಲ್ಲಿ ಹೆಚ್ಚು ಮುಂದುವರಿದ ಕಾಲ. ತ್ಯಾಗರಾಜರ ಕೃತಿಗಳು ದಾಸರ ಪದಗಳಿಗಿಂತ ಸಂಗೀತ ಪ್ರಕ್ರಿಯೆಯಲ್ಲಿ ಹೆಚ್ಚು ಪ್ರಾಯೋಗಿಕತೆ, ರಾಗ ವಿಸ್ತರಣ ಪಡೆದದ್ದು. ರಾಗ ತಾಳ ಭಾವಗಳ ಗಮನ ರಚನೆ, ಮಾರ್ಗಗಳ ಖಚಿತ ಸಂಚಾರ ಉಳ್ಳವು.

ಪುರಂದರದಾಸರ ರಚನೆಗಳಲ್ಲಿ ಹಲವು ಪ್ರಕಾರಗಳಲ್ಲಿ ಮುಖ್ಯವಾದವು ಪದ, ಸುಳಾದಿ ಉಗಾಭೋಗ. ಈ ಪ್ರತಿಯೊಂದರ ರಚನೆಯೂ ರಾಗ ತಾಳಾಂಶಗಳಲ್ಲಿ ಗೊತ್ತಾದವು. ನರಹರಿ ತೀರ್ಥರ ಕಾಲದಿಂದ ಹಿಡಿದು ಪದರಚನೆಯ ಒಂದು ಪ್ರಕಾರ ನಮ್ಮ ಕಾಲದವರೆಗೂ ಬಂದಿದೆ. ಅವರ ದೆಂಬ, ಅತಿ ವಿರಳ ಎಂದರೆ ಎರಡೋ ಮೂರೋ ಮಾತ್ರ ನಮಗೆ ಈಗ ಲಭ್ಯವಾಗಿದೆ. ಅವರ ತರುವಾಯ ಬಹುಕಾಲದ ಮೇಲೆ ಬಂದವರು ಶ್ರೀಪಾದರಾಯರು. ಅವರು ಗುರುಗಳ ಗುರು. ಅವರು ಸಿಂಹಾಸನದ ಮೇಲೆ ಕುಳಿತಿದ್ದವರು. ಪಲ್ಲಕ್ಕಿಗಳ ಮೇಲೆ ಸಂಚಾರ ಮಾಡಿದ್ದರು. ರಾಜಗುರುಗಳಂತೆ, ತಲೆಗೆ ಕಿರೀಟ ಧರಿಸಿದ್ದರು. ಬೇರೆಯವರು ಏನೆನ್ನಲಿ, ಹೇಗೆ ಯೋಚಿಸಲಿ, ಜನರ ಭಾಷೆಯಾದ ಕನ್ನಡದಲ್ಲಿ ಹಾಡುಗಳನ್ನು ಬರೆದು ಹಾಡಿದರು. ಆ ಕಾಲದ ಜನ ಆಡುತ್ತಿದ್ದ ಕನ್ನಡ ನುಡಿಗೆ ಸಮೀಪ ವಾಗಿತ್ತು, ಆ ಭಾಷೆ. ವೃತ್ತನಾಮ ಎಂಬ ಒಂದು ಪ್ರಕಾರ ಇತ್ತು. ಬಳಕೆಯಿಂದ ಬಾಡಿಹೋಗಿದ್ದ ಅದನ್ನು ಶ್ರೀಪಾದರಾಯರು ಪುನಃ ಚೇತನ ಗೊಳಿಸಿ ರೂಢಿಗೆ ತಂದರು. ಅದರ ಪ್ರಕಾರ ಗೀತಗೋವಿಂದವನ್ನು ಹೋಲುವ ಅಥವಾ ಮಧ್ವಾಚಾರ್ಯರು ಸಂಸ್ಕೃತದಲ್ಲಿ ಬರೆದ ದ್ವಾದಶ ಸ್ತೋತ್ರವನ್ನು ಹೋಲುವ ಧಾಟಿ ಅದು. ಒಂದು ಪಲ್ಲವಿ, ಒಂದು ಚರಣ ಅದರ ತರುವಾಯ ಪದ್ಯಬಂಧದಲ್ಲಿ ಬರೆದ ಒಂದು ಒಟ್ಟು ಪದ್ಯ,—ಹೀಗೆ ಒಂದಾದಮೇಲೊಂದು ಬರುವುದು ಇಲ್ಲಿನ ರಚನಾಕ್ರಮ. ಶ್ರೀಪಾದ ರಾಯರು ತಮ್ಮ ಕನ್ನಡ ಹಾಡುಗಳಲ್ಲಿ ಈ ಪ್ರಕಾರವನ್ನು, ಕೆಲವನ್ನು ಮಾಡಿದರು. ಬಹುಶಃ ಸುಳಾದಿ ರೂಪವನ್ನೂ ಪುನರುಜ್ಜೀವನಗೊಳಿಸಿದ ರೇನೊ. 133 ಸುಳಾದಿಗಳನ್ನು ಅವರು ರಚಿಸಿದ್ದಾರೆನ್ನುತ್ತಾರೆ. ರಾತ್ರಿ ಭಜನೆ ಸಮಯದಲ್ಲಿ ಅದನ್ನು ಹಾಡುತ್ತಿದ್ದರಂತೆ. ಮುಖಾರಿ ರಾಗದಲ್ಲಿ ಅಟ್ಟತಾಳದಲ್ಲಿನ ಅವರ ಸುಳಾದಿ ಭ್ರಮರಗೀತವೆಂಬುದು ಪ್ರಖ್ಯಾತ ವಾಗಿದೆ. ಏ ಕಿತವ, ಭೃಂಗ ನಿನ್ನನಟ್ಟಿದನೆ। ಶ್ರೀರಂಗ ತಾ ಮಧುರೇಲಿ ನಿಂದು ‖ ರಚನಕಾರರಾಗಿ ಅವರಿಗಿದ್ದ ನಿರ್ಮಾಣಶಕ್ತಿಗೆ ಈ ಕೃತಿ ಪ್ರಮಾಣ ವೆನ್ನುತ್ತಾರೆ. ಅವರಂಕಿತ ರಂಗವಿಠಲ ಎಂದು. ವ್ಯಾಸರಾಯರಿಗೆ ಬಹುಶಃ ಇದಕ್ಕೂ ಅವರಿಂದಲೇ ಓಲು ಬಂದಿತೆನ್ನಿಸುತ್ತದೆ. ಸಂಸ್ಕೃತದಲ್ಲಿ ಬರೆದ

'ವಾಗ್ವಜ್ರ' ಎಂಬ ಒಂದು ಮಹಾಕೃತಿ ಶ್ರೀಪಾದರಾಯರ ಹಿರಿಮೆಯನ್ನು ಸ್ಥಾಪಿಸಿದರೆ ಚಂದ್ರಿಕಾ, ತರ್ಕತಾಂಡವ, ನ್ಯಾಯಾಮೃತ ಮುಂತಾದವು ವ್ಯಾಸರಾಯರ ಘನತೆಯನ್ನು ಸ್ಥಾಪಿಸುತ್ತವೆ. ವ್ಯಾಸರಾಯರು 250 ಪದ್ಯಗಳನ್ನು, ಕೆಲವು ಉಗಾಭೋಗಗಳನ್ನೂ, 30 ಸುಳಾದಿಗಳನ್ನೂ ಬರೆದರೆಂಬ ಪ್ರತೀತಿಯಿದೆ. ಈ ಮಹಾಗುರು, ದೇವರ ಆರಾಧನೆಯ ಕಾಲದಲ್ಲಿ ಹಾಡಿಕೊಂಡು ಕುಣಿಯುವುದು ವಾಡಿಕೆಯಾಗಿತ್ತೆನ್ನುತ್ತಾರೆ. ಹರಿದಾಸ ಸಂಪ್ರದಾಯದಲ್ಲಿ ಶ್ರೀಪಾದರಾಯರ ತರುವಾಯ ಹಿರಿಮೆಯಲ್ಲಿ ವ್ಯಾಸರಾಯರದೇ ಎರಡನೆಯ ಸ್ಥಾನ. ಅವರ ಅಂಕಿತ 'ಶ್ರೀಕೃಷ್ಣ' ಎಂಬುದು.

ಪುರಂದರದಾಸರು ಬೇರೆಬೇರೆ ಬಗೆಯ 4,75,000 ಕೃತಿಗಳನ್ನು ರಚಿಸಿದರೆಂಬ ಹೇಳಿಕೆಯಿದೆ. ಅವರೇ ಬರೆದರೆಂದು ನಿರ್ದೇಶಿಸುವ ಒಂದು ಪದದಲ್ಲಿ ಅದರ ವರ್ಗೀಕರಣವಿದೆ. ನಮಗೆ ಈಗ ದೊರೆತಿರುವುದು ಪೂರ್ತಿ 1000 ಕೂಡ ಇಲ್ಲ. ಇವುಗಳಲ್ಲಿಯೂ ಎಷ್ಟೋ ಸಂಖ್ಯೆಯವು ಅವರದಲ್ಲವೆಂಬ ಸಂಶಯಕ್ಕೆ ಈಡಾಗಿವೆ. ಇದರ ತಥ್ಯ ಹೇಗೇ ಇರಲಿ—ಅವರದೇ ಎಂದು ಖಚಿತವಾಗಿ ಇರುವವು ಸಂಖ್ಯೆಯಲ್ಲಿಯೂ ಗುಣದಲ್ಲಿಯೂ ದೊಡ್ಡ ಭಾವಾರ್ಥಸಂಪನ್ನವಾದ, ಹರಿದಾಸ ಪಂಥದ ಪಿತೃಸ್ಥಾನದಲ್ಲಿರುವ, ಇದರ ವ್ಯಕ್ತಿತ್ವಕ್ಕೂ ಮೂರ್ತಿತ್ವಕ್ಕೂ ವಿಶೇಷ ಲಕ್ಷಣಗಳನ್ನು ಕೊಡಬಲ್ಲವು. ಪದಗಳ ರಚನೆ ಹೇಗಿರುತ್ತಿತ್ತೆಂದು ಈಗಾಗಲೇ ವರ್ಣಿಸಿಯಾಗಿದೆ. ಚರಣದ ಎರಡನೆಯ ಅರ್ಥಕ್ಕೂ ಅನುಪಲ್ಲವಿಗೂ ಸಾದೃಶ್ಯವಿರುತ್ತದೆ. ಪಲ್ಲವಿ ಅನುಪಲ್ಲವಿಗಳ ಬಳಿಕ ಸಾಮಾನ್ಯವಾಗಿ ಮೂರೋ ಐದೋ ಚರಣಗಳಿರುವುದುಂಟು. ಹೆಚ್ಚು ಸಂಖ್ಯೆಯವು ಕೆಲವು. ಈ ಪದಗಳನ್ನು ಹಾಡುವಾಗ ರಾಗವಾಗಲಿ, ತಾಳವಾಗಲಿ ವ್ಯತ್ಯಾಸವಾಗುವುದಿಲ್ಲ. ಇದು ಮಾದರಿ ಅಥವಾ ಮಟ್ಟನಂತೆ ಆಯಿತು. 18ನೇ ಶತಮಾನದಲ್ಲಿ ತ್ಯಾಗರಾಜರು ಇದನ್ನು ಸೂಕ್ಷ್ಮ ಅಥವಾ ನಯಗೊಳಿಸಿ ಸಂಗೀತದ ದೃಷ್ಟಿಯಿಂದ ಹೆಚ್ಚು ಖಚಿತವಾದ ಗೇಯಪ್ರಕಾರವಾಗಿ ಅದಕ್ಕೆ ಅಭಿವ್ಯಕ್ತಿ ಕೊಟ್ಟರು. ತಮಗೆ ಹಿಂದೆ ಈ ಮಾದರಿಯನ್ನು ರಚಿಸಿಕೊಟ್ಟ ಮಹಾಗುರುವಿಗೆ ತನ್ನ ಕೃತಜ್ಞತೆಯನ್ನೂ ಋಣವನ್ನೂ ತ್ಯಾಗರಾಜರು ವ್ಯಕ್ತಪಡಿಸುತ್ತಾರೆ. ದೀಕ್ಷಿತರು ಈ ಮಾದರಿಯ ಗೇಯದ ಶಕ್ಯತೆಯನ್ನು ಇನ್ನಷ್ಟು ಮುಂದು

ವರಿಸಿದರು. ರಾಗ ತಾಳಗಳ ಆಧಾರ ಪ್ರಸ್ತಾರವನ್ನು ಅವರು ಇನ್ನಷ್ಟು ವಿಸ್ತರಿಸಿದರು. ಅದು ಸಂಗೀತದ ಒಂದು ವಾಸ್ತು ರಚನೆಯಂತೆ ಆಯಿತು. ಕೇವಲ ಸಾಹಿತ್ಯವಾಗಿ ನುಡಿಯುವುದಕ್ಕಿಂತ ಸಾರವತ್ತಾಗಿ ಅದರ ಸಂಗೀತ ಶಿಲ್ಪ, ನಾದರಚನೆ ಆಯಿತು ಅದು. ಕೆಲವು ಕೃತಿಗಳಲ್ಲಿ ನಡುವಣ ಚರಣದ ಲಂಬ (ಹೆಚ್ಚಾಗುತ್ತದೆ) ದೊಡ್ಡದಾಗುತ್ತದೆ. ನಾಲ್ಕು ಪಾದಗಳಾಗಿದ್ದ ಚರಣ ಆರರದ್ದಾಗಬಹುದು. ಅದನ್ನು ಹೆಚ್ಚು ವಿಸ್ತಾರವಾಗಿಯೊ, ಹೆಚ್ಚು ವೇಗದಲ್ಲಿಯೊ ರೂಪಿಸುವಂತಿರುತ್ತದೆ. ಮಧ್ಯಮಕಾಲ ಸಾಹಿತ್ಯವೆಂಬ ಒಂದು ಹೆಸರುಂಟು. ಪುರಂದರದಾಸರೂ ಅವರ ಕಾಲದ ಇನ್ನಾರಾದರೂ ಅವರ ಪಲ್ಲವಿಗೆ, ಅನುಪಲ್ಲವಿಗಳಿಗೆ ಅಥವಾ ಯಾವುದಾದರೂ ಸಂಗತಿ ಗಳನ್ನು ಹಾಕುತಿದ್ದರೆ, ಅವುಗಳಿಗೂ ಸ್ವರ ಪ್ರಸ್ತಾರ ಹಾಕಿ ಆ ರಚನೆಯನ್ನು ಅಧಿಕಾರಿಕವಾಗಿ ಉಳಿಸಿಕೊಟ್ಟಿದ್ದರೆ ಆಗುತ್ತಿತ್ತು. ಅಥವಾ, ಒಂದು ಚರಣದ ಯಾವುದಾದರೊಂದು ಭಾಗ ಹೇಗೆ ವೊದಲಾಗಿ ಹೇಗೆ ಅಂತ್ಯ ಗೊಳ್ಳುತಿತ್ತು. ಸಂಗೀತಕ್ಕಾಗಿ ಅಲ್ಲಿನ ಚರಣದ ಒಂದು ಸಾಲನ್ನೂ (ಖಂಡವನ್ನು) ತಾಳದಲ್ಲಿ ಎಡುಪಾಗಿ ಆಯ್ದುಕೊಂಡು ಅವರ ಕಾಲದ ಸಂಗೀತ ರಚನೆಯನ್ನು ನಿದರ್ಶಿಸಿದ್ದರಾಗಿತ್ತು. ಹಾಡಿನಲ್ಲಿನ ಯಾವುದಾದರೂ ಒಂದು ಖಂಡವೊ, ಒಂದು ಗೊತ್ತಾದ ಅಂಶವೊ ನೆರವಲಿಗೆ ಸಹಾಯ ಮಾಡುತಿತ್ತೊ ಇಲ್ಲವೊ ಎಂಬ ಪ್ರಶ್ನೆಯನ್ನು ನಾವು ಎತ್ತಬೇಕಾಗಿಲ್ಲ. ಏಕೆಂದರೆ, ಹಾಡುಗಾರರು ತಮಗೆ ಅನುಕೂಲವಾದ ಸೂಕ್ತವಾದ ಖಂಡ ವನ್ನು ಆಯ್ದುಕೊಂಡು ನೆರವಲು ಮಾಡಬಹುದು. ಗೊತ್ತಾದ ಒಂದು ತಾಳದಲ್ಲಿ, ಒಂದು ರಾಗದಲ್ಲಿ ಸಂಗೀತವಿದೆ. ಅಖಂಡವಾಗಿ ಅದು ಅಲ್ಲಿ ಕೃತಿಯನ್ನು ತುಂಬುತ್ತದೆ. ಈ ಸಂಗತಿ ಯಾರಿಗೂ ಅರ್ಥವಾಗಬಲ್ಲದು. ಆದರೆ ಪುರಂದರದಾಸರ ಉದ್ದೇಶ ಜನಕ್ಕೊ ತನಗೊ ಏನಾದರೂ ಹೇಳ ಬೇಕೆಂಬುದು. ಬದುಕು ಚೊಕ್ಕವಾಗಬೇಕು, ದೇವರ ಕಡೆ ತಿರುಗಬೇಕು, ಭಕ್ತಿನಿಷ್ಠವಾಗಬೇಕು ಎಂಬುದು. ಹೆಚ್ಚೆಂದರೆ ಸಂಗೀತ ಅದಕ್ಕೆ ಸಾಧನ. ಅವರು ಕಟ್ಟಿದ ಆ ಸಾಹಿತ್ಯದ ಪ್ರತಿಪಾದನೆಗೆ ಕೋಟಿನ ಒಂದು ಒಳಬಟ್ಟೆ ಹೊಲಿಗೆ ಇದ್ದಹಾಗೆ–ನೆರವಾಗಿ ಬರುತ್ತದೆ.

ಪುರಂದರದಾಸರ ಪದಗಳನ್ನು ಹೋಲಿಸಿದರೆ ತ್ಯಾಗರಾಜರ ಗೇಯ

ರಚನೆಗೆ ಹೆಚ್ಚು ಆಳವಾದ್ದು, ರಾಗ ಭಾವ ಉಳ್ಳದ್ದು, ನಿವೇದನೆ ವ್ಯಕ್ತಿ ಪ್ರಧಾನವಾದ್ದು. ಸಾಹಿತ್ಯಕ್ಕೂ ಸಂಗೀತಕ್ಕೂ ತಾಳಕ್ಕೂ (ಹೆಚ್ಚು) ಸಮತೋಲ (50-50) ಅಲ್ಲಿ ಕಾಣುತ್ತದೆ. ಕೃತಿಯ ಪ್ರಕಾರವೂ ಸ್ಪಷ್ಟ ವಾಗಿ ವಿಕಸನಗೊಂಡದ್ದು. ಪ್ರತಿಯೊಂದನ್ನೂ ಬಹು ಜಾಗರೂಕರಾಗಿ ರಾಗ ತಾಳಗಳ ಚೌಕಟ್ಟಿನಲ್ಲಿ ನಿರ್ಮಿಸುವುದು ಅವರ ಪದ್ಧತಿ. ಅದನ್ನು ಹಾಡಬೇಕಾದುದು ಆ ವಿವರಗಳನ್ನು ಅನುಸರಿಸಿಯೇ. ದಾಸರ ಕಾಲದಲ್ಲಿ ಬಳಕೆ ಇದ್ದುದಕ್ಕಿಂತ ಹೆಚ್ಚು ರಾಗತಾಳಗಳು ತ್ಯಾಗರಾಜರ ಕೃತಿಗಳಲ್ಲಿ ಕಾಣುತ್ತದೆ.* ಕೆಲವು ರಾಗಗಳು ಅಪರೂಪವಾದವು. ಅವರು ಹಾಡಿದ ಹಾಗೆ ಯಾರಾದರೊಬ್ಬ ಶಿಷ್ಯರೊ ಭಕ್ತರೊ ಅದನ್ನು ಬರೆದುಕೊಳ್ಳು ತ್ತಿದ್ದರು. ಮಾರನೆಯ ಬೆಳಗ್ಗೆ ಹೊತ್ತಿಗೆ ಕಲಿತು ಪಾಠ ಒಪ್ಪಿಸುತ್ತಿದ್ದರು. ಎರಡು ಮೂರು ಪಾಠಗಳಲ್ಲಿ, ಅವರ ಕೃತಿಗಳ ಗೇಯ ತಂತ್ರ ನಮಗೆ ಉಳಿದುಕೊಂಡು ಬಂದಿದೆ. ಅವರ ಶಿಷ್ಯರಲ್ಲಿ ಒಬ್ಬೊಬ್ಬರು ಅದನ್ನು ತನಿ ಯಾಗಿಯೊ, ಒಟ್ಟಿಗೊ ಗುರುಗಳು ಹೇಳಿದಾಗ ಅಥವಾ ಸಂದರ್ಭ ಒದಗಿ ದಾಗ ಹಾಡುತ್ತಿದ್ದರು. ಭಕ್ತಿಭಾವ ಅಲ್ಲಿ ಉದ್ದಕ್ಕೂ ಗಾಢವಾಗಿ ಕಂಡುಬರು ತ್ತದೆ. ಶುಚಿಯಾಗಿ, ಸ್ಫುಟವಾಗಿ, ವಿಶದವಾಗಿ ಜೀವದ ಆಳದಿಂದ ಬಂದಂತೆ ಅಭಿವ್ಯಂಜನೆಗೊಳ್ಳುತ್ತವೆ. ಆ ಆಗಿನ ಮನಃಸ್ಥಿತಿಗೆ ಸಾರಪೋಷಕವಾದ ಸುಮಾರು ಎಲ್ಲ ಅಂಶಗಳೂ ಆ ಆಕೃತಿಗೆ ಸೇರಿದಂತಿರುತ್ತದೆ. ಹೊರಗಿನ ಅಂಶ ಸೇರದಂತೆ ಅಥವಾ ಅಧಿಕವಾಗಿ ಮಾತುಗಳು ಅಲ್ಲಿನ ಭಾವವನ್ನು ಒಡಕು, ನೀರು ಮಾಡದಂತೆ ಸಾಹಿತ್ಯರಚನೆ ಆಗುತ್ತದೆ. ಅದರ ಕಾವ್ಯತೆ ಯನ್ನು ಪೋಷಿಸಲು ಕೂಡ ಹೆಚ್ಚಿನ ಸಾಹಿತ್ಯ ಸೇರದು. ಆದರೆ ರಾಗ ಸಂಪನ್ನತೆ ಮತ್ತು ರಾಮಭಕ್ತಿಪ್ರಧಾನ. ಒಂದು ಕೃತಿ ಸುಮಾರು ಹೇಗೆ ಹುಟ್ಟಿ ಬೆಳೆದಿರಬಲ್ಲುದು ; ಸಂಗೀತ ಭಾವವಾಗಿ ಯಾವುದನ್ನು ಎಲ್ಲಿ ಒತ್ತಿ ತಿಳಿಸಬೇಕೆಂದು ಬಯಸಿತು ಎಂಬುದನ್ನು ರಚನೆ ಕಾಣಿಸುತ್ತದೆ. ಯಾವ ನಾದ ಅಥವಾ ಸ್ವರಸ್ಥಾಯಿ ನುಡಿತ ಆ ರಾಗದ ಜೀವ ವಾಗಿ ಅವರು ಹೊಮ್ಮಿಸಬೇಕೆಂಬ ನಾದವಾಗಿ ಬಯಸುತ್ತಿದ್ದಾರೆ ಎಂಬುದು

* ತ್ಯಾಗರಾಜರ ಸುಮಾರು 800 ಕೃತಿಗಳಿಗೆ ಬಳಸಿರುವ ರಾಗಗಳ ಸಂಖ್ಯೆ ಸುಮಾರು 202 ಎನ್ನುತ್ತಾರೆ.

ಕೂಡ ಕಾಣುತ್ತದೆ. ಆ ರಾಗದ ಜೀವಸ್ವರ ನುಡಿಯುತ್ತಿರುವುದನ್ನು ಕಾಣುವಾಗ ಕೀರ್ತನೆಯ ಪ್ರತಿ ಭಾಗದಲ್ಲಿಯೂ ಗಾಯಕನ ಜೀವ ಪ್ರತ್ಯಕ್ಷ ವಾಗಿ ಕಾಣಿಸುತ್ತದೆ. ಸಾಹಿತ್ಯ ಸಂಗೀತ ಸಮಸಮವಾಗಿ ಹೊಯ ಕಯ್ಯಾಗಿ ನುಡಿಯುತ್ತದೆ. ಅನೇಕ ವಿನ್ಯಾಸಗಳುಳ್ಳ ಪ್ರಕಾರಗಳಲ್ಲಿ ಬಹು ಬಗೆಯ ಉದ್ದ ವೇಗದ ನಡೆಗಳುಳ್ಳವಾಗಿ ಅವರು ಕೃತಿಗಳನ್ನು ರಚಿಸಿದರು. ಆದರೆ ಅವರ ಮನಸ್ಸಿಗೆ ವಿಶೇಷ ಹಿತವಾಗಿದ್ದಂತೆ ಕಾಣುವುದು ಮಧ್ಯಮ ಕಾಲದ ಕೃತಿಗಳು. ಪುರಂದರದಾಸರ ಪದಗಳಲ್ಲಿ ಸಮಯ ಸಂದರ್ಭಗಳಲ್ಲಿ ಅಗತ್ಯವಾದಂತೆ ಮಾತು, ಉಪದೇಶ, ಸಲಹೆ ಕಂಡುಬರುತ್ತದೆ. ಏಕಾಂತ ವಾಗಿ ತಮ್ಮನ್ನು, ತಮ್ಮ ಸಂಸ್ಕಾರವನ್ನು ಕುರಿತ ಹಲವಾರು ಕೃತಿಗಳಿದ್ದರೂ ಲೋಕದವರಿಗೆ ಹಿತವನ್ನು ನುಡಿಯುವ ಮನಸ್ಸೂ ಅಗತ್ಯವೂ ದಾಸರಿಗೆ ಇದ್ದಿತು. ತ್ಯಾಗರಾಜರ ಕೃತಿಗಳಲ್ಲಿ ಇರುವುದು ಭಕ್ತಿ ಸಂಗೀತ, ಆತ್ಮ ನಿವೇದನಗಳ ಭಾಗ. ಸಾವಯವವಾಗಿ ಎಂಬಂತೆ ಅವರ ಧ್ವನಿವಾಣಿಯೂ ಗಾಢವಾಗಿ ಧರ್ಮಪ್ರವೃತ್ತವಾದುವೇ ಆದರೂ ಸ್ಪಷ್ಟವಾಗಿ ಪ್ರಧಾನವಾಗಿ ತ್ಯಾಗರಾಜರ ಉದ್ದೇಶ ಉಪದೇಶವಲ್ಲ, ಜನಜೀವನದ ಲಕ್ಷಣ ರೀತಿಗಳನ್ನೂ ಪ್ರವೃತ್ತಿಗಳನ್ನೂ ಕುರಿತು ವಿವೇಕವನ್ನು ನುಡಿಯುವುದಲ್ಲ. ವ್ಯಾಖ್ಯಾನ ಮಾಡುವುದಲ್ಲ. ಅವರ ಭಕ್ತಿ ಹೆಚ್ಚು ಸ್ವಂತ ಆತ್ಮೋನ್ನತಿಗೆ ಸಂಬಂಧ ಪಟ್ಟದು.

ಇವರ ಕಾಲಕ್ಕೆ ಸ್ವಲ್ಪ ಮುಂಚೆ ತಿರುಪತಿಯಲ್ಲಿ ತಾಳ್ಲಪಾಕ ಅಣ್ಣಮಾ ಚಾರ್ಯರೆಂಬ ಹಿರಿಯ ತೆಲುಗು ಭಕ್ತ ಕವಿ ಇದ್ದರು. ಇವರು ಪುರಂದರ ದಾಸರಿಗಿಂತ ವಯಸ್ಸಿನಲ್ಲಿ ದೊಡ್ಡವರು. ಅವರ ರಚನೆಗಳು ಆಧಾರಗಳು ಇಂಥವೇ. ತಿರುಪತಿಯಲ್ಲಿ ಈಗ ಶ್ರೀ ವೆಂಕಟೇಶ್ವರನನ್ನು ಕುರಿತ ಅವರ ಸ್ತೋತ್ರ ಗೀತೆಗಳು ಅಚ್ಚಾಗುತ್ತಿವೆ. ಅವುಗಳ ಒಟ್ಟು ಸಂಖ್ಯೆ ಸುಮಾರು 32,000 ಎನ್ನುವರಾದರೂ, ನಮಗೆ ದೊರಕಿರುವುದು ಸುಮಾರು 14,000 ಕೀರ್ತನೆಗಳು. ಅವುಗಳಲ್ಲಿ ಸುಮಾರು 5000ವನ್ನು ಈಗ ಪ್ರಕಟಿಸಿದ್ದಾರೆ. ಪುರಂದರದಾಸರು ಅವರನ್ನು ಕಂಡಿದ್ದರೆಂಬ ಐತಿಹ್ಯವಿದೆ. ವಯಸ್ಸಿನಲ್ಲಿ ಆಗಲೇ ವೃದ್ಧರಾಗಿದ್ದ ಅಣ್ಣಮಾಚಾರ್ಯರನ್ನು ಕಂಡಿದ್ದು ತಿರುಪತಿ ಯಲ್ಲಿಯೋ, ಪಂಢರಪುರದಲ್ಲಿಯೋ ಹಂಪೆಯಲ್ಲಿಯೋ ಖಚಿತವಾಗಿಲ್ಲ.

ಇನ್ನೂ ಯುವಕನಾಗಿದ್ದ ಶ್ರೀನಿವಾಸನಾಯಕ (ಅಥವಾ ಪುರಂದರದಾಸ) ನಲ್ಲಿ ಅಡಗಿದ್ದ ಹಿರಿಮೆಯನ್ನು ಕಂಡು ಅವರಿಗೆ ಮೆಚ್ಚಿಕೆಯುಂಟಾದಹಾಗೆ ಐತಿಹ್ಯವಿದೆ. ಅಣ್ಣಮಾಚಾರ್ಯರಿಗೆ ಶ್ರೀಪಾದರಾಯರು ಪರಿಚಿತರಾಗಿದ್ದಿರಬೇಕು, ಎಂದಾಗ, ವಿಜಯನಗರದ ಮುಖ್ಯಪಟ್ಟಣದಲ್ಲಿ ಪ್ರಚಲಿತವಾಗಿದ್ದ, ಕೃತಿಗಳ ಮಾದರಿಗಳು ಅವರಿಗೆ ತಿಳಿದಿದ್ದವೆನ್ನಬಹುದು. ಸರಳತೆ, ಸಹಜತೆ, ಉಕ್ತಿಯ ನೇರ ಯಾರಿಗೂ ಸ್ಪಷ್ಟವಾಗಿ ಗೋಚರವಾಗಿ ಕಾಣಿಸುವ ಅವರ ಪ್ರಾಮಾಣಿಕತೆ, ವಿಶದತೆ ಮತ್ತು ಸಾಮಾಜಿಕ ಸಂಬಂಧಗಳಲ್ಲಿ ಕಾಣುವ ಮಾನವ ಭಕ್ತಿಭಾವ ಈ ಕೃತಿಗಳಲ್ಲಿ ಪ್ರತಿಬಿಂಬಿತವಾಗಿವೆ. ರಾಗ, ತಾಳ ಸಾಹಿತ್ಯ ಭಾವಗಳು, ಸೇರಿಕೊಂಡು ಉದ್ದಿಷ್ಟ ಪರಿಣಾಮಗಳನ್ನು ಉಂಟುಮಾಡುತ್ತವೆ. ಅಷ್ಟು ವಿಶದವಾಗಿ ತಿಳಿಯಾಗಿ ನಿರ್ದಿಷ್ಟವಾಗಿ ಇವುಗಳಲ್ಲಿ, ಅರ್ಥದ್ಯೋತನೆ ಆಗುತ್ತದೆ. ಪುರಂದರದಾಸರೂ ಅವರ ಅನುಯಾಯಿಗಳೂ ಅವನ್ನು ಹಾಡಿದಾಗ ಅವು ಗೊತ್ತಾದ ರೂಪವಾಗಿ ಕೇಳುವವರ ಮನಸ್ಸಿನಮೇಲೆ ಅಚ್ಚು ಒತ್ತಿ ನಿಲ್ಲುವ ಹಾಗೆ ನಿಂತು ಸ್ಥಾಪಿತವಾದುವು. ಹೀಗೆ ಕೇಳುವವರ ಮನಸ್ಸಿನಲ್ಲಿ ಕಡಮೆ ಎಂದರೆ ಎರಡು ಬಗೆಯ ಪ್ರಕಾರಗಳ ತಿಳಿವಳಿಕೆ ಬೆರೆಯಲು ಅವಕಾಶವಾಯಿತು. ಸಾಹಿತ್ಯದ್ದು ಒಂದು. ಸಂಗೀತದ್ದು ಒಂದು. ಸಾಹಿತ್ಯದ ಪ್ರಕಾರವಾಗಿ ಎಷ್ಟು ಸಂಖ್ಯೆಯ ಹೊಸ ಚರಣಗಳನ್ನಾದರೂ ಸೇರಿಸಬಹುದಾದ ಧಾರಾಳ, ಸೌಲಭ್ಯ ಸಿಕ್ಕಿತು. ಸಂಗೀತಾಂಶದಲ್ಲಿ ಸುಲಭವಾಗಿ ಗೊತ್ತಿಗೆ ಸಿಕ್ಕುವ, ಎತ್ತಿ ಬಳಸಬಹುದಾದ ರಾಗತಾಳಗಳ ಒಂದು ಪ್ರಕಾರ ಕಟ್ಟನಿಲ್ಲುವಂತಾಯಿತು. ಹಾಡಿನ ಧಾಟಿ ಕನ್ನಡ ನಾಡಿನಲ್ಲಿ ಪುರಂದರದಾಸರು ಎಲ್ಲೆಲ್ಲಿ ಸಂಚಾರ ಮಾಡಿದರೊ ಆ ದಕ್ಷಿಣಪ್ರಾಂತದಲ್ಲೆಲ್ಲ ನೆನಪಿನಲ್ಲಿ, ಬಳಕೆಯಲ್ಲಿ ಉಳಿದು ನಿಂತಿತು. ಉತ್ತರ ಕಾಲದಲ್ಲಿ ಬೆಳೆದ ಸಂಗೀತದ ಅಭಿವೃದ್ಧಿಗೆ ಈ ಮಾದರಿ ದೊರಕಿಸಿದ ಪ್ರಕಟನೆ ನೆಲಗಟ್ಟಾಯಿತು. "ಶ್ರೀಕೃಷ್ಣರಾಯನ ತೋರಿಸೆ, ಮಾತನಾಡಿಸೆ" ಎಂದು ಅಟ್ಟತಾಳದಲ್ಲಿ ಆರಂಭವಾಗುವ ಒಂದು ವೃತ್ತನಾಮ ಆ ಧಾಟಿಯನ್ನು, ಸಂಚಾರವನ್ನು ಸ್ಪಷ್ಟವಾಗಿ ನಿದರ್ಶಿಸುತ್ತದೆ. ಅದೊಂದು ಸಂಗೀತದ ಸೀಕರಣೆ. ದಾಸರ ರೀತಿಯಲ್ಲಿ ಹಾಡಿದರೆ ಅದರ ಆಟವೂ ವಿಲಾಸವೂ ನಡೆಯೂ ಬಹು ಚೆಲುವಾಗಿರುತ್ತವೆ.

ಪುರಂದರದಾಸರಿಗೆ ಅಸಂಖ್ಯಾತ ಸುಳಾದಿ ರಚನೆ ಮಾಡಿದವರೆಂಬ ಕೀರ್ತಿ ಇದೆ. ಸಂಗೀತಶಾಸ್ತ್ರದ ಕೃತಿಗಳನ್ನು ಮುಂದಿನ ಕಾಲದಲ್ಲಿ ವಿದ್ವಾಂಸರು ಬರೆದಾಗ, ಅವುಗಳಲ್ಲಿ ಕೆಲವನ್ನು ಮಾದರಿಗಳೆಂದು ಹೇಳುತ್ತಾರೆ. ತುಳಜಾ ಮಹಾರಾಜರು 'ಸಂಗೀತ ಸಾರಾಮೃತದಲ್ಲಿಯೂ' ಸುಬ್ಬರಾಮ ದೀಕ್ಷಿತರು 'ಸಂಗೀತ ಸಂಪ್ರದಾಯ ಪ್ರದರ್ಶಿನಿ' ಎಂಬ ಗ್ರಂಥದಲ್ಲಿಯೂ ಈ ಸಂಗತಿಯನ್ನು ತಿಳಿಸುತ್ತಾರೆ. 'ಕರ್ನಾಟಕ ದೇವ ಗಾಂಧಾರಿ' ಎಂದು ಆಗ ಕರೆಯುತ್ತಿದ್ದ ಒಂದು ರಾಗದಲ್ಲಿ ದಾಸರು ಬರೆದ 'ಹಸುಗಳು ಕರೆವ ಧ್ವನಿ ಕರುಗಳ ಪಿಡಿದು ಬಿಡುವ ಧ್ವನಿ' ಎಂಬುದು ಎಲ್ಲರಿಗೂ ತಿಳಿದದ್ದು ಎಂಬುದನ್ನು 'ಅತಿ ಪ್ರಸಿದ್ಧತ್ವಾತ್' ಎಂಬ ಅವರ ಮಾತು ಪ್ರಕಟಿಸುತ್ತದೆ. ಸಾಮಾನ್ಯವಾಗಿ ಈಗ ಅಚ್ಚಾದ ಅನೇಕ ಪ್ರತಿಗಳಲ್ಲಿ ಸುಳಾದಿಗೆ ಸಂಬಂಧಿಸಿದಂತೆ ಯಾವ ರಾಗದ ಹೆಸರನ್ನೂ ಕೊಟ್ಟಿರುವುದಿಲ್ಲ. ಆದರೆ ಶ್ರೀಪಾದರಾಯರ, ವ್ಯಾಸರಾಯರ, ಅಣ್ಣಮಾಚಾರ್ಯರ ಅಲ್ಲಲ್ಲಿ ಸಿಕ್ಕುವ ಸುಳಾದಿಗಳಲ್ಲಿ, ಈ ರಾಗ ನಿರ್ದೇಶನವಿರುತ್ತದೆ.* ಸುಳಾದಿ ಪ್ರಧಾನವಾಗಿ ತಾಳಮಾಲಿಕೆ ಅಥವಾ ತಾಳಚಕ್ರ ಅದರಲ್ಲಿ ಪ್ರಮಾಣಭೂತ ಅಥವಾ ಪ್ರಾತಿನಿಧಿಕ ಎಂಬುದರಲ್ಲಿಯೂ ಏಳು ತಾಳಗಳ ಏಳು ಚರಣಗಳಿರುತ್ತವೆ. ಕಡೆಯಲ್ಲಿ ದ್ವಿಪದಿಯಂಥ ಒಂದು ರಚನೆ ಸುಳಾದಿಯ ಸಾರ ವಿಷಯವನ್ನು, ತತ್ವವನ್ನು ಸಂಗ್ರಹಿಸುವಂತಿರುತ್ತದೆ. ಅದನ್ನು ಜೊತೆ, ಜತಿ, ಯತಿ, ಪಲ್ಲವ ಎಂದು ಕರೆಯುತ್ತಾರೆ. 'ಮೂರ್ಛನ' ಎಂಬುದೂ ಉಂಟು. ಸುಮಾರು ಅದು ಪಲ್ಲವಿಯ ಕೆಲಸವನ್ನೇ ಮಾಡುತ್ತದೆ. ಬಹುಶಃ ಆ ಎರಡು ಸಾಲುಗಳನ್ನು ಒಟ್ಟಿಗೆ ಎಲ್ಲರೂ ಸೇರಿ ಹಾಡುತ್ತಿರಲೂಬಹುದು. ಪ್ರತಿ ಚರಣದ ಕೊನೆಯಲ್ಲಿ ದಾಸರ ಅಂಕಿತ ಇರುತ್ತದೆ.

---

* ಸಂಪ್ರದಾಯ ಪ್ರಕಾರವಾಗಿ ಪ್ರತಿಯೊಂದನ್ನು ಒಂದೇ ರಾಗದಲ್ಲಿ ಹಾಡುತ್ತಾರೆ. ಸೂಡ ಪ್ರಬಂಧಾಃ ಕಥಿತಃ ಏಕರಾಗ ನಿವೇಶಿತಃ || ಅಥವಾ, ಅತ ಸರ್ವ ಹತ್ವೇಕ ಖಂಡಕಃ |

ದೀಕ್ಷಿತರು ಕೂಡ ಪ್ರಖ್ಯಾತವಾದ ಅವರ ನವಗ್ರಹ ಕೃತಿಮಾಲಿಕೆಯ ಹಾಡುಗಳನ್ನು ಗೊತ್ತಾದ ಒಂದು ಪರಿವಿಡಿಯಲ್ಲಿ ರಚಿಸಿದರು.

ಸುಳಾದಿ ಎಂಬ ಪದದ ಖಚಿತವಾದ ಅರ್ಥ ಗೊತ್ತಾಗಿಲ್ಲ. 'ಸು' ಅಥವಾ 'ಸೂ' ಸುಳ–ಸುಡ–ಸೂಡ ಯಾವುದೂ ಆಗಿರಬಹುದು. ಒಂದು ಕಲ್ಪನೆಯಲ್ಲಿ ಅದು ಸು(ತು)ಳಿದ ದಾರಿ ಅಥವಾ ಸುಳಿವ ಹಾದಿ ಅಥವಾ ಸುಲಭದಾರಿ ಎಂದೂ ಅರ್ಥ ಹೇಳುತ್ತಾರೆ. ಈ ಸುಲಭ ಹಾಡುವುದಕ್ಕೊ, ಮೋಕ್ಷಕ್ಕೊ ಎಂಬುದು ಊಹೆಗೆ ಬಿಟ್ಟದ್ದು. 'ಸೂಳ್' ಎಂಬುದಾದರೆ ನಿಯತವಾದ ಒಂದು ಕ್ರಮದಲ್ಲಿ ಎಂದಾಗುತ್ತದೆ. ಈ ಸರದಿ ಏಳು. ಉದಾಹರಣೆಗೆ 'ಧ್ರುವ'. ತರುವಾಯ 'ಮಠ್ಯ'.* ಆಮೇಲೆ ತ್ರಿವುಡೆ, ಅಟ್ಟ, ಆದಿ, ಝಂಪೆ, ಏಕತಾಳ–ಒಂದಾದಮೇಲೊಂದು ಕ್ರಮವಾಗಿ ಬರುತ್ತದೆ. ಕೆಲವೇಳೆ ರೂಪಕವೆಂಬ ಒಂದನ್ನು ಸೇರಿಸುತ್ತಾರೆ. ಒಂದೋ ಎರಡೋ ತಾಳಗಳು ನಡುವೆ ಪುನರುಕ್ತವಾಗಬಹುದು. ಒಟ್ಟು ಚರಣಗಳ ಸಂಖ್ಯೆಯೂ, ತಾಳಗಳ ಸಂಖ್ಯೆಯೂ 5ರಿಂದ 10ರವರೆಗೆ ಇರುವುದುಂಟು. ಪದ್ಯದಲ್ಲಿ ಎಷ್ಟು ಸಾಲುಗಳು ಇರಬೇಕೆಂಬುದು ನಿಯತವಾದ, ಹಾಗೆಯೇ ಸಾಲು ಚಿಕ್ಕದೆ ದೊಡ್ಡದೆ ಎಂಬುದೂ ಈ ಮೂಲಕ ತಿಳಿಯುತ್ತದೆ. ಆದರೆ ಅದು ಸೂಚಿಸಿದ ತಾಳಕ್ಕೆ ತಕ್ಕುದು. ಬಳಸಿದ ತಾಳದಲ್ಲಿನ ವಿಶ್ರಾಂತಿಗಳನ್ನೂ ಪೆಟ್ಟುಗಳನ್ನೂ (ಬಡಿತಗಳನ್ನೂ ತಾಳ <ತಾಡ್=ಬಡಿ) ಸರಿ ತಪ್ಪದೆ ಪ್ರತಿಪಾದಿಸದು,–ಅದರ ಸ್ವರೂಪ ಆಕೃತಿ ನಿರ್ದೇಶಿಸುವಂತೆ ಕೂಡ ಅವು ಮಾರ್ಗ, ದೇಸಿ ಎರಡು ಶೈಲಿಗಳಲ್ಲಿಯೂ ಇವೆ. ಪುರಂದರ ದಾಸರ ಕಾಲಕ್ಕೆ ಮುಂಚೆ ತಾಳ, ವಿಷಯದಲ್ಲಿ ಹೆಚ್ಚು ವಿವಾದಗಳು–ಏಕೆ? ಅರಾಜಕ ಗೊಂದಲವೇ ಇದ್ದವಂತೆ–ಸಂಖ್ಯೆಯನ್ನು ಕುರಿತು, ತಾಳಗಳ ಬಳಕೆಯನ್ನು ಕುರಿತು. ಇದನ್ನು ಒಂದು ಕ್ರಮಬದ್ಧತೆಗೆ ತಂದು ನಿರ್ದಿಷ್ಟವಾದ ಪ್ರಮಾಣಭೂತವಾದ ತಾಳಮಾನವನ್ನಾಗಿ ವ್ಯವಸ್ಥೆಗೊಳಿಸಿದ ಕೀರ್ತಿ ಪ್ರಧಾನವಾಗಿ ನಮ್ಮ ದಾಸರಿಗೆ ಸಲ್ಲತಕ್ಕದ್ದು ಎನ್ನುತ್ತಾರೆ. ಅವರನ್ನು

---

* 'ಮಠ್ಯ' ಎಂಬುದು ವಾಸ್ತವವಾಗಿ ಹತ್ತು ಮಾತ್ರೆಗಳ ಪ್ರಮಾಣದ್ದು. 'ಝಂಪೆ'ಗಿದ್ದಂತೆ ಅಥವಾ 'ಖಂಡಝಂಪೆ'ಗೆ ಇದ್ದಂತೆ ಈ ಸುಳಾದಿ ಮಟ್ಟತಾಳ, ಪುರಂದರದಾಸರಿಗೆ ಪ್ರಿಯವಾದದ್ದು. ಈ ಮಾಲೆಯನ್ನು ಮಟ್ಟ ಆರಂಭ ಮಾಡಿದ್ದರಿಂದ 'ಆದಿ' ಎಂದು ಇದನ್ನು ಕರೆದಿರಬಹುದು.

ಸಂಗೀತದ ಪ್ರಯೋಗ ಸಂಬಂಧದಲ್ಲಿ ಪೂರ್ವಾಚಾರ್ಯ ಆದಿಗುರು, ಪರಮಾಧಿಕಾರದಿಂದ ನುಡಿದವರು, ಪಿತಾಮಹ ಎಂದು ಹಿಂದಿನವರು ಒಪ್ಪಿದ್ದಾರೆ. 64,000 ಸಂಖ್ಯೆಯ ಸುಳಾದಿಗಳ ಕರ್ತೃ ಎನ್ನುತ್ತಾರೆ. ನಮಗೆ ಸಿಕ್ಕಿರುವುದು ಕೆಲವು ಮಾತ್ರ ಸಾಹಿತ್ಯಗುಣದಲ್ಲಿಯೂ ನಿಲವಿನಲ್ಲಿಯೂ ಅವುಗಳಲ್ಲಿ ಕೆಲವು ಉತ್ತಮ ಪದಗಳಿಗೆ ಸರಿಸಮಾನವಾಗಿರುತ್ತವೆ. ಪದಗಳು ಹೆಚ್ಚು ಶುದ್ಧವಾಗಿ ಸಾಹಿತ್ಯಿಕವಾದ ಭಾವಗೀತಗಳು. ರಚನೆಯಲ್ಲಿಯ ರಾಗಭಾವಗಳನ್ನು ವಿಸ್ತರಿಸಿ ತೋರಿಸುವ ಪ್ರಕಾರಗಳು. 'ಸೂಡ' ಎಂಬುದು ಸಂಗೀತದ ಪರಿಭಾಷೆಯಲ್ಲಿ ಹಾಡಿಗಿರುವ ಒಂದು ಹಳೆಯ ಹೆಸರು. (ಶುದ್ಧ + ಸಾಳಗ < ಛಾಯಾಲಗ + ಸೂಡ ಎಂಬುದನ್ನು ನೆನೆಯಬಹುದು.) ಮೊದಲು ಬಗೆಬಗೆಯ ತಾಳಗಳನ್ನು, ರಾಗಗಳನ್ನು ಅಥವಾ ಎರಡನ್ನೂ ಬಳಸಿ ಸುಳಾದಿಗಳನ್ನೂ ಒಮ್ಮೆಗೆ ರಾಗಮಾಲಿಕೆ, ತಾಳಮಾಲಿಕೆಗಳಾಗಿ ಮಾಡುವುದು ಕನ್ನಡದ ವಾಗ್ಗೇಯಕಾರರ ಮೆಚ್ಚಿಕೆಯ ರೀತಿಯಾಗಿತ್ತು. ರಾಗದ ಹೆಸರುಗಳನ್ನು ಸ್ಪಷ್ಟವಾಗಿ ತಿಳಿಸದಿದ್ದರೂ, ಕೆಲವು ಕೃತಿಗಳಲ್ಲಿ ಹಲವಾರು ರಾಗಗಳ ಹೆಸರುಗಳು—ಬತ್ತೀಸ 32 ರಾಗಗಳು ಎಂಬ ಸಂಖ್ಯೆ ಸಿಕ್ಕುತ್ತದೆ. ವಚನಗಳಲ್ಲಿಯೂ "ಬತ್ತೀಸ ರಾಗಿನ" ಎಂಬ ಮಾತು ಬರುತ್ತದೆ. ಅವು ಯಾವುವೊ ವಚನಕಾರರು ಅವನ್ನು ಹೇಗೆ ಹಾಡುತ್ತಿದ್ದರೊ ತಿಳಿಯದು. ಎಲ್ಲರಿಗೂ ಬಳಕೆಯಾದ ರಾಗದ ಧಾಟಿಯಲ್ಲಿಯೇ ಹಾಡುತ್ತಿದ್ದಿರಬೇಕು.*

ಸಂಗೀತದಲ್ಲಿ ರಾಗ ತಾಳಗಳ ಒಂದು ವಿಶಿಷ್ಟರೂಪ ನೃತ್ಯ ಪ್ರಕಾರಗಳಲ್ಲಿದೆ. ಹೆಚ್ಚು ಕಡಿಮೆ ಇದೇ ಕಾಲಕ್ಕೆ ಕನ್ನಡಿಗನಾದ ಪುಂಡರೀಕ ವಿಠಲನೆಂಬಾತನ ಸಂಗೀತಕೃತಿ ಉತ್ತರಭಾರತದಲ್ಲಿ ಪ್ರಭಾವವನ್ನು ಪಡೆದುಕೊಂಡಿತ್ತು. ಶಾರ್ಙ್ಗದೇವನ ಕಾಲಕ್ಕೂ ಆ ಸಮಯಕ್ಕೂ ನಡುವೆ ಇದ್ದ, ಎಷ್ಟೋ ಸಂಗತಿಗಳನ್ನು ಕುರಿತ ತಿಳಿವಳಿಕೆಗಳನ್ನು ವಿಶದಪಡಿಸಿತು. ಶಾರ್ಙ್ಗದೇವನಿದ್ದದ್ದು ದೇವಗಿರಿಯಲ್ಲಿ. ಆಗ ದೇವಗಿರಿ ಕರ್ನಾಟಕದ ಒಂದು ಭಾಗ. ಅವನ ಕಾಲಕ್ಕೂ ಪುರಂದರದಾಸರ ಕಾಲಕ್ಕೂ ನಡುವೆ

* ಇಂದೋಳ ಮಾಳವಶ್ರೀ ರಾಗಗಳ ಹೆಸರು ಪಂಪನಲ್ಲಿ ಜನ್ನನಲ್ಲಿ ಬರುತ್ತವೆ.

ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೆ ಸ್ಫೂರ್ತಿಕೊಟ್ಟ ವಿದ್ಯಾರಣ್ಯರು, ಸಂಗೀತಸಾರವನ್ನೂ ಬರೆದಿದ್ದಾರೆನ್ನುತ್ತಾರೆ. ಇನ್ನೂ ಈಚಿನ ಕಾಲದಲ್ಲಿ ಶಾಸ್ತ್ರಕಾರರು ಅನೇಕ ಸಂಗತಿಗಳನ್ನು ಆಧಾರವಾಕ್ಯಗಳಾಗಿ ಸ್ವೀಕರಿಸುತ್ತಾರೆ. ವಿದ್ಯಾರಣ್ಯರು ಮೇಳಕರ್ತ ರಾಗಗಳು 15 ಎಂದಿದ್ದಾರಂತೆ. ವೆಂಕಟಮಖಿಯ ಕಾಲಕ್ಕೆ ಈ ಸಂಖ್ಯೆ 19ಕ್ಕೆ ಏರುತ್ತದೆ. ವೆಂಕಟಮಖಿ ಅದನ್ನು 72 ಎಂದು ರಾಗಚಕ್ರವನ್ನು ವ್ಯವಸ್ಥೆಗೊಳಿಸಿದ. ಆ ಚಕ್ರದಲ್ಲಿ 36ರ ಎರಡು ಭಾಗಗಳಿರುತ್ತವೆ.

ಪುರಂದರದಾಸರು ದೊಡ್ಡ ಲಕ್ಷಣಕಾರರೆಂಬ ಪ್ರತೀತಿ ಉಂಟು. ಆದರೂ ಅವರ ಹೆಸರಲ್ಲಿ ಯಾವ ಸಂಗೀತಗ್ರಂಥವಾದರೂ ಬರೆದು ಬಂದುದು ಈವರೆಗೂ ಯಾರ ಅರಿವಿಗೂ ಬಾರದ ಸಂಗತಿ. ಆದರೆ ತಮ್ಮ ರಚನೆಗಳಲ್ಲಿ ಬಳಸಿದ ರಾಗಗಳ ಸ್ವರೂಪ ಅವರ ಲಕ್ಷಣ, ಪ್ರಯೋಗ ಸ್ಫುಟವಾಗಿ ಆಕೃತಿಗೊಳಿಸುತ್ತದೆ. ಶ್ರೀಪಾದರಾಯರು, ವ್ಯಾಸರಾಯರು ಹಾಕಿದ ದಾರಿಯನ್ನು ಅವರು ಮುಂದುವರಿಸಿ ನಡೆದರು. ಸ್ಥೂಲವಾಗಿ ದಾಸರೂ ಅಣ್ಣಮಾಚಾರ್ಯರೂ ಬಳಸಿದ ಹಾಡುಗಳೂ ರಾಗಗಳೂ ರೀತಿ, ವಿಧಾನ, ರಚನೆ ವಸ್ತುಗಳಲ್ಲಿ ಒಂದಕ್ಕೊಂದು ಹೋಲುತ್ತವೆ. ಅಣ್ಣಮಾಚಾರ್ಯರ ಶೃಂಗಾರ ಗೀತೆಗಳು ಹೆಚ್ಚು ಸಂಖ್ಯೆಯವು. ಹೆಚ್ಚು ಪ್ರೌಢವಯಸ್ಸಿನ ಭಾವಗಳನ್ನು ಒಳಗೊಂಡವು. ಅವರು ಬಳಸದಿರುವ ಕೆಲವು ರಾಗಗಳನ್ನು ದಾಸರು ಬಳಸುತ್ತಾರೆ. ಮುಂಚಿನ ಒಂದು ಕಾಲದಲ್ಲಿ ಬಳಕೆಯಿಂದ ಬಿದ್ದುಹೋಗಿದ್ದ ಕಲ್ಯಾಣಿ, ತೋಡಿ, ರಾಗಗಳನ್ನು ದಾಸರು ಪುನಃ ಬಳಕೆಗೆ ತಂದರು. ಬಿಲಹರಿ, ಕಾಂಭೋಜಿಗಳನ್ನೂ ಕನ್ನಡ, ಮಂಗಳ ಕೈಶಿಕಗಳನ್ನು ಬಹು ಚೆಲುವಾಗಿ ಬಳಸಿದ್ದಾರೆ. ಸುಳಾದಿಗಳ ಕೆಲವು ಭಾಗಗಳು ತುಂಬ ಹಾರ್ದವಾಗಿ ಮನಸ್ಸನ್ನು ಮುಟ್ಟುತ್ತವೆ. 12–13ನೆ ಶತಮಾನಗಳಲ್ಲಿ ವೀರಶೈವ ಮಾನ್ಯರ ವಚನಗಳ ಪ್ರಕಾರಗಳಿಗೆ ಇವು ಹತ್ತಿರದ ರಚನೆಯವು. ಹಲವು ವೇಳೆ ಅವೇ ವಾಕ್ಯಗಳ ಅಲಂಕಾರ ಪ್ರತಿಮೆ ನುಡಿಗಟ್ಟುಗಳು. ಅವು ಆ ಕಾಲದಲ್ಲಿ ತುಂಬ ಜನಜನಿತವಾಗಿದ್ದಿರಬೇಕು. ಹೊಳಪುಳ್ಳವಾಗಿ ಜೀವಂತವಾಗಿ ಶಕ್ತಿಯುತವಾಗಿ ಇದ್ದುದರಿಂದ ಜನರ ಮನಸ್ಸನ್ನು ಹಿಡಿದಿದ್ದವು. ಅಲ್ಲಿಂದ ಎರಡು ಶತಮಾನಗಳಾದಮೇಲೆ 15–16ನೇ ಶತಮಾನ

ಗಳಲ್ಲಿ ಹೊಸತಾಗಿ ಇನ್ನೊಂದು ವೀರಶೈವ ಕ್ರಿಯಾಚೈತನ್ಯ ಹುಟ್ಟಿ ಕೊಂಡಿತು. ವಿಜಯನಗರದ ರಾಜಧಾನಿಯಲ್ಲಿ ವಚನಗಳ ಸಂಕಲನ ವರ್ಗೀಕರಣ ವ್ಯಾಖ್ಯಾನ ಪ್ರತಿಪಾದನೆ ರೂಪವಾದ ಸಾಹಿತ್ಯ ಅಭಿವೃದ್ಧಿ ಗೊಂಡಿತು. ವಚನಗಳು ಜನರ ಹೃದಯಗಳಲ್ಲಿ ನೆನಪಲ್ಲಿ ತುಂಬಿದ್ದವು. ಆದುದರಿಂದ ಅವನ್ನು ದಾಸರು ಸ್ವೀಕರಿಸಿ ಬಳಸಿಕೊಂಡಿರಬೇಕು. ಭಕ್ತಿ ಭಾವ ಶರಣ್ಯಭಾವಗಳು ಸುಮಾರು ಭಕ್ತಿಪಂಥದಲ್ಲೆಲ್ಲಾ ಹತ್ತಿರದವು; ಇವುಗಳ ನಡುವೆ ಇರುವ, ಸಮದಂಡಿ ಎನ್ನುವ ಈ ಸಂಗತಿ ಇರುವುದನ್ನು ಶೃತಪಡಿಸುತ್ತದೆ. ಅನೇಕವು ತುಂಬ ಜನಜನಿತವಾಗಿ ಆರಾಧ್ಯರ ನುಡಿ ಗಳಾಗಿದ್ದವು. ಪುರಂದರದಾಸರ ಬದುಕಿನಲ್ಲಿ ಕಡೆಯಲ್ಲಿ ರಚಿಸಿದ್ದ ಒಂದು ಹಾಡು ಸುಳಾದಿಯಂಥದೆನ್ನಿಸುತ್ತದೆ. ಅತ್ಯಂತ ಹಾರ್ದವಾದ ಜೋಗುಳದ ಹಾಡುಗಳು ಸುಳಾದಿಯ ರೂಪದಲ್ಲಿದೆ. ಇದನ್ನೆಲ್ಲಾ ಹೇಳುತ್ತಿರುವುದು ಊಹೆಯಿಂದ.

ಇನ್ನೊಂದು ಬಗೆ: ಉಗಾಭೋಗ. ರಾಗವಿಸ್ತರಣದಲ್ಲಿ ನಾಲ್ಕಂಶಗಳು ಉಂಟು—ಎನ್ನುತ್ತಾರೆ. ಆ ನಾಲ್ಕಂಶಗಳ ಸಂಗ್ರಹರೂಪ ಉಗಾಭೋಗ ಎನ್ನುವುದುಂಟು. ಅಂಶಗಳಲ್ಲಿ ಮೊದಲನೆಯದು ಉದ್ಗ್ರಾಹ; ಕೊನೆ ಯದು ಆಭೋಗ, ನಡುವೆ ಮೇಲಾಪಕ, ಧ್ರುವ ಎಂಬಂಶಗಳು, ಕೆಲವೇಳೆ ಅಂತರ ಎಂಬ ಇನ್ನೊಂದು ಅಂಶವೂ ಸೇರಿಕೊಳ್ಳುವುದುಂಟು. ಈ ಉಗಾ ಭೋಗಗಳಲ್ಲಿ ರಾಗದ ನಿರ್ದೇಶವಿರುತ್ತದೆ. ತಾಳವಿರುವುದಿಲ್ಲ. ಕೆಲವು ಕಡೆ ಎರಡೂ ಇರುವುದಿಲ್ಲ. ಧ್ರುವ ಇಲ್ಲಿ ಬಹು ಮುಖ್ಯವಾದ ಅಂಶವಾದುದ ರಿಂದ ಉದ್ಗ್ರಾಹ, ಆಭೋಗ ಎಂಬುದರ ಸಂಘಟಿತರೂಪವೆಂದು ಹೇಳಿ ಸ್ವರೂಪಲಕ್ಷಣ ತಿಳಿಸುವುದು. ಅತಿ ಸರಳ ವಿವರಣೆ, ಅತಿ ಲಘು ಎನ್ನಿಸು ತ್ತದೆ. ಅಣ್ಣಮಾಚಾರ್ಯರ ಸುಳಾದಿಯಲ್ಲಿ ರಾಗ ನಿರ್ದೇಶನವಿದೆ ಎಂಬು ದನ್ನು ಹಿಂದೆ ತಿಳಿಸಿದೆ. ಉಗಾಭೋಗಾದಿಗಳನ್ನು ಛಂದೋರಚನೆಯೆನ್ನು ವುದಕ್ಕಿಂತ ಗದ್ಯರೂಪ ಎನ್ನಬೇಕು. ಇಲ್ಲಿ ಕೂಡ ವಚನಗಳಿಗೆ ಇವು ಸಮಸಾಟಿಯಾಗಿರುವುದು, ಎದ್ದುಕಾಣುತ್ತದೆ. ಅಂಕಿತದ ಹಿಂದಿನ ಸಂಭಾವನೆಯನ್ನು ಕಾಣಿಸುವ ರೀತಿಯೂ ವಚನಗಳಲ್ಲಿನಂತೆ ಇರುತ್ತದೆ. ಪುರಂದರದಾಸರ ಕೃತಿಗಳಲ್ಲಿ ಕೆಲವು ಷಟ್ಪದಿ, ಸಾಂಗತ್ಯ, ರಗಳೆ, ತೊಟ್ಟಿಲ

ಗೀತೆಗಳು, ಸುವ್ವಾಲಿ ಹಾಡುಗಳು, ಇನ್ನೊಂದೆರಡು ಲಘು ಪ್ರಕಾರಗಳು ಕೂಡ ಇವೆ.

ಸ್ವಂತ ಸತ್ವದಲ್ಲಿ ದಾಸರು ಸಂಗೀತಗಾರರು. ಆದರೆ ಅವರು ರಚಿಸಿದ ರೆನ್ನಬಹುದಾದ ಯಾವ ಲಕ್ಷಣ ಗೀತೆಗಳೂ ನಮಗೆ ಉಳಿದುಬಂದಿಲ್ಲ. ಅವರ ಹಾಡುಗಳಲ್ಲಿ ಸಂಗೀತವಾಗಿ ಮಾಡಿದ್ದ ಸ್ವರತಂತ್ರವೂ ಉಳಿದು ಬಂದಿಲ್ಲ. ತ್ಯಾಗರಾಜರ ಕೃತಿಗಳನ್ನೂ ಅವರ ಕಾಲದಿಂದೀಚೆಗೆ ಬಂದ ಇತರ ಕೃತಿಗಳನ್ನೂ ಸ್ವರ ಪ್ರಸ್ತಾರ ಹಾಕಿ ಉಳಿಸಿರುವಂತೆ ದಾಸರ ಕೃತಿ ಗಳನ್ನು ಉಳಿಸದಿರುವುದು ವ್ಯಥೆಯ, ದುರದೃಷ್ಟದ ಸಂಗತಿ. ನಮ್ಮ ಸಂಗೀತ ಸಂಪ್ರದಾಯದಲ್ಲಿ ಏನೂ ದಾಸರ ಕೃತಿಗಳಿಗೆ ಉನ್ನತವಾದ ಸ್ಥಾನ ವಿದೆ. ಸಂಗೀತದಲ್ಲಿ ತಾವು ಅವರಿಗೆ ಋಣಿಗಳೆಂದು ತ್ಯಾಗರಾಜರೂ ದೀಕ್ಷಿತರೂ ಇಬ್ಬರೂ ಹೇಳಿದ್ದಾರೆ. ನಮ್ಮ ಸಂಗೀತ ಅವರಿಗೆ ಎಷ್ಟು ಉಪಕೃತವಾಗಿದೆ ಎಂದು ಈಚಿನ ಲೇಖಕರಲ್ಲಿ ಅನೇಕರು ಒಪ್ಪಿಕೊಂಡಿ ದ್ದಾರೆ.

ಅವರು ನಿಧನರಾದರೆಂಬ ಕಾಲದಿಂದ ಕೆಲವೇ ತಿಂಗಳ ಅವಧಿಯಲ್ಲಿ ತಾಳಿಕೋಟೆ ಅಥವಾ ರಕ್ಕಸತಂಗಡಿ ಯುದ್ಧದಲ್ಲಿ–1565ರಲ್ಲಿ ವಿಜಯ ನಗರ ಪರಾಜಯ ಪಡೆಯಿತು. ರಾಜಧಾನಿಯನ್ನು ಹಗೆಗಳು ಲೂಟಿ ಮಾಡಿದರು. ಸಂಸ್ಕೃತಿಯ ವಿಷಯವಾಗಲಿ ಅದರ ಯಾವ ಅಂಶವಾಗಲಿ ಉಳಿಯಿತೆಂಬುದಾಗಲಿ ಅಥವಾ ದಾಸಕೂಟದ ವಿಷಯವಾಗಲಿ ಅಲ್ಲಿಂದ ಮುಂದೆ 100 ವರ್ಷಗಳ ಕಾಲ ಏನೂ ತಿಳಿಯದು. ಈವರೆಗೂ ನಂಬಿ ಬಂದಿರುವಂತೆ 1539ರಿಂದ 1564ರ ವರೆಗೂ ವಿಜಯನಗರದ ಪರಿಸ್ಥಿತಿ, ಪರಿಸರ ಹೇಗೆ ವಿಕೃತವಾಯಿತು ಎಂಬುದನ್ನು ನೋಡುತ್ತ ದಾಸರು ನಿಃಸಹಾಯಕರಾಗಿಯೊ, ವ್ಯಥಿತರಾಗಿಯೊ ಇದ್ದಿರಬೇಕು. ತಮ್ಮ ಕೀರ್ತನೆ, ಸುಳಾದಿ, ಉಗಾಭೋಗಗಳಲ್ಲಿ ಆ ಕಾಲದ ದುಃಸ್ಥಿತಿಯನ್ನೂ ವಿಷಮತೆ ಯನ್ನೂ ಕುರಿತು ನುಡಿಯುವುದು ಮಾತ್ರ ಅವರ ಪಾಲಿಗೆ ಬಂದಿತು. ಆದರೆ ಇವು ಜನಕ್ಕೂ ಕಾಲಕ್ಕೂ ಸಂಬಂಧಿಸಿ ಕಾಣಿಸಿದಂತೆ ಪ್ರಯೋಜಕ ವಾದುವು. ಗಟ್ಟಿ ಸಾಹಿತ್ಯ ಭಾಗ್ಯವನ್ನು ಒದಗಿಸಿಕೊಟ್ಟುದಲ್ಲದೆ, ಸಂಗೀತ ಪೋಷಕವಾದ ಸಜ್ಜೀವನದ ತತ್ವಗಳನ್ನು ಉಳಿಸಿಹೋದವು. ಅವರನ್ನು

ಪಿಲ್ಲವರು ಅವರಲ್ಲಿ ಪ್ರೀತ್ಯಾದರಗಳುಳ್ಳವರಾಗಿ, ಅವರಲ್ಲಿ ಗೌರವವಿಟ್ಟಿದ್ದರು. ನಮ್ಮ ನಷ್ಟ ಹಿರಿದು ಎಂಬುದಕ್ಕೆ ಇನ್ನೊಂದು ಕಾರಣ ಉಂಟು. ಆ ರಚನೆಗಳು ಅವರೇ ಬರೆದವಲ್ಲ. ಯಾರು ಬರೆದರೋ, ಸರಿಯಾದ ಪಾಠ ಯಾವುದೋ ನಿಶ್ಚಯವಿಲ್ಲ. ಆ ಹಾಡುಗಳ ಖಚಿತವಾದ ಸಂಗೀತಕ್ರಮ ನಿರ್ದೇಶವನ್ನೂ ರಚನಾವಿನ್ಯಾಸವನ್ನೂ ಉಳಿಸುವ ಕಡೆ ಯಾರೂ ಗಮನ ಕೊಟ್ಟಹಾಗಿಲ್ಲ. ದಕ್ಷಿಣ ಭಾರತದ ಅಥವಾ ಕರ್ನಾಟಕದ ಸಂಗೀತವನ್ನು ಬಲ್ಲವರು ಆ ಮಾರ್ಗದ ಲಕ್ಷಣಗಳು ಪುರಂದರದಾಸರಿಂದ ಪ್ರಭಾವಗೊಂಡವು ಎನ್ನುತ್ತಾರೆ. ಅದರಲ್ಲಿ ಒಂದು ಕ್ರಮವನ್ನು ಹುದುಗೊಳಿಸಿದರು. ಅದರ ತಳಪಾಯವನ್ನು ಭದ್ರ ಮಾಡಿದರು. ರಚನೆಗಳ ರಾಗ ತಾಳವನ್ನು ಕುರಿತ ಶಾಸ್ತ್ರ ಮತ್ತು ಆಚರಣೆಗಳೆರಡರಲ್ಲಿ ಗಟ್ಟಿಯಾದ ಬಹುಭಾಗ ಅವರು ಏರ್ಪಡಿಸಿದ ಹಾಗೆಯೇ–ಬಿಟ್ಟುಹೋದ ಹಾಗೆಯೇ ಉಳಿದಿವೆ. ಅವರ ಕೀರ್ತನೆಗಳನ್ನು ಸಂಗೀತಗಾರರು ಸ್ವರ ಪ್ರಸ್ತಾರ ಹಾಕಿ ಬರೆದಿಟ್ಟಂತೆ ಇಲ್ಲದಿದ್ದರೂ ರಾಗಗಳ ಸರಿಯಾದ ರೂಪ ಅವುಗಳಲ್ಲಿ ಸ್ಪಷ್ಟವಾಗಿ ವಿಶದವಾಗಿ ಪ್ರತಿಫಲಿಸಿವೆ. ಆ ಕೀರ್ತನೆಗಳು ಈ ಸಂಗತಿಯನ್ನು ನಿದರ್ಶಿಸುವುವು. ಈಗ ನಮಗೆ ದೊರೆತಿರುವ ಹಸ್ತಪ್ರತಿಗಳ ಪ್ರಕಾರ ಅವರು 70–80 ರಾಗಗಳನ್ನು ಮಾತ್ರ ಬಳಸುತ್ತಾರೆ. ಅವುಗಳಲ್ಲಿ ಹಲವನ್ನು ಅವರ ಕಾಲದಲ್ಲಿ ಪ್ರತಿಪಾದಿಸಿದಂತೆಯೇ ಈಚೀಚಿನವರೆಗೂ ಪ್ರತಿಪಾದಿಸುತ್ತಿದ್ದರು. ತ್ಯಾಗರಾಜರ ಕೃತಿಗಳಲ್ಲಿ ಕೆಲವು ಅವರು ಕುರಿತ ವಿಷಯವನ್ನು ವಸ್ತುವನ್ನು ಕುರಿತವೂ ಆಗಿವೆ. ಉದಾಹರಣೆಗಾಗಿ ಇಬ್ಬರಲ್ಲಿಯೂ ದೇವರನ್ನು ಬೆಳಿಗ್ಗೆ ಎಚ್ಚರಗೊಳಿಸುವ ಕೃತಿಗಳು, ಜೋಗುಳಗಳು, ಆರೋಗಣೆ, ಉಡುಗೆ, ತೊಡುಗೆ, ಭಕ್ತಿಯ ಪ್ರಕಾರಗಳು ವಿಷಯವಾಗುತ್ತವೆ. ಇಬ್ಬರಲ್ಲೂ ಸಂಗೀತ ಹೇಗೆ ನಿತ್ಯಸೌಖ್ಯದಾಯಕವಾದುದು ಎಂಬುದನ್ನು ತಿಳಿಸುವ ಹಾಡುಗಳಿವೆ.*

ಕ್ಷೇತ್ರಜ್ಞನ ಪದಗಳ ರಚನೆ ದಾಸರ ಕಾಲದಲ್ಲಿ ಬಳಕೆಯಲ್ಲಿದ್ದ ಹಲವಾರು

---

* ಇದನ್ನು ನಿದರ್ಶಿಸುವಂತೆ ವಸ್ತು, ನಿಲವು, ರಚನೆಗಳಲ್ಲಿ ಒಂದನ್ನೊಂದು **ಹೋಲುವ** ಕೃತಿಗಳನ್ನು ಸಂಗೀತರತ್ನ ವಾಸುದೇವಾಚಾರ್ಯರು ಲೇಖಿಸಿದಂತೆ ಪ್ರಬುದ್ಧ ಕರ್ನಾಟಕ ಸಂಚಿಕೆ 179–80ಗಳಲ್ಲಿ ಪಟ್ಟಿಮಾಡಿದೆ.

ಚೌಕಟ್ಟುಗಳನ್ನು ಹಲವೇಳೆ ಒಳಸುತ್ತದೆ. ಆದರೆ ಅಲ್ಲಿ ವಿಷಯ ಧಾತು–ಹದ–ಬಹುಶಃ, ಕವಿಯ ಉದ್ದೇಶಗಳೇ ಬೇರೆ. ಅಲ್ಲಿನ ಹಾಡುಗಳು ಆಧುನಿಕ ಭಾವಗೀತೆಗಳಿಗೆ ಹೆಚ್ಚು ಹತ್ತಿರದಲ್ಲಿ ರಚಿತವಾಗಿರುತ್ತವೆ. ಕ್ಷೇತ್ರಜ್ಞನ ಹಾಡುಗಳಲ್ಲಿ ಪ್ರೌಢವಯಸ್ಸಿನ ಹೆಣ್ಣು ಗಂಡಿನ ನಡುವಿನ ಪ್ರೌಢರತಿ ಪ್ರೇಮ ವರ್ಣಿತವಾಗಿರುತ್ತದೆ. ಭಾವ ಹೆಚ್ಚು ತೀವ್ರವಾದ್ದು. ರಾಗ ಭಾರ ಉಳ್ಳದ್ದು. ಪುರಂದರ ದಾಸರ ಹಾಡುಗಳಲ್ಲಿ ಅತ್ಯಂತ ವೈಷಯಿಕ ಎನ್ನಬಹುದಾದ ವಿರಹಭಾವ ಕೂಡ ಸಣ್ಣವಯಸ್ಸಿನ ಕೃಷ್ಣನಿಗೆ ಸಂಬಂಧಿಸಿದ್ದು. ಅವನ ದಿವ್ಯತೆ ಯಾವ ಸಮಯದಲ್ಲಿಯೂ ಕವಿಯ ಮನಸ್ಸಿನಲ್ಲಿರುತ್ತದೆ. ಎಲ್ಲಿಯೂ ಸಂದಿಗ್ಧವಲ್ಲ.

ದಾಸರು ಸಂಗೀತ ಪಾಠದ ಮೂಲಭೂತವಾದ ಸ್ವರಗ್ರಾಮವಾಗಿ (Scale) [ಉತ್ತರ ಮಾರ್ಗದಲ್ಲಿ ಭೈರವ್‌ಥಾಟ್ ಎನ್ನುವ] ಮಾಳವ ಗೌಳದ ಆಧಾರಪ್ರಮಾಣವನ್ನು ಪ್ರಚಾರಕ್ಕೆ ತಂದರು. ಪ್ರಾಚೀನ ಕಾಲದ ಶುದ್ಧ ಮಾನ ಖರಹರಪ್ರಿಯದ್ದು. ಅದರಲ್ಲೂ ಷಡ್ಜ ಪಂಚಮ ಮಧ್ಯಮಗಳಿಗೆ ಪೂರ್ಣ ಅಂತರ ಚತುಃಶ್ರುತಿಯನ್ನು ಬಳಸುವ ಮಾರ್ಗ. ಆಮೇಲೆ ಅವುಗಳಿಂದ ಹುಟ್ಟುವ ಸ್ವರ ನಾದಗಳಿಗೆ ಶ್ರುತಿ ಮೌಲ್ಯಗಳು ಇಂಥವೆಂದು ತಿಳಿಸುತ್ತಿದ್ದರು. ಉತ್ತರ ಭಾರತದಲ್ಲಿಯೂ, ದಕ್ಷಿಣದಲ್ಲಿಯೂ ಭರತನ ಸಂಪ್ರದಾಯ ಮರೆತುಹೋಗಿತ್ತು. ಭರತನ ಮೂಲ ಪ್ರಮಾಣ ಷಡ್ಜದಿಂದ ತೊಡಗುತ್ತಿತ್ತೆಂಬುದನ್ನು ಲಕ್ಷಿಸದೆ ಉತ್ತರ ಭಾರತದ ವಿದ್ವಾಂಸರು ಷಡ್ಜಶ್ರುತಿ ಯಾವುದಕ್ಕೆ ಆರಂಭ ಅಥವಾ ಮೂಲ ಸ್ವರವೊ ಅವನ್ನು ಗಮನದಲ್ಲಿಟ್ಟುಕೊಂಡು ಶಂಕರಾಭರಣ ಅಥವಾ ಬಿಲಾವಲ್ ಪ್ರಮಾಣವನ್ನು ಆಧಾರವಾಗಿ ಎಣಿಸಿದರು. ಪುರಂದರದಾಸರು ಮಾಳವ ಗೌಳವನ್ನು ಆಧಾರವಾಗಿ ಸ್ವೀಕರಿಸಿದರು. ಹಿಂದಿನ ಕಾಲದಲ್ಲಿ ಶಾಸ್ತ್ರೋಕ್ತವಾಗಿ ಪ್ರಮಾಣಭೂತವೆಂದು ಯಾವ ವಿಧಾನ ಕ್ರಮವನ್ನು ಬಳಸುತ್ತಿದ್ದರೊ ಅದರಂತೆಯೇ ಷಡ್ಜ, ಪಂಚಮ, ಮಧ್ಯಮಗಳುಳ್ಳ ಮಾಳವ ಗೌಳವನ್ನು ಪ್ರಯೋಗಿಸುತ್ತಿದ್ದರು. ಒಂದು ಮಾತ್ರ ವ್ಯತ್ಯಾಸ. ಅಂತರ ಚತುಃಶ್ರುತಿಯಲ್ಲ. ದ್ವಿಶ್ರುತಿಯಿಂದ ರೂಪಗೊಂಡದ್ದು. ಈ ದ್ವಿಶ್ರುತಿಯ ಅಂತರ ಅರ್ಧ ಸ್ವರದ ಪ್ರಮಾಣವುಳ್ಳದ್ದು. ಸಂಗೀತ ಪಾಠವನ್ನು ಆರಂಭ

ಮಾಡುವವರಿಗೆ ಚತುಃಶ್ರುತಿ ಅಂತರಕ್ಕಿಂತ ಅದರ ಅರ್ಧವಾದ ದ್ವಿಶ್ರುತಿ ನುಡಿಯಲು ಹೆಚ್ಚು ಸುಲಭ. ಮಾಳವಗೌಳದ ಆಧಾರ ಪೂರ್ಣಪ್ರಮಾಣ ವಾಗಿ ಆಯುವುದಕ್ಕೆ ಇದು ಮುಖ್ಯ ಕಾರಣವಾಗುತ್ತದೆ.* ಇಂದಿಗೂ ದಕ್ಷಿಣ ದೇಶದಲ್ಲಿ ಸಂಗೀತ ಬೋಧನೆಗೆ ಬಳಸುವ ಕ್ರಮಪಾಠ ಅವರು ರಚಿಸಿಕೊಟ್ಟದ್ದೇ. ಸ್ವರಾವಳಿಗಳು, ಜಂಟಿ ವರಸೆಗಳು, ಅಲಂಕಾರಗಳು, ಗೀತಗಳು, ಸ್ವರ ಮತ್ತು ತಾಳ ಪ್ರಸ್ತಾರಗಳು ಎಲ್ಲ ಜಟಿಲತೆಗಳನ್ನೂ ವಶ ಮಾಡಿಕೊಳ್ಳಲು ಸಹಾಯವಾಗುವಂತೆ ಕರ್ನಾಟಕ ಸಂಗೀತದಲ್ಲಿ ರಚಿಸಿ ರುವ ಸಿದ್ಧ ಮಾರ್ಗವಾಗಿದೆ.

ಲಕ್ಷಣ ಗೀತಗಳು, ತಾನ ವರ್ಣಗಳು, ತಿಲ್ಲಾನಗಳನ್ನು ಅವರು ಮಾಡಿದ್ದ ರೆನ್ನುತ್ತಾರೆ. ಇವುಗಳಲ್ಲಿ ಯಾವುವೂ ನಮ್ಮ ದುರದೃಷ್ಟದಿಂದ ನಮ್ಮ ವರೆಗೆ ಉಳಿದುಬಂದಿಲ್ಲ. ಪದ, ದೇವರ ನಾಮ, ಕೀರ್ತನೆಗಳೆಂಬವು ಏಕಾರ್ಥಕಗಳು. ಕೀರ್ತನೆಗಳಲ್ಲಿ ಹೆಚ್ಚು ಸಂಖ್ಯೆಯವು ಮಧ್ಯಮ ಕಾಲ ದವು. "ತಾಳದಲ್ಲಿ ಎಲ್ಲ ಬಗೆಗಳನ್ನೂ ಅವರು ಬಳಸುತ್ತಾರೆ. ಅವರಿಗೆ ಹೆಚ್ಚು ಪ್ರಿಯವಾಗಿ ಒದಗಿಬಂದವು ಛಾಪು ಮತ್ತು ಝಂಪೆ. ಒಟ್ಟು ಸಂಖ್ಯೆಯ ಬಹು ಭಾಗ ಆದಿತಾಳದ್ದು." ಕೆಲವು ಕೀರ್ತನೆಗಳಿಗೆ ಪಲ್ಲವಿ ಮಾತ್ರ ಇರುತ್ತದೆ, ಚರಣಗಳಿರುತ್ತವೆ. ಹೆಚ್ಚು ಸಂಖ್ಯೆಯವುಗಳಲ್ಲಿ, ಪಲ್ಲವಿ–ಅನುಪಲ್ಲವಿ–ಚರಣಗಳಿರುತ್ತವೆ. ರಚನಕಾರರಲ್ಲಿ ಸ್ವಂತವಾಗಿ ಪ್ರೌಢವಾದ ಸಂಗತಿಗಳನ್ನು ರಚಿಸಿ, ಇವುಗಳ ಸ್ವರೂಪವನ್ನೂ ನಿಗದಿ ಮಾಡುವಲ್ಲಿ ಸಂಗೀತ ತಂತ್ರದಲ್ಲಿ ಅವರಿಗಿದ್ದ ಗುರುವಾಣೆಯನ್ನು ಸ್ಪಷ್ಟ ಪಡಿಸುವುದು ಸುಳಾದಿ. ಸುಳಾದಿಗಳಲ್ಲಿ ವಿಷಯ ಕೀರ್ತನೆಯಲ್ಲಿರು ವಂತೆಯೇ. ಆದರೆ ಅದರಲ್ಲಿ 7–8 ಸ್ಪಷ್ಟವಾದ ವಿಭಾಗಗಳು, ಅವಕ್ಕೆ ಹೊಂದುವಂಥ ವಿಸ್ತರದ ಸಾಹಿತ್ಯ, ಅದನ್ನು ಒಂದು ಗೊತ್ತಾದ ತಾಳ

---

* ಇದು ಪಾಠಬೋಧೆಗೆ ಒಂದು ಸೌಕರ್ಯವನ್ನು ಕಲ್ಪಿಸಿಕೊಡುವ ಸಂಗತಿಯೇ ಹೊರತು ಇದನ್ನು ಅತಿಮಾಡುವುದು ತಕ್ಕುದಲ್ಲವೆನ್ನುವುದುಂಟು. ಆದರಿದು ಆಧಾರ ಭೂತವಾದ ಸಂಗತಿ. ಈ 400 ವರ್ಷಗಳಿಂದ ದಕ್ಷಿಣದಲ್ಲಿ ನಡೆದುಬಂದಿರುವ ಸಂಗೀತ ಶಿಕ್ಷಣಕ್ಕೆ ತಳಹದಿ ಎನ್ನುವಂತೆ ಸ್ವೀಕೃತವಾಗಿ ಬಂದಿವೆ.

ಮಾರ್ಗದಲ್ಲಿ ಹಾಡಬೇಕೆಂಬ ವಿಧಾನ ಸೂಚಿತವಾಗಿರುತ್ತದೆ. ಬಹು ವಿಚಕ್ಷಣೆಯಿಂದ ಪ್ರೌಢವಾಗಿ, ಕ್ಲಿಷ್ಟವಾಗಿ ರಚನೆಯನ್ನು ಉಳ್ಳದ್ದು ಸುಳಾದಿ. ಮುಖ್ಯವಾದ, ಎಲ್ಲ ಸಂಚಾರಗಳನ್ನೂ, ಸಾಕಲ್ಯದಿಂದ ನೋಡ ಬಲ್ಲಂತೆ ಅವನ್ನು ಸಾಧಿಸುವ ಮಾರ್ಗ ಅಲ್ಲಿರುತ್ತದೆ. ತುಳಜೇಂದ್ರನ 'ಸಂಗೀತ ಸಾರಾಮೃತ' (ಸುಮಾರು 1735) ಗ್ರಂಥದಲ್ಲಿ ವರ್ಣಿಸಿರುವ ರಾಗಲಕ್ಷಣಗಳಿಗೆ ಪ್ರಾಚೀನರ ಅಧಿಕಾರವಾಣಿ, ಪುರಂದರದಾಸರ ಸುಳಾದಿ ಗಳಲ್ಲಿ ಕಾಣಬರುವ ಅನೇಕ ಪ್ರಯೋಗಗಳು ಎಂಬುದನ್ನು ತಿಳಿಸುತ್ತದೆ.* ವಿಷಾದಕರವಾದ ಸಂಗತಿ ಎಂದರೆ, ಅವುಗಳ ತವರುನಾಡಾದ ಕರ್ನಾಟಕ ದಲ್ಲಿ ಸುಳಾದಿಗಳನ್ನು ಹೇಳುವ ಸಂಪ್ರದಾಯ ಹುಟ್ಟಡಗಿಹೋಗಿದೆ. ಈಗದನ್ನು ಪ್ರತಿಪಾದಿಸುತ್ತಿರುವ ಯಾರ ಮಾರ್ಗವೂ ಶುದ್ಧವೆಂದು ಎಲ್ಲ ಸಂಗೀತ ತಜ್ಞರು ಒಪ್ಪುವುದಿಲ್ಲ. ಸಂಗೀತ ಪರಿಷತ್ತಿನಂಥವರು ವಿದ್ವಾಂಸ ರನ್ನೆಲ್ಲ ಸೇರಿಸಿ ಇಲ್ಲಿಗೆ ಸಂಬಂಧಿಸಿದ ಎಲ್ಲ ಸಂಗತಿಗಳನ್ನು ಕೂಲಂಕಷ ವಾಗಿ ಪರ್ಯಾಲೋಚಿಸಿ ವಿದ್ವಜ್ಜನರಿಗೆಲ್ಲ ಒಪ್ಪುವಂಥ ಲಕ್ಷಣಗಳನ್ನೂ ವಿಧಾನವನ್ನೂ ಕ್ರಮವನ್ನೂ ನಿರ್ಣಯಿಸುವವರೆಗೂ ಇದು ಹೀಗೆಯೇ ಉಳಿಯುತ್ತದೆ.

ದಾಸರು ಬಳಸುವ ಉನ್ನೊಂದು ಬಗೆಯ ಉಗಾಭೋಗವನ್ನು ಅತಿ ಸರಳವಾದ ಒಂದು ಹಾಡಿನ ಪ್ರಕಾರವೆಂದು ಎಣಿಸಬಹುದು. ಇದರಲ್ಲಿ ಭಾಗಗಳ ವಿತರಣೆ ಇಲ್ಲ. ರಚನೆ ತುಂಬ ಸಡಿಲ. ತಾಳ ಕೇವಲ ಸರ್ವ ಲಘು ಎನ್ನಬಹುದು. ರಾಗದ ಅತಿ ಸರಳ ನಡೆಗಳೂ ಅಲ್ಲಿನ ಸಂಗೀತ ವನ್ನು ರಚಿಸುತ್ತವೆನ್ನಬಹುದು.

ಪುರಂದರದಾಸರಿಗೆ ನಮ್ಮನ್ನು ಕೃತಜ್ಞರನ್ನಾಗಿ ಮಾಡುವ ಸಂಗತಿ ಅವರು ರಚಿಸಿಕೊಟ್ಟಿರುವ ಸಂಗೀತದ ಪ್ರಥಮಪಾಠಗಳು. ಸ್ವರಾವಳಿ,

---

* ಸಂಗೀತ ಭಾಗಕ್ಕೆ ಸಂಬಂಧಿಸಿದ ಹಲವು ಸಂಗತಿಗಳನ್ನು ಷಡಗೋಪನ್, ಎ. ವಿ. ಸುಬ್ಬರಾವ್, ವಾಸುದೇವಾಚಾರ್ಯ, ಪಿ. ಸಾಂಬಮೂರ್ತಿ ಮುಂತಾದವರ ಲೇಖನಗಳಿಂದ ಸಂಗ್ರಹಿಸಿದ್ದೇನೆ. ಇಲ್ಲಿನ ಲೋಪದೋಷ ಪ್ರಮಾದಗಳೆಲ್ಲವೂ ನನ್ನವು.

ಜಂಟಿಸ್ವರ ಅಲಂಕಾರ ಗೀತಗಳು ರೂಪದಲ್ಲಿ ಎಲ್ಲ ಮಕ್ಕಳೂ ಕಲಿಯುತ್ತಾರೆ. ಗೀತಗಳನ್ನು ಪಿಳ್ಳೈಯಾರ್ ಅಥವಾ ಪಿಳ್ಳಾರಿಗೀತಗಳೆಂದು ಕರೆಯುತ್ತಾರೆ. ಅದಕ್ಕೆ ಗಣಪತಿ ಎಂದೂ ಮಕ್ಕಳೆಂದೂ ಅಥವಾ ಅವುಗಳ ಮೂಲಕ ಪಾಠವನ್ನು ಆರಂಭಮಾಡುವವರಿಗೆ ಸ್ವರ ರಚನೆಯ ವಿವಿಧ ರೂಪಗಳೂ, ತಾಳಗಳ ಬಗೆಬಗೆಯ, ಜಟಿಲರೂಪಗಳನ್ನು ವಿಳಂಬದಲ್ಲಿ ಮಧ್ಯಮದಲ್ಲಿ ದ್ರುತಕಾಲಗಳಲ್ಲಿ ಅಭ್ಯಾಸ ಮಾಡಲು ಅನುವಾಗುತ್ತದೆ. ಅವನ್ನು ವಶಮಾಡಿಕೊಂಡರೆ ಆಮೇಲೆ ರಾಗಗಳ–ತಾಳಗಳ ರಚನೆಗಳಲ್ಲಿನ ಹೆಚ್ಚು ನಿರ್ದಿಷ್ಟವಾದ ಅಥವಾ ವಿಶಿಷ್ಟವಾದ ಅಂಶಗಳನ್ನು ಅಭ್ಯಾಸ ಮಾಡುವುದಕ್ಕೆ ಗಟ್ಟಿಯಾದ, ಸ್ಪಷ್ಟವಾದ ತಳಹದಿ ಹಾಕಿದ ಹಾಗಾಗುತ್ತದೆ. "ಲಂಬೋದರ ಲಕುಮಿಕರ" ಎಂಬ ಸಾಹಿತ್ಯವುಳ್ಳ ಪಿಳ್ಳಾರಿ ಗೀತಗಳು ಸರಳವಾಗಿ ಆರಂಭವಾದರೂ ಸುಂದರವಾದ ವರ್ಣರಂಜನೆಯುಳ್ಳವು. ಪ್ರೊ. ಸಾಂಬಮೂರ್ತಿಯವರು ಹೇಳುವಂತೆ 7 ತಾಳಾಲಂಕಾರಗಳನ್ನು ಅವರು ರಚಿಸಿದರು. ಮೊದಲನೆಯ ಸಾಲನ್ನು ಚೆನ್ನಾಗಿ ಕಲಿತರೆ ಉಳಿದ ಸಾಲುಗಳನ್ನು ಅವು ಪೂರ್ಣಗೊಳ್ಳುವಂತೆ ರೂಪಿಸಿಕೊಳ್ಳಬಹುದು. ....ಒಂದಲಂಕಾರದ ಹತ್ತು ಆವರ್ತಗಳನ್ನು ತ್ರಿಕಾಲಗಳಲ್ಲಿ, ಅನುಲೋಮ, ವಿಲೋಮ, ಮುರಿವು ತಿರುವುಗಳು, ಬಗೆಬಗೆಯ ಮಾರ್ಪಾಡಿನ ಕ್ರಮಗಳು ಇವನ್ನು ಅಭ್ಯಾಸಮಾಡಬಹುದು. ಮೊದಲ ಸಾಲು ಮಂದ್ರದಲ್ಲಿ ಎರಡು ಮೂರನೆಯ ಸಾಲು ಮಧ್ಯಮದಲ್ಲಿ 4, 5, 6 ಮತ್ತು 7 ಸಾಲುಗಳು ದ್ರುತಕಾಲದಲ್ಲಿ, 8, 9 ಪುನಃ ಮಧ್ಯದಲ್ಲಿ 10ನೇ ಸಾಲನ್ನು ಪುನಃ ಮಂದ್ರದಲ್ಲಿ ಹೀಗೆ ನುಡಿವ ಅಭ್ಯಾಸಕ್ರಮ ಏರ್ಪಡುತ್ತವೆ. ಸ್ವರಾವಳಿ–ಜಂಟಿವರಸೆಗಳನ್ನು ಅಭ್ಯಾಸಮಾಡುತ್ತಾ ಈ ಅಲಂಕಾರಗಳು ಎಲ್ಲ ಸ್ಥಾಯಿಗಳಲ್ಲಿಯೂ ಪರಸ್ಪರ ಸ್ಥಾಯಿಸಂಬಂಧಗಳಲ್ಲಿಯೂ, ಉಚ್ಚಾರಗೊಳ್ಳಲು ನೆರವು ಕೊಡುತ್ತದೆ.

ದಾಸರ ಪ್ರತಿಭಾಶಕ್ತಿ ಮಲಹರಿ ರಾಗದಲ್ಲಿ ಅವರು ರಚಿಸಿರುವ ಗೀತಗಳಲ್ಲಿ ಅಧಿಕವಾಗಿ ತೋರುತ್ತದೆ. ಮಾಳವಗೌಳದ ಬಳಿಕ ಅದೇ ಜನಕ ರಾಗಕ್ಕೆ ಸೇರಿದ ಇನ್ನೊಂದನ್ನು ಆಯುವುದು ಸೂಕ್ತವಾಗಿದೆ. ಅವರಿಗೆ ಮಗುವಿನ ಮನಸ್ಸು ಹೇಗೆ ಓಡುವುದೆಂಬುದು ಉತ್ತಮವಾಗಿ ಗೊತ್ತಿತ್ತು.

ಆದುದರಿಂದ ಧಾತು ಎಂದರೆ ರಾಗ, ಮಾತು ಎಂದರೆ ಸಾಹಿತ್ಯ. ಇವೆರಡೂ ಸರಳವಾಗಿ, ಸುಲಭವಾಗಿ ಹೊಂದಿಕೊಳ್ಳುವ ಗೀತಗಳ ಪರಿಚಯ ಉಂಟಾಗುವಂತೆ ಮಾಡಿದೆ. ಒಂದು ಆವರ್ತದಲ್ಲಿ, ಒಂದೇ ಸಂಖ್ಯೆಯ ಅಕ್ಷರಗಳಿರುವಂತೆ ಮಾಡುವುದು ಸಾಧಾರಣ ವಾಡಿಕೆ. ಕೆಲವು ಸ್ವರಗಳನ್ನು ಲಂಬಿಸುವುದರಿಂದ ಕಡಮೆ ಸಂಖ್ಯೆಯ, ಅಕ್ಷರಗಳಿಂದ ಈ ಗೇಯ ಪ್ರಯೋಜನವನ್ನು ಸಾಧಿಸುವುದು ಪ್ರಯೋಗದಿಂದ ತೋರಿಸಿಕೊಟ್ಟದ್ದು ಪುರಂದರದಾಸರ ವೈಯಕ್ತಿಕತೆ. ಜಯದೇವನ ಗೀತಗೋವಿಂದದಲ್ಲಿ ಚರಣಗಳು ಮೊದಲು ಬರುತ್ತವೆ. ಆಮೇಲೆ ಅವಕ್ಕೆ ಸಮಾನವಾದ ಒಂದು ಪಲ್ಲವಿ ಬರುತ್ತದೆ. ದಾಸರು ಮಲಹರಿಯ ಎರಡು ಗೀತಗಳಲ್ಲಿ ಈ ವಿಧಾನವನ್ನು ಬಳಸಿಕೊಳ್ಳುತ್ತಾರೆ. "ಶ್ರೀಗಣನಾಥ" ಎಂಬುದರಿಂದ ತೊಡಗಿ "ಲಂಬೋದರ ಲಕುಮಿಕರ"—ಭಾಂಡೀರ ಭಾಷೆಯ ಒಂದು ರೂಪ ಇದು ಎಂಬುದನ್ನು ನಾವು ನೆನಪಿನಲ್ಲಿಟ್ಟುಕೊಳ್ಳಬೇಕು. ಮಲಹರಿಯ ಮೂರನೆಯ ಗೀತೆ " ಕೆರೆಯ ನೀರನು ಕೆರೆಗೆ ಚೆಲ್ಲಿ " ಎಂಬುದು ದ್ವಿಖಂಡಿಕೆಯ ಗೀತ.

ಆರಭಿಯಲ್ಲಿ ಒಂದು ಕೀರ್ತನೆಯಿದೆ. ಕೆಲವು ಪಾಠಗಳಲ್ಲಿ ಅದಕ್ಕೆ ಆದಿ ಎಂದು, ಕೆಲವಲ್ಲಿ ರೂಪಕ ಎಂದು ತಾಳರಚನೆ ಹೇಳಿದ್ದಾರೆ. "ಆಡಿದನೊ ರಂಗ, ಅದ್ಭುತದಿಂದಲಿ " ಎಂದು ಅದು ಆರಂಭವಾಗುತ್ತದೆ. ಕಾಳಿಂಗ ಸರ್ಪನ ಹೆಡೆಯ ಮೇಲೆ ಎಷ್ಟು ಅದ್ಭುತವಾಗಿ ಮನೋಹರವಾಗಿ ಕುಣಿದನೆಂಬುದು ಅಲ್ಲಿ ಬರುತ್ತದೆ. ಬ್ರಹ್ಮನೂ, ಇತರರೂ ಗಗನದಲ್ಲಿ ಗುಂಪುಕೂಡಿ ನೋಡುತ್ತಿದ್ದರಂತೆ. ರಂಭೆ—ಊರ್ವಸಿ ಸ್ವರ್ಗಲೋಕದ ಸುಂದರಿಯರು ಭರತನಾಟ್ಯ ಮಾಡಿದರಂತೆ. " ಝಂತಕ ತಕಧಿಮಿ ತಧಿತೋಂ" ಎಂದು " ಝುಂಪೆತಾಳದಿ ತುಂಬುರನೊಪ್ಪಿಸೆ " 'ಧಮಪ ಪ ಧಸರಿ' ಎಂದು ಸ್ವರಗಳು ನುಡಿಯುತ್ತವೆ. ನಾರದ ತುಂಬುರ ಹಾಡುತ್ತಾರೆ. ನಂದಿ ಮದ್ದಲವನ್ನು ಬಾರಿಸುತ್ತಾನೆ. ಇತ್ಯಾದಿ. ಪುರಂದರದಾಸರು ಗಾನದಲ್ಲಿ ನಾಟ್ಯದಲ್ಲಿ ಸಂತೋಷಪಡುವುದು ಹೀಗೆ.

ಅವರ ರಚನೆಯ ಇನ್ನೊಂದು ಪ್ರಕಾರ ಮುಂಡಿಗೆ ಎಂಬುದು. ಸಾಮಾನ್ಯ ಮನುಷ್ಯನಿಗೆ ಅದು ಒಗಟಿಯ ಹಾಗಿರುತ್ತದೆ. ಅರ್ಥವಾಗುವುದಿಲ್ಲ. ರಹಸ್ಯವಾದುದು. ಆಧ್ಯಾತ್ಮಿಕಾರ್ಥವುಳ್ಳದ್ದು. ಪ್ರತಿಮೆಗಳನ್ನು, ಸಂಕೇತ

ಗಳನ್ನು ಅದು ಬಳಸುತ್ತದೆ. ಯಾರಿಗೆ ಅವುಗಳ ಉಪದೇಶವಾಗಿರುತ್ತದೊ ಅವರಿಗೆ ಮಾತ್ರ ಈ ರಹಸ್ಯಾರ್ಥಗಳು ತಿಳಿದವಾಗಿರುತ್ತವೆ. ಕನಕದಾಸರಲ್ಲಿ ಈ ಸಂಖ್ಯೆ ಇನ್ನೂ ಹೆಚ್ಚು. ಮಹಾರಾಷ್ಟ್ರ ಸಂತರಲ್ಲಿ ಕಾಣುವ ಭಾರುಡಗಳೆಂಬ ತರದವು ಇವು. ನುಡಿ ಖಂಡದ ಪ್ರತಿರೂಪ ಒಂದು ತಾಂತ್ರಿಕ ಅರ್ಥಸೂಚನೆ ಇರುತ್ತವೆ. ಆ ಸಮಯ ಸಂಕೇತದ ಭಾಷೆ ಗೊತ್ತಿದ್ದವರಿಗೆ ಮಾತ್ರ ಅರ್ಥ ಸ್ಫುರಣೆಯಾಗುತ್ತದೆ. ಮತದಲ್ಲಿ ಪ್ರತಿಯೊಂದು ಶಾಖೆಯವರೂ–ತಾಂತ್ರಿಕರೂ ಸೇರಿ, ಇತರರಿಗಿಂತ ಹೆಚ್ಚಾಗಿ ಅವರು ತಮ್ಮದೇ ಪ್ರತ್ಯೇಕವಾದ ವಿಶಿಷ್ಟವಾದ ಸಂಕೇತದ ಮಾತುಗಳನ್ನೂ ಅರ್ಥ ಸೂಚನೆಯುಳ್ಳ ಮಾತುಗಳನ್ನೂ ಗೊತ್ತುಮಾಡಿಕೊಂಡಿರುತ್ತಾರೆ.

# 7. ಸಮಾಪನ

ಕಡೆಯ ಚಿತ್ರವಾಗಿ ದಾಸರನ್ನು ಕುರಿತು ಸ್ಥೂಲವಾಗಿ ಈ ಮಾತುಗಳನ್ನು ಹೇಳಬಹುದು. ಪ್ರಥಮವಾಗಿ ಹೃದಯವನ್ನು ಮುಟ್ಟುವ, ಚೆಲುವಾದ ಕೆಲವು ದೇವರ ನಾಮುಗಳನ್ನೂ ಪದಗಳನ್ನೂ ದಾಸರು ರಚಿಸಿದರು; ಹಾಡಿದರು. ದೊಡ್ಡ ಭಕ್ತರೆಂದು, ದಾಸಕೂಟದ ನಾಯಕರೆಂದು ಅವರನ್ನು ನಾಡು ಎಣಿಸಿತು. ಹಾಡುಗಳು ಸಾಹಿತ್ಯವೂ ಹೌದು, ಸಂಗೀತವೂ ಹೌದು. ಆ ಕಾಲದ ಸಾಹಿತ್ಯ ಅಭ್ಯಾಸಿಗಳು ಅವನ್ನು ಹಾಗೆ ಪರಿಗಣಿಸಿರಲಿಲ್ಲ. ಇವರು ಜನಪದ ಗೀತಗಳನ್ನೂ ಲಾವಣಿಗಳನ್ನೂ, ಇದೇ ರೀತಿ ಸಾಹಿತ್ಯವೆಂದೆಣಿಸಿರಲಿಲ್ಲ. ಇಂದು ನಾವು ಸಾಹಿತ್ಯವೆಂದು ಎಣಿಸುವ ದೃಷ್ಟಿ ಹೆಚ್ಚು ಸಾಕಲ್ಯದಿಂದ ಕೂಡಿದುದು. ಸಹಜವಾಗಿ, ಸ್ವಂತಶಕ್ತಿಯ ಕಾರಣದಿಂದ ಅವಕ್ಕೆ ಆ ಸ್ಥಾನವನ್ನು ಕೊಡುವುದು ಇಂದು ಯುಕ್ತವೆನ್ನಿಸಿದೆ. ವಿದ್ವಾಂಸರು, ವಿಮರ್ಶಕರು, ಯಾವುದನ್ನು ಸಾಹಿತ್ಯದ ತತ್ವಗಳು ಸೂತ್ರಗಳು, ಸಮಯಗಳು ಎಂದು ವರ್ಣಿಸಿ ತಮಗೆ ಒಪ್ಪು ಎಂದು ಹೇಳುತ್ತಿದ್ದರೊ ಅವರು ಯಾವುದನ್ನು ಪ್ರತಿಭಾಕಲ್ಪಿತವಾದ ಸಾಹಿತ್ಯಕೃತಿ ಎನ್ನುತ್ತಿದ್ದರೊ, ಆ ದೃಷ್ಟಿಯಿಂದ ದಾಸರು ಈ ಹಾಡುಗಳನ್ನು ಮಾಡಲಿಲ್ಲ. ಅವು ಭಾವಗೀತಗಳು. ಪ್ರತಿಯೊಂದೂ ಸ್ವಸಂಪೂರ್ಣವಾಗಿ ಖಚಿತವಾಗಿ ಒಂದು ಸನ್ನಿವೇಶವಲ್ಲಿ ಹುಟ್ಟಿದವು. ಹಾಡುವ ದಾಸರ ಮನಸ್ಸಿನಲ್ಲಿಯೊ ಬದುಕಿನಲ್ಲಿಯೊ ಕಂಡ ಚರ್ಯೆಯನ್ನು ಉದ್ದೇಶಿಸಿಯೊ ಹುಟ್ಟಿದವು ಈ ಹಾಡುಗಳು. ಕೆಲವು ಸ್ವಂತ ಮನಃಸ್ಥಿತಿ, ಆಕಾಂಕ್ಷೆ ಸಾಧನ ಸಿದ್ಧಿಗಳ ಅಭಿವ್ಯಂಜಕವಾಗಿವೆ, ಅಥವಾ ಲೋಕಕ್ಕೆ ನುಡಿದವು. ಇತರರ ಪ್ರಯೋಜನಕ್ಕಾಗಿ ಅವರಿಗೆ ಹಿತವಾಗಲೆಂದು ಅವರಿಗೆ ತೋರಿದುದು ಅವರು ಜನಕ್ಕೆ ನುಡಿದುದು. ಸದ್ಯೋಜಾತ. ಈ ಉದ್ದೇಶ ಸ್ಪಷ್ಟವಾಗಿ ಅವರ ಮನಸ್ಸಿಗೆ ಬಂದು ಸ್ಪಷ್ಟವಾಗಿ ಉದ್ದಿಷ್ಟಗೊಂಡದ್ದಾಯ್ತು. ಇದಕ್ಕೆ ನೆರವು ಸಾಧನ ಮಾತ್ರ ಸಂಗೀತ; ಅದರ ಉಪಾಯ ಮಾರ್ಗ. ಸತ್ಯವನ್ನು ತಿಳಿಸಲು ಹಾಡುಗಳ ರೂಪದಲ್ಲಿ ಇದನ್ನು ಹೇಳಿದ್ದಾರೆನ್ನಿಸುತ್ತದೆ. ಗಂಡಿಗೆ

ಹೆಣ್ಣಿಗೆ ಇವನ್ನು ಹೇಳಬೇಕೆನ್ನಿಸುತ್ತದೆ. ವಿಷಯಲೋಲುಪವಾದ ಬದುಕು ತಪ್ಪು; ಕಪಟ, ಡಂಬ ಇವು ಮಾತಿನಲ್ಲಿ, ನಡೆಯಲ್ಲಿ, ಬದುಕಿನಲ್ಲಿ ಇಬ್ಬಗೆಯ ಬದುಕಾಗುತ್ತದೆ, ಎಂಬುದನ್ನು ತೋರಿಸಿಕೊಡಬೇಕೆಂಬುದು ಅವರ ಉದ್ದೇಶ. ಸ್ವಂತವಾಗಿ ದಾಸರೇ ಮಿತಿಮೀರಿ ಸ್ವಾರ್ಥವಾಗಿ ಒಂದು ಬದುಕಿನ ನೆಲೆಯಿಂದ ನಿಃಸ್ವಾರ್ಥವಾದ ಇನ್ನೊಂದು ತೆರದ ಬದುಕಿಗೆ ತಿರುಗಿಬಂದವರು. ಅವರಿಗೆ ಗೊತ್ತಿದೆ: ಜನ ತಮ್ಮ ದಿನದ ಕಾರ್ಯಗಳಲ್ಲಿ ರಾಗದ್ವೇಷಾದಿಗಳಲ್ಲಿ ಪ್ರಯೋಜನಗಳ ಸಾಧನೆಯಲ್ಲಿ ಎಷ್ಟು ಶಠರು, ಎಷ್ಟು ಅವಿವೇಕಿಗಳು ಎಂದು. ಅವರು ಬಯಸುವುದೇನು ? ಲೋಪದೋಷಗಳೇನು ಎಂಬುದನ್ನು ಖಚಿತವಾಗಿ ಬೆರಳುಮಾಡಿ ತೋರಿಸಬಲ್ಲವರಾಗಿದ್ದರು. ಅಲ್ಲಿನ ದೋಷಗಳನ್ನು ಅನೃತಗಳನ್ನು ಹೊರಗೆಡವಬಲ್ಲವರಾಗಿದ್ದರು. ಯಾವ ಯಾವ ದೌರ್ಬಲ್ಯ ಮೋಹ, ಆಕರ್ಷಣೆ ಮನುಷ್ಯರಿಗೆ ಹೇಗೆ ಕವಿಯುತ್ತದೆ ಎಂಬುದನ್ನು ಬಲ್ಲವರು. ತಮ್ಮ ಬದುಕನ್ನು ಒಂದು ಸ್ಥಿಮಿತಕ್ಕೆ ತಂದುಕೊಂಡು ದೇವರನ್ನು ಕುರಿತ ಯೋಚನೆಗಳಲ್ಲಿ ಹೇಗೆ ಮನಸ್ಸನ್ನು ಏಕಾಗ್ರಗೊಳಿಸುವುದು ಎಷ್ಟು ಕಷ್ಟ ಎಂಬುದನ್ನು ಅವರು ತಿಳಿದಿದ್ದರು. ಯಾವುದನ್ನು ಧಾರ್ಮಿಕ ಆಧ್ಯಾತ್ಮ ಜೀವನ ಎನ್ನುತ್ತೇವೊ ಅದನ್ನು ನಡಸುವುದು ಕಷ್ಟ. ಮೇಲೆ ಸರಳವಾಗಿ ಸ್ಪಷ್ಟವಾಗಿ ಕಾಣಿಸಿದರೂ ಆಡುವಷ್ಟು ಸುಲಭವಲ್ಲ ಅದು. ದೇಹದ ಮತ್ತು ಲೋಕದ ಸುಖ ಸೌಕರ್ಯಗಳಿಂದ ನಮ್ಮ ಬದುಕನ್ನು ವಿಮುಖಗೊಳಿಸುವುದು ತುಂಬಾ ಶ್ರಮಸಾಧ್ಯವಾದ ಕ್ರಿಯೆ. ಪುರಂದರದಾಸರ ಹಾಡುಗಳಲ್ಲಿ ಅಂಥ ವಿಧಾನವನ್ನು ಕಂಡು ಆಕರ್ಷಣೆಗೊಳ್ಳುತ್ತೇವೆ. ನಿಷ್ಠುರ ಹೃದಯರಾಗಿ, ಜಿಪುಣರಾಗಿದ್ದ ಅವರನ್ನು ಅವರು ಕೈಹಿಡಿದ ಹೆಂಡತಿಯ ಪ್ರೀತಿ ಕಾಪಾಡಿತು. ಕರುಣಾಳುವಾದ ಗುರುವೊಬ್ಬರು ತಮ್ಮ ಆಶ್ರಯಕ್ಕೆ ತೆಗೆದುಕೊಂಡು ನಿಶ್ಚಲ ನಂಬಿಕೆ ಬಂದು ಅವರಲ್ಲಿ ನೆಲಸುವಂತೆಯೂ, ಅವರ ಅತ್ಮಕ್ಕೆ ಶಾಂತಿ ಬರುವಂತೆಯೂ ಮಾಡಿತು.

ನಾಡಿನ ಮೇಲೆಲ್ಲ ಅವರು ಸುತ್ತಾಡಿದರು. ತೀರ್ಥಕ್ಷೇತ್ರಗಳಲ್ಲಿ ಜನವನ್ನು ಕಂಡರು. ಅವರ ಬದುಕು ರೀತಿಗಳನ್ನು ಅರಿತರು. ತಮ್ಮನ್ನು ತಾವು ಚಲಿಸದಂತೆ ನಿಲಿಸಿಕೊಂಡಾಗ ರಾಜಧಾನಿಗೆ ಹಿಂದಿರುಗಿಬಂದರು.

ಕೃಷ್ಣದೇವರಾಯನಂಥ ಮಹಾರಾಜ ತೀರಿಕೊಳ್ಳುವ ಪ್ರಸಂಗವನ್ನು (1530) ಇದಾದ 9 ವರ್ಷದ ತರುವಾಯ (1539)–ಗುರು ವ್ಯಾಸರಾಯರ ನಿಧನ ವನ್ನು ಬಹುಶಃ ಕಂಡರು. ಸದಾಶಿವರಾಯ, ತಿರುಮಲರಾಯ, ರಾಮ ರಾಯರ ಆಳ್ವಿಕೆಯಲ್ಲಿ ವಿಜಯನಗರ ರಾಜ್ಯದ ಸ್ಥಿತಿಯನ್ನು ಕಣ್ಣಿಂದ ನೋಡಿರಬೇಕು. ಎಷ್ಟು ಕೆಟ್ಟಿತ್ತು ಅದು ಎಂಬುದನ್ನು ಅರಿತು ಆ ಕಾಲದ ಧಾತು, ಬದುಕಿನ ವಿಧಾನ ಹೀಗಾಯಿತಲ್ಲಾ ಎಂದು ತುಂಬ ನೊಂದಿದ್ದ ರೆಂದು ಕಾಣುತ್ತದೆ. ಈಗಲೂ ತುಂಗಭದ್ರೆಯ ತಡಿಯಲ್ಲಿರುವ ಪುರಂದರ ಮಂಟಪದಲ್ಲಿ ಉಳಿದ ಕಾಲವನ್ನು ಭಜನೆಯಲ್ಲಿ ಕಳೆದರು. ತನ್ನಲ್ಲಿಯೂ ತಾವು ನಡಸಿದ ಜೀವನದ ರೀತಿಯಲ್ಲಿಯೂ ನಂಬಿಕೆ ಇದ್ದ ಕೆಲವು ಜನ ಅವರ ಸುತ್ತಮುತ್ತ ಇದ್ದರು. ರಕ್ತಾಕ್ಷಿ ಸಂವತ್ಸರದ ಪುಷ್ಯ ಮಾಸದ ಅಮಾವಾಸ್ಯೆಯಂದು ಚಿತ್ತದಲ್ಲಿ ವಿಷ್ಣು ಪಾದ, ತುಟಿಗಳ ಮೇಲೆ ಹರಿನಾಮ ಇರುವಂತೆ ತೀರಿಕೊಂಡರು.

ಅವರ ಹಾಡುಗಳಲ್ಲಿ ಇದೆಲ್ಲ ಲಿಖಿತವಾಗಿದೆ. ಅವರ ಬದುಕಿಗೆ ಒಂದು ಹೊಸ ತಿರುವನ್ನು ತಂದ ಅವರ ಮೊದಲ ಪದವೆಂದು ಆಧ್ಯಾತ್ಮಿಕವಾಗಿ ಹೇಳಬಹುದಾದ "ಆದದ್ದೆಲ್ಲ ಒಳಿತೇ ಆಯಿತು" ಎಂಬುದು ಅವರಲ್ಲಿ ಉಂಟಾದ ಮಾರ್ಪಾಡನ್ನು ಎಷ್ಟು ಒಳ್ಳೆಯದಾಯಿತು ಎಂಬ ಬದಲಾವಣೆ ಯನ್ನು ತಿಳಿಸುತ್ತದೆ. ಆಗ ಮಾತ್ರವೇ ಅಲ್ಲ, ಕಡೆಯ ಸಿದ್ಧಿಗೂ, ಕಡೆಗೆ ಅವರ ಜೀವನಕ್ಕೆ ಬಂದ ಒಂದು ಚರಿತಾರ್ಥತೆಯನ್ನು ಅವರು ಸಾಧಿಸಿದರು ಎಂಬುದನ್ನು ಕೂಡ ಅದು ಸೂಚಿಸುತ್ತದೆ. ಬದುಕು ಹೇಗೆ ಸುಧಾರಿತ ವಾಗಬಲ್ಲದು, ಹಣ್ಣಿನಂತೆ ಪಕ್ವವಾಗಬಲ್ಲದು, ತನ್ನನ್ನು ತಾನು ಶುದ್ಧಿ ಮಾಡಿಕೊಳ್ಳಬಲ್ಲದು, ಅದರ ಒಳಗೂ ಸಂಪನ್ನತೆಯಿಂದ ಒಳಿತಿನಿಂದ ತುಂಬಿಕೊಳ್ಳಬಲ್ಲುದು, ತನಗೂ ಸುತ್ತಲವರಿಗೂ ಹೇಗೆ ಶ್ರೇಯಸ್ಕರವಾಗ ಬಹುದು ಎಂಬುದನ್ನು ಈ ಒಟ್ಟು ವಿಧಾನ ನಿದರ್ಶಿಸುತ್ತದೆ. ಮನಸ್ಸಿನಲ್ಲಿ ಅವರ ಭಾವನೆ ಅನುಭವ ಹೇಗೆ ಹುಟ್ಟಿತು? ಅವರು ಹೇಳಿದ್ದೇನು? ಅವರು ಏನಾಗಿದ್ದರು, ಏನು ಮಾಡಿದರು? ಅವರ ಹಿಂದೆ ಅವರ ಪ್ರಧಾನ ಸ್ಮೃತಿ ಯಂತೆ ಏನು ಬಿಟ್ಟುಹೋದರು? ಅವರ ಸಲಹೆ ಏನು? ಗೀತವೇನು? ಎಂಬುದು ಒಂದು ದೀಪಸ್ತಂಭದಂತೆ ಎದ್ದು ನಿಂತು ಕಾಣುತ್ತದೆ. ಬದುಕಿನ

ಗಮ್ಯ ಇದು. ಅದಕ್ಕಿದು ದಾರಿ ಎಂದು ನಿರ್ದೇಶಿಸುವ ಕರೆಯ ಪ್ರದೇಶದ ದೇವಿಗೆಯಂತೆ ಅದು ಕಂಡುಬರುತ್ತದೆ. ಎಂದರೆ ಪಥ–ಪಂಥ, ಗಮ್ಯ–ಸಾಧನ ಸಿದ್ಧಿ ಇವುಗಳ ಚಿತ್ರಣದಲ್ಲಿ ಇದೇ ಮನುಷ್ಯ ಅಲ್ಲವೇ ಮೊದಲು 'ಬಿನ್ನಹಕೆ ಬಾಯಿಲ್ಲವಯ್ಯ ಅನಂತ ಅಪರಾಧ ಎನ್ನಲ್ಲಿ ಇರಲಾಗಿ' ಎಂದು ಅಂದಿದ್ದವರು? ನಡುಗಾಲದಲ್ಲಿ ಆಮೇಲೆ, ಈ ಲೋಕದ ಬದುಕಿನ ಸಂಗತಿಗಳು ಕ್ಷಣಿಕ ನಾಶವಾಗತಕ್ಕದ್ದು ಎಂದಿದ್ದರು. ಸಂಸಾರ ಹೇಸಿಕೆಯಾದ್ದು. ಬದುಕಿನಲ್ಲಿ ವಿಷ ಇದೆ, ಕೊಳೆಯಿದೆ ಎಂದದ್ದು? ಇದೇ ಇನ್ನೊಂದು ಸಲ ನುಡಿಯಿತು: "ಮಾನವ ಜನ್ಮ ದೊಡ್ಡದು. ಇದ ಹಾನಿ ಮಾಡಲುಬೇಡಿ ಹುಚ್ಚಪ್ಪಗಳಿರ!" ಎಂದು; ಅವರವರೇ ತಮ್ಮ ಬದುಕನ್ನು ಉಚ್ಚಗೊಳಿಸಿಕೊಳ್ಳಬೇಕು. ಯತ್ನವನ್ನೂ, ಬದುಕನ್ನೂ ದೊಡ್ಡದು ಮಾಡಿಕೊಳ್ಳಬೇಕು ಎಂದು, ಅವರಿಗೆ ತಿಳಿವು ಕೊಟ್ಟದ್ದೂ ಎಂದು; ಇನ್ನೊಂದು ಹಾಡಿನಲ್ಲಿ ಈಸಬೇಕು, ಅಷ್ಟೇ ಅಲ್ಲ, ಇದ್ದು ಜೈಸಬೇಕು ಎಂದಿದ್ದವರು. ಸ್ವಂತ ಪ್ರಯೋಜನವನ್ನು ಸ್ವಲ್ಪಮಟ್ಟಿಗೂ ಬಯಸದೆ ನಮ್ಮನ್ನು ನಾವು ಪ್ರತ್ಯೇಕವಾಗಿಟ್ಟುಕೊಳ್ಳಬೇಕು ಎಂದಿದ್ದವರು. ಎಂಥಾ ಸ್ಥಿತಿಯನ್ನು ಮುಟ್ಟಿದರೂ ನಡೆವುದೆಲ್ಲ ಹರಿಚಿತ್ತ. ಅದೊಂದೇ ನಿಜ ಎಂದೂ, ಅದಕ್ಕೆ ತಮ್ಮ ಬದುಕನ್ನೆಲ್ಲಾ ಸಮರ್ಪಿಸಿದವರು. ಅದನ್ನರಿತೇ, ಅಪರಾಧಿ ನಾನಲ್ಲ ಅಪರಾಧವೆನಗಿಲ್ಲ–ಎಂದು ಬಿಡುಗಡೆಯನ್ನು ಹೊಂದಿದರು. ಗಾಲಿ ಪೂರ್ತಿ ಒಂದು ಸುತ್ತು ತಿರುಗಿ ಬಂದು ನಿಂತಿದೆ ಇಂಥ ಗೀತೆಗಳಲ್ಲಿ.

ಅಂಥ ಸಾಧನೆಯ ಕಡೆಕಡೆಯ ಮಜಲಲ್ಲಿ ಮನಸ್ಸಿನ ಸ್ಥಿತಿ ಹೇಗಿರಬೇಕು? ಎಂಬುದನ್ನು ದಾಸರ ಅತ್ಯಂತ ಚೆಲುವಾದ ಒಂದು ಹಾಡು ವರ್ಣಿಸುತ್ತದೆ. "ಹಾಂಗೆ ಇರಬೇಕು ಸಂಸಾರದಲ್ಲಿ | ಹ್ಯಾಂಗೆ ಬರೆದಿತ್ತೊ ಪ್ರಾಚೀನದಲ್ಲಿ" ಎಂಬುದು ಅದು. ಮಾತುಗಳು, ಚಿತ್ರ, ಶಬ್ದ ಸುಭಗತೆ, ಅಕ್ಷರಗಳ ಅನುರಣನೆ, ಅಂತರ ಪ್ರಾಸ, ಅರ್ಥದ ಓಟ, ಸಂಚಾರ, ಉಕ್ತಿಯ ಅತ್ಯತಿಶಯ ಚೆಲವು, ಹಾಳತ, ಒಟ್ಟು ವಾಣಿಯ ಪರಮವಿಶದತೆ ಇವು ಕೆಲವೇ ಪಂಕ್ತಿಗಳ ಒಂದು ಹಾಡಾಗಿ, ಅರ್ಥವಾಗಿ, ಬದುಕಿನ

ನಿಲವಿನ ಮಹಾ ಅಭಿವ್ಯಂಜನೆಯಾಗಿ ಏನು ಮಾಡಬಲ್ಲದು. ಏನು ಮಾಡಲಾರದು ಎಂಬುದನ್ನು ತೋರಿಸುತ್ತದೆ.

ಹ್ಯಾಂಗೆ ಬರೆದಿತ್ತೊ ಪ್ರಾಚೀನದಲ್ಲಿ |
ಹಾಂಗೆ ಇರಬೇಕು ಸಂಸಾರದಲ್ಲಿ || ಅ ||
ಪಕ್ಷಿ ಅಂಗಳದಲ್ಲಿ ಬಂದು ಕೂತಂತೆ |
ಆ ಕ್ಷಣದಲಿ ಹಾರಿಹೋದಂತೆ || || ೧ ||
ನಾನಾ ಪರಿಯಲಿ ಸಂತೆ ನೆರೆದಂತೆ |
ನಾನಾ ಪಂಥವ ಹಿಡಿದು ಹೋದಂತೆ || || ೨ ||
ಮಕ್ಕಳಾಡಿ ಮನೆ ಕಟ್ಟಿದಂತೆ |
ಆಟ ಸಾಕೆಂದು ಅಳಿಸಿ ಪೋದಂತೆ || || ೩ ||
ವಸತಿಕಾರನು ವಸತಿ ಕಂಡಂತೆ |
ಹೊತ್ತಾರೆದ್ದು ಹೊರಟು ಹೋದಂತೆ || || ೪ ||
ಸಂಸಾರ ಪಾಶವ ನೀನೆ ಬಿಡಿಸಯ್ಯ |
ಕಂಸಾರಿ ಪುರಂದರ ವಿಠ್ಠಲರಾಯ || || ೫ ||

ಈ ಮಟ್ಟಕ್ಕೆ ಬರುವ ಪದ್ಯಗಳು ಲೋಕದಲ್ಲಿ ಹಲವಿಲ್ಲ. ಭಾರತದಲ್ಲಿ ಯಾವಾಗಲೂ ಸೂಚಿಸಿ ತೋರಿಸಿದ, ಮೇಲೆಂದೆಣಿಸಿದ ಮಾರ್ಗ ಇದು. ಎಂದಿನಂತೆಯೇ ಇಷ್ಟೆಲ್ಲವಿದ್ದೂ ಬದುಕು ಮಡ್ಡಿಯಾಗಿ, ಒರಟಾಗಿಯೇ ನಡೆದುಬಂದಿದೆ. ಇದನ್ನು ಹೇಳುವ ಅಗತ್ಯ ಇನ್ನೂ ಇದೆ. ಎಂದಿಗೂ ಎಲ್ಲಿಯೂ ಇದ್ದದ್ದೇ ಎಂಬುದನ್ನು ಮಾತ್ರ ತೋರಿಸುತ್ತದೆ. ಪುರಂದರ ದಾಸರಂಥ ಜೀವಗಳೆ ಇಂಥ ಜೀವನಾನುಭವವನ್ನು ಅದರರ್ಥವನ್ನು ಅಷ್ಟು ಚೊಕ್ಕವಾಗಿ ಸಂಪೂರ್ಣವಾಗಿ ಬರೆಯಬಲ್ಲರು! ಅವರು ತಮ್ಮ ಸಾಧನೆ ಯಲ್ಲಿ ಸಿದ್ಧಿ ಪಡೆದರೆಂಬುದು ಒಂದು ಪ್ರಮಾಣ; ಮಾನವ ಕುಲಕ್ಕೆ ಅವರ ಬದುಕು ಉದಾಹರಣೆ.

ಇದಕ್ಕೆ ಕೆಳಮಟ್ಟದ ಒಂದು ಹಾಡು 'ಖ್ಯಾತಿ ಬಾರದ ವಸ್ತು ಎಷ್ಟಿದ್ದ ರೇನು? ಹೋತನ ಕೊರಳಲ್ಲಿ ಮೊಲೆಯಿದ್ದರೇನು?' ಎಂದು ತೊಡಗು ತ್ತದೆ. ಇದನ್ನು ಮರ್ತ್ಯರ ಜೀವನಗಳಿಗೆ ವಿಸ್ತರಿಸಿ ಅರ್ಥ ದ್ಯೋತನೆ

ಮಾಡುತ್ತಾರೆ. ಕುಲ, ಸಂಪತ್ತು ಏನು ಮಾಡುತ್ತದೆ. ವಿದ್ಯೆ, ಶಕ್ತಿ, ಪ್ರಭಾವ, ಸ್ವಾಮ್ಯ ಏನು ಬೆಲೆಯವು? ಒಂದು ಶ್ರೇಯಸ್ಸು, ಶ್ರದ್ಧೆ, ವಿಶ್ವಾಸ, ಆತ್ಮಶಾಂತಿ ದೊರಕದಾದರೆ ಪ್ರಪಂಚವನ್ನೆಲ್ಲ ಗೆದ್ದು ಏನು ಪ್ರಯೋಜನ. ಆತ್ಮವನ್ನು ಕಳೆದುಕೊಂಡರೆ ಏನು ಲಾಭ ಪಡೆದುಕೊಂಡೀಯೆ ಎಂಬ ಬೈಬಲ್ಲಿನ ಮಾತನ್ನು ಅಗ್ಗವಾಗಿ ನುಡಿಯಲಿಲ್ಲ; ಮೌಲ್ಯದ ಮಾನದಂಡ; ಪ್ರಮಾಣಗಳ ಸೂಚಿಕೆ.

ತಿರುಪತಿಯಲ್ಲಿ ಒಂದು ಹಾಡನ್ನು ಹೇಳಿದರೆಂದು ಹೇಳುತ್ತಾರೆ, ಅವರು ತೀರಿಕೊಳ್ಳುವ ಮುಂಚೆ ಇಂಥ ಕಡೆಯ ಹಾಡನ್ನು ಹಾಡಿಕೊಂಡಿರಬೇಕು. ತನ್ನ ದೇವರ ಸಾಕ್ಷಾತ್ ಸನ್ನಿಧಿಯಲ್ಲಿ ಕುಳಿತು ಈ ಸುಳಾದಿಯನ್ನು ಹಾಡಿರಬಹುದು, ಎಲ್ಲಾದರೂ ಹಾಡಿಕೊಂಡಿರಲಿ—"ಆಪಾದ ಆನಂದ ಆನಖ ಆನಂದ" ಎಂದು ದೇಹದ ಅಂಗಾಂಗಗಳ ಮೇಲೆ ಕಣ್ಣು ಮನಸ್ಸು ಆಡಿ ಮನಸ್ಸು ಹರ್ಷಪಡುತ್ತದೆ. ಆ ಸುಳಾದಿ ಮುಗಿಯುವಾಗ ಜ್ಞಾನ, ವಿಜ್ಞಾನ, ಸುಗಂಧ ಸುಖದೇಹ ಆನಂದವಾಗಿ ಪುರಂದರ ವಿಠಲನ ಅವ ಯವಗಳೆಲ್ಲ ಎಂದು. ಇಂಥದೇ ಇನ್ನೊಂದು ವರ್ಣನೆ. ಈ ಕಡೆಯ ಘಟ್ಟದಲ್ಲಿ ಹೀಗೆ ಮುಗಿಯುತ್ತದೆ. ಪರಿಪೂರ್ಣ ಜ್ಞಾನ, ಪೂರ್ಣಾನಂದ ಪರಿಪೂರ್ಣ | ಪುರಂದರವಿಠಲ........|| ಹಾಗೆಯೇ ಪಾದನಖ—ಪರಿಪೂರ್ಣ ಎಂದು ಹಾಡು ಮುಗಿಯುತ್ತದೆ. ಇಂಥ ಸಾಲು ದೇವರ ಅಂಗಾಂಗಗಳ ಪ್ರತ್ಯಂಶವನ್ನು ಸಂಪೂರ್ಣವಾಗಿ ಎಣಿಸುತ್ತ ಮನಸ್ಸೂ ಆತ್ಮವೂ | ವಿಶ್ವತೋ ಮುಖಾಯ, ವಿಶ್ವತೋ ಬಾಹುವಾಗಿ | ವಿಶ್ವತೋ ಚಕ್ಷುವಾಗಿ ಪುರಂದರ ವಿಠಲ, ತಾನಿಹ ಕಾಣಿರೊ. ಇದು ನಮ್ಮ ಮನಸ್ಸಿಗೆ ವೇದದ ಮಾತು ಗಳನ್ನು ನೆನಪಿಗೆ ತರುತ್ತವೆ. ಆವಾವ ಕಾಲದಲ್ಲಿ ಆಪಾವ ದೇಶಗಳಲ್ಲಿ | ಶ್ರೀವಲ್ಲಭ ಪರಿಪೂರ್ಣನ ಭೂವಲ್ಲಭ ಪರಿಪೂರ್ಣನ | ಸಕಲಲೋಕ ದಲ್ಲೊಬ್ಬನೇ ಪುರಂದರ ವಿಠಲನೇ ಪ್ರಭು ಪಾದನಖ ಪರಿಪೂರ್ಣ—ಮಾತು ಮಾತುಗಳ ಒಯ್ಯಲು ನಾಡಿನ ಸಂಪ್ರದಾಯದ ಒಂದು ಭಾಗವಾಗಿ ಅವನ್ನು ಅಂಥ ವ್ಯಕ್ತಿಯೊಬ್ಬರು ಸ್ತೋತ್ರವಾಗಿ ಒಂದು ಗುಣದ ಒಂದು ಪುಣ್ಯದ ಲಕ್ಷಣವಾಗಿ ಒಂದು ದರ್ಶನದ ಸ್ಥಿತಿಯಾಗಿ ಎಂಬಂತೆ ನುಡಿದರು. ಪ್ರತಿ ಯೊಂದು ಕಾಲದಲ್ಲಿಯೂ ಭಾರತ ಯಾವುದನ್ನು ಸತ್ಯವೆಂದು ಹಿಡಿಯಿತೊ

ನಂಬಿತೊ, ಅತ್ಯುನ್ನತ ಅನುಭವವೆಂದು ನಚ್ಚಿಕೊಂಡಿತ್ತೊ ಎಂಬುದರ ಮುದ್ರೆ ಒತ್ತಿದಂತಾಗುತ್ತದೆ.

'ಅಂಬುಧಿ ತೊಟ್ಟಿಲಾಗಿ ಆಲದೆಲೆಯಾಗಿ' ಎಂದು ತೊಡಗುವುದು, ಜೋ, ಜೋ, ಸುಳಾದಿ; ಅನಂತ ಮೃದು ಹಾಸಿಗೆಯಾಗಿ........ವೇದ ವೇಣುಗಳಾಗಿ ವೇದಾಂತದೇವಿಯರು | ಪಾಡಿ ಮುದ್ದಾಡಿ ತೂಗುವ ರಾಯ| ಅಜಾತ, ಅಜನಪಿತ........| ಅಗಮ್ಯ........ಶಿಶುವು ಆಗಿ........ಇನ್ನೆಂಥ ಪರಮಾನಂದವನುಂಬರೊ | ಪುರಂದರ ವಿಠಲನೊಬ್ಬನೇ ಬಲ್ಲನೊ | ಕಡೆಯಲ್ಲಿ ಆಕೃತಿಯೂ ಜೊತೆಯಾಗಿ "ಅನಂತ ಮೂರುತಿ, ಅನಂತ ಕೀರುತಿ | ಅನಂತ ನಾಮಕ ಪುರಂದರ ವಿಠಲ ಎಂದು ಮುಗಿಯುತ್ತದೆ. ದೇಹವ ಮಾಡಿದೆ. ದೇಹಿಯ ಮಾಡಿದೆ | ದೇಹ ಸಂಬಂಧವ ಮಾಡಿದೆ–ಕೂಡಿದೆ| ದೇಹವು ತಾನೆಂಬ ಭ್ರಮೆಯನು ಮಾಡಿದೆ | ಶ್ರೀಹರಿ ವೃಥಾ ಪ್ರಲಾಪ | ದೇವ ನೀನಾದೆಯೆಲೊ ದೇಹಿ ನಾನಾಗೆನು | ಶ್ರೀಧರನಾಮಕ ಪುರಂದರ ವಿಠಲ ಅನಂತನಾಭ ಪುರಂದರ ವಿಠಲ | ಎಂಬಂಥ ಮಾತು ಅಂಥ ಸನ್ನಿವೇಶದ ಬಾಳಿನ ಒಂದು ಸಾಫಲ್ಯ. ಅವರ ಗಂಡುಮಕ್ಕಳು, ಹೆಂಡತಿ ಅಪ್ಪಣ್ಣದಾಸನಂಥ ಇತರರು ಆಗ ಸುತ್ತ ಕುಳಿತಿದ್ದಿರಬೇಕು. ದಾಸರ ಪಾರ್ಥಿವ ಶರೀರ ಕೊನೆಯುಸಿರೆಳೆದು ಬಿಡುಗಡೆ ಹೊಂದಿದ ಸಂದರ್ಭದಲ್ಲಿ ಭಜನೆ ಮಾಡುತ್ತ, ಹರಿಸ್ತೋತ್ರ ಮಾಡುತ್ತ, ಅವರವೇ ಹಾಡುಗಳನ್ನೂ ಸುಳಾದಿಗಳನ್ನೂ ಹಾಡುತ್ತ ಕುಳಿತಿದ್ದಿರಬೇಕು. ಅವರ ದಿವ್ಯ ಸ್ಮಾರಕವಾಗಿ ಅಲ್ಲಿ ಒಂದು ವೃಂದಾವನವನ್ನು ಕಟ್ಟಿದ್ದಾರೆ. ಈ ಹರಿದಾಸರ ನೆನಪಿಗೆ, ತೀರ್ಥಕ್ಷೇತ್ರದಂತೆ ಆ ಸ್ಥಳ ಪವಿತ್ರವಾಗಿದೆ ತುಂಗಭದ್ರೆಯ ದಂಡೆಯಲ್ಲಿ. ವಿಜಯವಿಠಲ ದೇವಸ್ಥಾನದ ಸಮೀಪದಲ್ಲಿ ದಾಸರು ತಮ್ಮ ಕಡೆಯ ದಿವಸಗಳನ್ನು ಕಳೆದರು. ಅವರಂಥ ಬದುಕು ಪುರಾಣವಲ್ಲ, ಕಟ್ಟುಕಥೆಯಲ್ಲ ವಾಸ್ತವ ಬದುಕು–ಎಂದು ಲೋಕಕ್ಕೆ ಸಾರುವಂತೆ. ಪುರಂದರದಾಸರು ಕೇವಲ ಒಬ್ಬ ಮನುಷ್ಯರು ಮಾತ್ರ. ಸ್ವಸಂಪೂರ್ಣತೆಯನ್ನು ಸಾಧಿಸಿ ಅದರಲ್ಲಿ ಸಿದ್ಧಿ ಪಡೆದರೆಂದು ಈ ಸಂಗತಿ ತಿಳಿಸುತ್ತದೆ.

ಗಮ್ಯವೂ ತೆರೆದಿದೆ. ಮಾರ್ಗವೂ ತೆರೆದಿದೆ. ಅಥವಾ, ಪಥ, ಪಂಥ ಈ ಎರಡೂ ಅರ್ಥವನ್ನು ಸೂಚಿಸುವ ಒಂದೇ ಧಾತುವಿನ ಪದಗಳು.